ವುದರ ಮೂಲಕ "ಶರೀರ ಸಂಸಾರ ಭೋಗನಿರ್ವೇಗ" (೨-೧೧೩)ವನ್ನು ಘೋಷಿಸು ತ್ತಾನೆ. ಧರ್ಮಭಾವನೆಗೆ ದಾರಿಮಾಡಿಕೊಡುವುದೇ ಈ ಎಲ್ಲದರ ಉದ್ದೇಶವಾಗಿರುತ್ತದೆ.

ಧರ್ಮಾವಲಂಬನೆಗಾಗಿ ಜೀವಸಂಬೋಧನೆ ಮಾಡುವ ಪದ್ಯಗಳು ಇಲ್ಲಿ ಅತ್ಯಂತ ಮುಖ್ಯವಾದವು. ಇವುಗಳಲ್ಲಿ ಧರ್ಮದ ಸಾರವನ್ನೇ ಇಡಲಾಗಿದೆ. ಅಭಿವ್ಯಕ್ತಿಯ ದೃಷ್ಟಿಯಿಂದ ಈ ಪದ್ಯಗಳು ತುಂಬ ನಾಟಕೀಯವಾಗಿದ್ದು, ಕೇಳುವ ಕಿವಿಗಳಿಗೆ ಧರ್ಮ ಬೋಧನೆಯನ್ನು ನೇರವಾಗಿ ಒಯ್ಯುತ್ತವೆ. ಹೇಳುವ ಮಾತುಗಳು ಅಷ್ಟೇ ಹೃದಯ ಸ್ಪರ್ಶಿಯಾಗಿವೆ. ಇದಕ್ಕೆ ಈ ಪದ್ಯ (೨-೬೩, ಉದಾಹರಣೆ:

ಕಡೆಯಿಲ್ಲದ ಸಂಸಾರದ
ಕಡೆಗಾಣಲ್ಬಗೆವೆಯಪ್ಪೊಡೆನ್ನುಕ್ತಿಗೊಡಂ
ಬಡು ಜೀವ ನಿನ್ನ ಕಾಲಂ
ಪಿಡಿವೆಂ ಧರ್ಮಮನೆ ಮಗುಟ್ದಿ ಬಲ್ಪಿಡಿವಿಡಿಯಾ

ಇಲ್ಲಿಯ ಆರ್ತತೆ ಗಮನಿಸುವಂಥದು. ವಿಷಾದದ ಮೂರ್ತರೂಪ ಈ ಪದ್ಯ. ಜೀವವನ್ನು ಎದುರಿಗಿರಿಸಿಕೊಂಡು ಹೇಳುವ ರೀತಿಯು ಇದರ ಬರೆವಣಿಗೆ ತುಂಬ ಆಪ್ತವಾದುದೇ ಸರಿ. ರನ್ನನ ಸಹಜ ಬರೆವಣಿಗೆಯ ಓಘವನ್ನು ಇಂಥ ಪದ್ಯಗಳಲ್ಲಿ ಕಾಣಲು ಸಾಧ್ಯ. ಇಲ್ಲಿ ಪ್ರಸ್ತಾಪಿತವಾಗಿರುವ 'ಧರ್ಮ' ಕವಿಯೇ ಹೇಳುವಂತೆ ತಲೆಕಾಯುವಂಥದು, 'ಉಭಯಭವ'ಕ್ಕೂ ಮಾರ್ಗದರ್ಶಿಯಾಗುವಂಥದು. ಈ 'ಧರ್ಮ' 'ಜಿನಧರ್ಮ' ವಲ್ಲದೆ ಬೇರಲ್ಲ; ಹಾಗೆಂದಾಗ ಕವಿಯ ಸೈದ್ಧಾಂತಿಕ ಚೌಕಟ್ಟು ಚಿಕ್ಕದಾಗುತ್ತದೆ, ಮಿತಿಗೊಳ್ಳುವುದು ಸಹಜ. ಇಂಥ ಹಲವಾರು ಚೆನ್ನಾದ ಪದ್ಯಗಳೇ ಇವೆ. ಕವಿಯ 'ಧರ್ಮಶ್ರದ್ಧೆ' ಈ ಪದ್ಯಗಳಲ್ಲೆಲ್ಲ ತುಂಬಿ ತುಳುಕಿದೆ. ಈ ಪದ್ಯಗಳನ್ನು ನೋಡಿ (೨-೫೭, ೫೮) :

ಮುನಿದುಯ್ವ ಜವಂಗಂ ಮಾ
ಯೆನಲಮ್ಮುವರಿಲ್ಲ ಬಗೆಯ ನಿನಗಿನ್ನಾರ್ಮಂ
ಜಿನಧರ್ಮಮೊಂದೆ ಜೀವನೆ
ನೆನೆಗಡ ಲೋಕತ್ರಯಕ್ಕೆ ದಿನನಂ ಜಿನನಂ

ಮತಿಗೆಟ್ಟು ಜೀವಧರ್ಮಾ
ಮೃತಮುಂ ಸೇವಿಸದಧರ್ಮಮುಂ ಸೇವಿಸಿ ದು
ರ್ಗತಿಗಿಟ್ದಿದೀ ಜವನೆಂಬಟ್ಟಿ
ಸಿತಿಂಬ ದೈವಕ್ಕೆ ಪೋಗಿ ಪಾಟಿಂಬಡುವೈ

ಜೀವವನ್ನು ಒಯ್ಯುವ ಯಮನನ್ನು ತಡೆಯುವರಿಲ್ಲ ಎಂಬುದು ಸರಿಯೇ. ಇಂಥ ಯಮನನ್ನು 'ಅಱಿಸಿ ತಿಂಬ ದೈವ' ಎಂದು ವರ್ಣಿಸಿರುವುದು ಸುಂದರವಾಗಿದೆ ಮತ್ತು ಯಥೋಚಿತವಾಗಿದೆ. ಹುಡುಕಿಕೊಂಡು ಹೋಗುವ ಸಾವಿನ ಸ್ವರೂಪವನ್ನೂ, ಅದರಿಂದ ತಪ್ಪಿಸಿಕೊಳ್ಳಬೇಕೆಂಬ ಜೀವದ ಸಂಬೋಧನೆಯನ್ನೂ ಚೆನ್ನಾದ ಉಕ್ತಿಯಲ್ಲಿ ಹಿಡಿದಿಡಲಾಗಿದೆ. ಇದಕ್ಕೆ 'ಆಶ್ರಯ' 'ಜಿನಧರ್ಮವೊಂದೆ' ಎಂದು ಹೇಳುವುದು ಉದ್ದೇಶಿತ ಮಾರ್ಗವನ್ನು ಹುಡುಕಿಕೊಟ್ಟಂತಾದರೂ, ಉಳಿದವಕ್ಕಿಲ್ಲ ಎಂಬ ಅರ್ಥ ಹೊರಟು ಸೀಮಿತವಾಗುವುದುಂಟು. ಈ ಸಂದರ್ಭದಲ್ಲಿ ಜೈನಧರ್ಮದ ಪರಮೋತ್ಕೃಷ್ಟತೆಯನ್ನು ಉಳಿದ ಧರ್ಮಗಳೊಡನೆ ಹೋಲಿಸಿ ಪ್ರತಿಪಾದಿಸುವ ಕವಿಯ ದೃಷ್ಟಿಯನ್ನು ನೋಡುತ್ತೇವೆ. ಕವಿ ತನ್ನ ಧರ್ಮವನ್ನು ಎತ್ತಿಹಿಡಿಯುವ ಆತುರದಲ್ಲಿ ಉಳಿದ ಧರ್ಮಗಳನ್ನು ಕೀಳಾಗಿ ಕಾಣುವುದು ಸರಿಯಲ್ಲವೇನೋ ಎನಿಸುತ್ತದೆ. ಜೀವದ ಧರ್ಮಾನುರಕ್ತಿಯನ್ನು ಕುರಿತು ಹೇಳುವ ಸಂದರ್ಭದಲ್ಲಿ ಮತಜಿಜ್ಞಾಸೆ ಅನಗತ್ಯವಾಗಿತ್ತೆಂದೇ ತೋರುವುದು. ಅಂಥ ಎರಡು ಪದ್ಯಗಳನ್ನು (೨–೬೪, ೭೭)ಗಮನಿಸಿ :

ಪೊಲ್ಲಮೆ ಪರಮತದೊಳ್ ಫಲ
ಮಿಲ್ಲವಱಿಂದೊಳ್ತೊಡರ್ದು ಕಿಡದಿರೆಲೆ ಜೀವನೆ ನೀ
ನಲ್ಲಿಯೆ ತೊಡರ್ವಯ್ ತಿಂಬರ
ನಲ್ಲದೆ ಕುಱಿ ಮಚ್ಚದೆಂಬ ನುಡಿ ತಪ್ಪುಗುಮೇ

ಮೇಲೆನಿಸುವ ಜಿನಧರ್ಮಂ
ಪೋಲದು ಪೆಱಪೆಱರ ಪೇೞ್ವ ಧರ್ಮದ ತೆಱನಂ
ಪಾಲೆಂಬ ತೆಱದೆ ಪಶುವಿನ
ಪಾಲಂ ಪೋಲುವುದೆ ನಾಯ ಕಳ್ಳಿಯ ಪಾಲ್ಗಳ್

ಪರಮತಗಳಲ್ಲಿ ದೋಷವನ್ನು ಕಾಣುವ ಕಣ್ಣು ಕವಿಯದು. ಅವುಗಳಲ್ಲಿ ಸೇರಿಕೊಂಡು ಕೆಡಬೇಡವೆಂಬ ಉಪದೇಶ ಜೀವನಿಗೆ. ಇಲ್ಲಿ ಬಳಕೆಗೊಂಡಿರುವ 'ತಿಂಬರನಲ್ಲದೆ ಕುಱಿ ಮಚ್ಚದು' ಎಂಬುದು ಒಂದು ಗಾದೆಯಮಾತು, ಇದರಿಂದ ಅಭಿವ್ಯಕ್ತಿ ಶಕ್ತಗೊಂಡಿದೆ. ಮೇಲಾದ ಜೈನಧರ್ಮ ಉಳಿದ ಧರ್ಮಗಳ ರೀತಿಯನ್ನು ಹೋಲುವುದಿಲ್ಲವೆಂದು ಕವಿ ಹೇಳುತ್ತಾನೆ. ಆದರೆ ತನ್ನ ಧರ್ಮವನ್ನು ಹಸುವಿನ ಹಾಲಿಗೂ, ಉಳಿದವನ್ನು ನಾಯಿ ಮತ್ತು ಕಳ್ಳಿಯ ಹಾಲಿಗೂ ಹೋಲಿಸಿರುವುದು ಉಚಿತವಲ್ಲ. ಇಲ್ಲಿಯ ಇಡೀ ದೃಷ್ಟಿಯೇ ಸರಿಯಲ್ಲವೆನಿಸುತ್ತದೆ. ಜೀವಸಂಬೋಧನೆಯಲ್ಲಿ ಕವಿ 'ಧಾರ್ಮಿಕ' (religious)ನಾಗುತ್ತಾನೆಯೇ ಹೊರತು, 'ಆಧ್ಯಾತ್ಮಿಕ' (spiritual) ನಾಗುವುದಿಲ್ಲ. ಹಾಗೆ ನೋಡಿದರೆ, ನಮ್ಮ ಪ್ರಾಚೀನ ಕವಿಗಳಿಗೆ ಶುದ್ಧ ಆಧ್ಯಾತ್ಮಿಕ ದೃಷ್ಟಿ ಸಾಧ್ಯವಿಲ್ಲವೇನೋ ಎನಿಸುತ್ತದೆ.

ಜೀವದ ಧರ್ಮಾವಲಂಬನೆಗೆ ಜಿನಧರ್ಮವೊಂದೇ ಆಶ್ರಯಸ್ಥಾನವೆಂಬ ನಿಲುವನ್ನು ಆಧುನಿಕ ಮನಸ್ಸು ಒಪ್ಪದಿದ್ದರೂ, ಕವಿಯ ತನ್ಮಯತೆಯನ್ನು ಪ್ರಶ್ನಿಸುವ ಹಾಗಿಲ್ಲ. ವಿಮಲವಾಹನ ತನ್ನ ಜೀವವನ್ನು ಸಂಬೋಧಿಸಿ ಹೇಳುತ್ತಿರುವ ರೀತಿ ಇದಾದುದರಿಂದ, ಅವನ 'ಶ್ರದ್ಧೆ'ಗನುಗುಣವಾಗಿ ಇದು ಅನಿವಾರ್ಯವೆಂದು ಸಮರ್ಥಿಸಲೂ ಬಹುದು. ಆದರೆ ವಿಮಲವಾಹನನ ವೈರಾಗ್ಯವನ್ನು ನೆಪವಾಗಿರಿಸಿಕೊಂಡು ಕವಿಯೇ ತನ್ನ ಭಾವನೆಗಳನ್ನು ಹೇಳಿದ್ದಾನೆ ಎಂದು ಶಂಕಿಸಲೂಬಹುದು. ಭಾವಗೀತಸದೃಶವಾಗಿರುವ ಈ ಭಾಗದಲ್ಲಿ ಕವಿಯ ಆತ್ಮಾವಲೋಕನವಿರುವುದು ಖಚಿತ. ಈ ಹೇಳಿಕೆಗಳನ್ನು ನೋಡಿ : "ವಿಮಲವಾಹನನ ಸಂಸಾರವಿಮುಖತೆಯನ್ನು ಬಣ್ಣಿಸುವ ನೆಪದಲ್ಲಿ ಅವನು (ರನ್ನ) ತನ್ನ ಭಾವನೆಗಳನ್ನೇ ತೀವ್ರವಾಗಿ ಅಭಿವ್ಯಕ್ತಿಗೊಳಿಸಿರುವಂತೆ ತೋರುತ್ತದೆ";[36] "ವಿಮಲವಾಹನ ನಿಮಿತ್ತವಾಗಿ ಇಲ್ಲಿ ಕವಿಯ ಸ್ವಾತ್ಮಚಿಂತನೆಯೇ ಸ್ವಗತಲಹರಿಯಾಗಿ ಹರಿದಿದೆ ಎನಿಸುವುದು."[37] ಏನೇ ಇರಲಿ, ಸಾವಿನ ನೆಲೆಯಲ್ಲಿ ನಿಂತು ಬದುಕನ್ನು ಪರಿಶೀಲಿಸಿದಾಗ ಬೀಳುವ ಕೊರತೆಯನ್ನು ಧರ್ಮದ ಮೂಲಕ ತುಂಬುವ ಕೆಲಸವನ್ನು ಕವಿ ಈ ಪದ್ಯಗಳಲ್ಲಿ ಮಾಡಿದ್ದಾನೆ. ಇಡೀ 'ಅಜಿತಪುರಾಣ' ದಲ್ಲಿಯೇ ಇದೊಂದು ಅತಿಶಯದ ಭಾಗ. ಕವಿಯ ಸ್ವೋಪಜ್ಞತೆಯನ್ನೂ ಕಾವ್ಯ ಸಾಮರ್ಥ್ಯವನ್ನೂ ಇಂಥ ಕಡೆ ಸಾಕಷ್ಟು ಪ್ರಮಾಣದಲ್ಲಿ ಕಾಣಬಹುದಾಗಿದೆ.

'ಅಜಿತಪುರಾಣ'ದಲ್ಲಿ ಅಜಿತತೀರ್ಥಂಕರ ಕೇಂದ್ರವ್ಯಕ್ತಿಯಾಗಿರುವುದರಿಂದ, ಸಹಜವಾಗಿಯೇ ಅವನ ವೈರಾಗ್ಯ ನಿರೂಪಣೆ ಇನ್ನೂ ಮೇಲಾಗಿ ಚಿತ್ರಿತವಾಗಿರಬೇಕೆಂದು ನಿರೀಕ್ಷಿಸುತ್ತೇವೆ. ಆದರೆ ವಿಮಲವಾಹನನ ಚಿತ್ರಣದಲ್ಲಿನ ಕಲಾತ್ಮಕತೆ, ತೀವ್ರತೆ, ಆಪ್ತತೆಗಳು ಇಲ್ಲಿ ದೊರೆಯದೆಹೋಗಿವೆ. ಅಜಿತತೀರ್ಥಂಕರನ ಪಂಚಕಲ್ಯಾಣಗಳ ದೀರ್ಘ ವಿವರಗಳಲ್ಲಿ ಕವಿ ತೊಡಗಿಕೊಂಡಿರುವುದು ಇದಕ್ಕೆ ಬಹುತೇಕ ಕಾರಣವಿರಬಹುದು. ಜೊತೆಗೆ, ಅಜಿತ ಮಾಗಿದ ಜೀವವಾಗಿರುವುದರಿಂದ ವಿಮಲವಾಹನನಿಗಾದ ತಳಮಳ ಇವನಿಗೆ ಅಗತ್ಯವಿರಲಿಲ್ಲವೆಂದು ಕವಿ ಭಾವಿಸಿರಲು ಸಾಕು. ಈ ಕಾರಣದಿಂದಾಗಿಯೊ ಏನೊ ಕವಿ ಅಜಿತನಾಥನನ್ನು ಮೌನಿಯಾಗಿಸಿದ್ದಾನೆ. ಇದರಿಂದ ಸಮಸ್ಯೆಯನ್ನು ಪರಿಹರಿಸಿದಂತಾಗುವುದಿಲ್ಲ. ಅಜಿತನ ಪೂರ್ವಭವದ ವೈರಾಗ್ಯವನ್ನು ಅದ್ಭುತವಾಗಿ ಕಡೆದ ಕವಿ, ಸ್ವತಃ ತೀರ್ಥಂಕರನ ವೈರಾಗ್ಯಸಂದರ್ಭದಲ್ಲಿ ಹೀಗೇಕೆ ಮಾಡಿದ ಎಂದು ಓದುಗನಿಗೆ ಆಶ್ಚರ್ಯವಾಗುತ್ತದೆ.

---

36 ಸಿ.ಪಿ.ಕೆ., ರನ್ನಪರೀಕ್ಷೆ, ಪು. ೧೯.

37 ಜಿ. ವರದರಾಜರಾವ್, ಕನ್ನಡ ಅಧ್ಯಯನ ಸಂಸ್ಥೆಯ 'ಕನ್ನಡ ಸಾಹಿತ್ಯ ಚರಿತ್ರೆ', ಪು. ೬೧೦.

ಅಜಿತನ ಪಕ್ವ ವ್ಯಕ್ತಿತ್ವದಲ್ಲಿ ಕವಿಗೆ ಸಂದೇಹವೇನೂ ಇಲ್ಲ. ಅಜಿತನ ವಿರಕ್ತಿ ಒಂದು ಮಹಾಕಾರ್ಯಕ್ಕೆ ಕಾರಣವಾಗುವಂಥದು. ಇಷ್ಟಾದರೂ ಅಜಿತನ ವೈರಾಗ್ಯ ವನ್ನು ಜಾಗೃತಗೊಳಿಸಲು ಬಾಹ್ಯಾಘಾತಗಳು ಬೇಕಾದವೇಕೆ ? ಅಂತಹ ನೆಪಗಳು ಸಂಭವಿಸದೆ ಅವನಲ್ಲಿ ವೈರಾಗ್ಯ ಆವಿರ್ಭವಿಸಲು ಸಾಧ್ಯವಿರಲಿಲ್ಲವೆಂಬಂತೆ ಕಥೆಯ ನಿರೂಪಣೆ ಇದೆ. ಆದರೆ, ಕವಿ ಇಲ್ಲಿ ಪರಂಪರೆ ಏನು ಹೇಳುತ್ತದೆ ಎಂದಷ್ಟೇ ಗಮನಿಸು ತ್ತಾನೆ, ವೈಯಕ್ತಿಕ ನೆಲೆಯಲ್ಲಿ ನಿಂತು ಆಲೋಚಿಸುವುದನ್ನಲ್ಲ. ಅಜಿತನ ವ್ಯಕ್ತಿತ್ವ ಪಕ್ವತೆಯನ್ನು ಪದ್ಯವೊಂದರಲ್ಲಿ (೫-೬೯) ಸ್ಪಷ್ಟವಾಗಿ ವಿವರಿಸಿದ್ದಾನೆ :

ಅವಧಿಮತಿಶ್ರುತಬೋಧಂ
ಗವಗತತತ್ತ್ವಂಗೆ ಗುರುಗೆ ವಿದ್ಯಾಗುರು ಸಂ
ಭವಿಸಂ ದೀಕ್ಷಾಗುರು ಸಂ
ಭವಿಸನುಮೆನೆ ತನಗೆ ತಾನೆ ಗುರುವಾಗಿರ್ಪಂ

ಇದರ ಪ್ರಕಾರ ಅಜಿತ ಮತಿ, ಶ್ರುತಿ, ಅವಧಿಜ್ಞಾನವನ್ನು ಹುಟ್ಟಿದಾರಭ್ಯ ಹೊಂದಿ ದವನು, ಎಲ್ಲ ತತ್ತ್ವಗಳನ್ನು ಬಲ್ಲವನು, ತನಗೆ ತಾನೆ ಗುರುವಾಗಿದ್ದವನು ; ಇಂಥವನಿಗೆ ವಿದ್ಯಾಗುರುವಾಗಲಿ, ದೀಕ್ಷಾಗುರುವಾಗಲಿ ಅಗತ್ಯವಿರಲಿಲ್ಲ. ಇದಕ್ಕೆ ಪೂರಕವೆನ್ನು ವಂತೆ, "ವೀತರಾಗನುಮಪ್ಪುದಱಿಂ ಸಂಸಾರ ಶರೀರ ಭೋಗ ವೈರಾಗ್ಯ ಭಾವನೆಗಳಂ ಭಾವಿಸುತ್ತಿರ್ಪ" (೬-೩೬ವ) ಎಂಬ ಮಾತಿದೆ. ಅಂದರೆ ಅವನು ಸಜಹವಾಗಿ ವಿರಕ್ತ ಭಾವನೆಯುಳ್ಳವನೆಂದು ಅರ್ಥವಾಗುವುದು ಹೀಗೆ ಹೇಳುವ ಕಾವ್ಯವೇ ಅಜಿತನ ವೈರಾಗ್ಯಕ್ಕೆ ಉಲ್ಕಾಪಾತವನ್ನು ಪ್ರಮುಖ ಕಾರಣವನ್ನಾಗಿ ಕೊಟ್ಟಿದೆ ; ಇನ್ನೂ ಮುಂದುವರಿದು ಲೋಕಾಂತಿಕ ದೇವರು ಬಂದು ಇವನಲ್ಲಿ ತಪೋಭಾವನೆಯನು ಪ್ರಚೋದಿಸಿದರು ಎಂದೂ ಇದೆ. ಇದರಿಂದ ಕಾವ್ಯದಲ್ಲಿಯೇ ಒಂದು ದ್ವಂದ್ವವಿರು' ವಂತೆ ಭಾಸವಾಗಬಹುದು. ಆದರೆ ಇದಕ್ಕೆ ಕಾರಣಗಳನ್ನು ಹೇಳಬಹುದೆನಿಸುತ್ತದೆ. ಲೋಕದ ಮಾಯಾವರಣಗಳನ್ನು ಭೇದಿಸಿ ಹೊರಬರಲು ಇಂತಹ ಆಕಸ್ಮಿಕಗಳು ಅನಿವಾರ್ಯವೆನ್ನುವುದು ಒಂದು; ಇಂತಹ ನೆಪಗಳನ್ನು ಸಂಕೇತಗಳೆಂದೊ ತಂತ್ರಗಳೆಂದೊ ಭಾವಿಸುವುದು ಇನ್ನೊಂದು. ಆದ್ದರಿಂದ ಅಜಿತನ ವೈರಾಗ್ಯಪ್ರಸಂಗವನ್ನು ಗಂಭೀರ ವಾಗಿ ಚಿತ್ರಿಸುವುದರಲ್ಲಿ ಕವಿ ಸಫಲವಾಗಿದ್ದಾನೆಂದೇ ಹೇಳಬೇಕು. ಆದರೆ ಈ ಚಿತ್ರಣ ದಲ್ಲಿ ಕವಿಯ ಸೂಕ್ಷ್ಮಸಂವೇದನೆ ವ್ಯಕ್ತವಾಗಿಲ್ಲವೆಂದು ಮಾತ್ರ ಹೇಳಲಡ್ಡಿಯಿಲ್ಲ. ವೈರಾಗ್ಯ ನಿರೂಪಣೆಯಲ್ಲಿ ಪಂಪ ರನ್ನರು ಸ್ವಲ್ಪಮಟ್ಟಿಗಾದರೂ ಭಿನ್ನವಾಗುತ್ತಾರೆ. ಪಂಪನಲ್ಲಿ ವೈರಾಗ್ಯದ ಹಿನ್ನೆಲೆಯಲ್ಲಿ ಭೋಗಜೀವನದ ಚಿತ್ರಣವಿದ್ದರೆ, ರನ್ನನಲ್ಲಿ ಅದು ಕಾಣಿಸದು. "ರನ್ನನ ಪದ್ಯಗಳಲ್ಲಿ ಶೃಂಗಾರದ ಹಿನ್ನೆಲೆಯೇನೂ ಇಲ್ಲದೆ ಅಜಿತನಾಥನ

ಧಾರ್ಮಿಕ ವ್ಯಕ್ತಿತ್ವವೆ ಎಲ್ಲ ವಿಶೇಷಣಗಳಲ್ಲೂ ಸೂಚಿತವಾಗುವುದರಿಂದ, ಇಂತಹ ವ್ಯಕ್ತಿ ತಪೋಭಿಮುಖನಾಗುವುದು ಸಹಜವೆಂದೆ ತಿಳಿಯುತ್ತದೆ."[38] ಅಜಿತನಿಗೆ ಸಹಸ್ರ ಪತ್ನಿಯರಿದ್ದರೆಂದು ಕಾವ್ಯವೇ ಹೇಳುತ್ತದೆಯಾದರೂ, ಆ ಸಂಬಂಧದ ಜೀವನ ವಿವರ ಗಳನ್ನು ಕೊಡುವುದಿಲ್ಲ.

ಅಜಿತನ ವೈರಾಗ್ಯಚಿತ್ರಣದಲ್ಲಿನ ಕೊರತೆಯನ್ನು, ಅವನ ಪತ್ನಿಯರ ವಿಲಾಪದ ಪ್ರಸಂಗದಲ್ಲಿ ಕವಿ ತುಂಬಿ ಕೊಟ್ಟಿದ್ದಾನೆ. ಅಜಿತ ರಾಜ್ಯ ಪರಿತ್ಯಾಗ ಮಾಡಿ ಹೋಗು ವಾಗ, ಅವನ ಪತ್ನಿಯರಿಗಾದ ಅಗಲಿಕೆಯ ನೋವಿನ ಚಿತ್ರ ಹಲವಾರು ಪದ್ಯ ಗಳಲ್ಲಿದೆ ; ಇಲ್ಲಿ ಶ್ರೇಷ್ಠ ಕವಿತ್ವವನ್ನು ಕಾಣಬಹುದಾಗಿದೆ. ಇಡೀ ಪ್ರಸಂಗ ಒಂದು ಶೋಕಗೀತೆಯಾಗಿ ಮಾರ್ಪಟ್ಟಿದೆ. ಇದು ಒಂದು ಕಡೆ 'ಗದಾಯುದ್ಧ'ದ ದುರ್ಯೋಧನನ ಪ್ರಲಾಪವನ್ನೂ, ಇನ್ನೊಂದು ಕಡೆ 'ಆದಿಪುರಾಣ'ದ ಸ್ವಯಂಪ್ರಭೆಯ ಪ್ರಲಾಪವನ್ನೂ ನೆನಪುಮಾಡಿಕೊಡುವುದು. ಅಜಿತನ ಅಗಲಿಕೆಯ ಪರಿಣಾಮ ಇಡೀ ಅಯೋಧ್ಯಾನಗರದ ಮೇಲಾಗಿದೆ ಎಂದು ಕವಿ ಹೇಳುತ್ತಾನೆ ; "ಮದುವೆಗಳುಪಿದ ಮನೆಯಂದದಿನಿರ್ದುದಂದಯೋಧ್ಯಾನಗರಂ" (೬-೯೦) ಎಂಬ ಮಾತು ಧ್ವನಿಪೂರ್ಣ ವಾದುದು. ಈ ಪರಿಸ್ಥಿತಿಯ ಚಿತ್ರವನ್ನು ಸೂರ್ಯನಿಲ್ಲದ ಆಕಾಶ, ಮೂವು ಇಲ್ಲದ ಕಾನನ, ತಾವರೆ ಇಲ್ಲದ ಸರೋವರ ಮೊದಲಾದ ಹಲವಾರು ಹೋಲಿಕೆಗಳ ಮೂಲಕ ಕೊಡಲು ಯತ್ನಿಸಲಾಗಿದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದು ವ್ಯಾಕುಲ ಚಿತ್ತರಾದ ಅಜಿತನ ಸಹಸ್ರಾಂಗನೆಯರ ಚಿತ್ರ. ಈ ಸಂದರ್ಭದ ಅವರ ತೊಳಲಾಟ ವನ್ನು ಕವಿ ಮನೋಜ್ಞವಾಗಿ ವರ್ಣಿಸಿದ್ದಾನೆ. ತಮತಮಗೆ ತೋರಿದ ರೀತಿಯಲ್ಲಿ ಇದಕ್ಕೆ ಕಾರಣವನ್ನು ಹುಡುಕುವ ಅವರಿಗೆ, "ನಮಗಾವುದು ಸೂಟಿಕ್ಕ ಪೇಟ್ಮಿನ್ನೇ ಗೆಯ್ವೊಂ" (೬-೯೯) ಎಂಬುದು ಪ್ರಶ್ನೆಯಾಗುವುದು ಸಹಜ.

ಅಜಿತನಿಗೆ ಬೇಡವಾದ ವಸ್ತುಜಗತ್ತು ಸತಿಯರಿಗೂ ಬೇಡವೆನಿಸಿ, ವಿಲಾಸ ವೈಭವಗಳಿಂದ ದೂರವಿರಲು ಅವರು ಯೋಚಿಸುತ್ತಾರೆ. ಅದಕ್ಕಾಗಿ ಸಿರಿಗನ್ನಡಿ, ಕಾಡಿಗೆ, ಅರಗಿನ ರಸ, ಚಾಮರ, ಪನ್ನೀರಿನ ಪಾತ್ರೆ ಮೊದಲಾದವುಗಳನ್ನು ಬಿಡಲು ತಮ್ಮತಮ್ಮಲ್ಲಿಯೇ ಕರೆಕೊಡುತ್ತಾರೆ. ಹಾಗೆಯೇ ರಾಜಹಂಸ, ಅರಗಿಳಿ, ಜಿಂಕೆಯ ಮರಿಗಳನ್ನು ಬಿಡುವಂತೆಯೂ ವೀಣೆ, ತಿಸರಿ (ಒಂದು ಬಗೆಯ ತಂತಿವಾದ್ಯ)ಗಳನ್ನು ಬಲ್ಲವರಿಗೆ ಕೊಡುವಂತೆಯೂ ಕೇಳಿಕೊಳ್ಳುತ್ತಾರೆ. ಇವೆಲ್ಲವೂ ಶೃಂಗಾರದ ಪರಿಕರ ಗಳೆಂಬುದನ್ನೂ, ಈ ಸ್ಥಿತಿ ವಿರಹದ ವ್ಯಥೆಯಿಂದಾದುದೆಂಬುದನ್ನೂ ಮನಗಾಣ ಬೇಕು. ಮುಂದಿನದು ಇನ್ನೂ ಉತ್ಕಟವಾದ ಚಿತ್ರ. ತಪೋಗಾಮಿಯಾದ ಅಜಿತ

---

[38] ಸಿ.ಪಿ.ಕೆ., ರನ್ನ ಪರೀಕ್ಷೆ, ಪು. ೫೪.

ನನ್ನು ಹಿಂಬಾಲಿಸಲು ನಿರ್ಧರಿಸಿದ ಸತಿಯರು ತಾವೇ ನೀರೆರೆದು ಬೆಳಸಿದ ಗಿಡಬಳ್ಳಿ ಗಳನ್ನೂ, ಸಾಕಿದ ಪಕ್ಷಿಪ್ರಾಣಿಗಳನ್ನೂ ಬೀಳ್ಕೊಳ್ಳುವ ದೃಶ್ಯ ಅತ್ಯಂತ ನಾಟಕೀಯವೂ ಕರುಣಾಜನಕವೂ ಆದುದು. ಈ ಸಂದರ್ಭದಲ್ಲಿ ಅವರಾಡುವ "ವಿಯೋಗ ಮಾದುದೆಮಗಂ ನಿಮಗಂ" (೬–೧೧೧)[39] ಎಂಬುದಾಗಲಿ, "ನೆನೆಯುತಿರ್ಪುದು ಕೂರ್ಪುದು ಸ್ವೈರಿಸಿರ್ಪುದು" (೬–೧೧೨) ಎಂಬುದಾಗಲಿ ಮನವನ್ನು ಕಲಕುವಂಥವು. ಈ ಭಾಗ ಕೆಲಮಟ್ಟಿಗೆ ಶಕುಂತಲೆ ತಪೋವನವನ್ನು ಬೀಳ್ಕೊಳ್ಳುವಾಗಿನ ಸಂದರ್ಭ ವನ್ನು ನೆನಪಿಗೆ ತರಬಹುದು. ಪ್ರಿಯವಾದುದನ್ನು ಅಗಲುವಾಗ ಎಂಥ ಸಂಕಟವಿದೆ ಎಂಬುದನ್ನು ಇಲ್ಲಿಯ ಭಾವನೆಗಳು ಬಣ್ಣಿಸುತ್ತವೆ. ಲೋಕಸಂಬಂಧವನ್ನು ಸುಲಭ ವಾಗಿ ಬಿಡಿಸಿಕೊಂಡ ಅಜಿತನ ಚಿತ್ರಕ್ಕೂ ಬಿಡಿಸಿಕೊಳ್ಳಲಾರದೆ ಪರಿತಾಪಪಡುತ್ತಿರುವ ಸತಿಯರ ಚಿತ್ರಕ್ಕೂ ವೈದೃಶ್ಯ ಕಲ್ಪಿಸಬಹುದು. ಇಲ್ಲೆಲ್ಲ ಕವಿ ಮಾನವೀಯ ಜಗತ್ತನ್ನು ಅತ್ಯಂತ ಆಸ್ಥೆಯಿಂದ ಚಿತ್ರಿಸಿದ್ದಾನೆ.

ಸತಿಯರ ಕಂಬನಿಯ ಬಿಂದುಗಳಂತೆ ಇಲ್ಲಿಯ ಕಂದಪದ್ಯಗಳಿವೆ. ಅಷ್ಟರಮಟ್ಟಿಗೆ ಅವರ ಅಳಲನ್ನು ಕವಿ ಕಾವ್ಯಮಾಡಿದ್ದಾನೆ. ಅಜಿತನೊಡನಿದ್ದ ಕಾಲದ ವೈಭವ, ಸುಖಾನುಭವ ಮತ್ತು ಆಮೇಲಿನ ಅನಾಥಸ್ಥಿತಿ—ಇವುಗಳ ಪರಸ್ಪರ ಹೋಲಿಕೆ ಯಿಂದುಂಟಾದ ಕಳವಳ, ತಳಮಳಗಳನ್ನು ಈ ಪದ್ಯಗಳು ಹಿಡಿದಿಟ್ಟವೆ. ಅಜಿತನಿದ್ದರೆ ಎಲ್ಲವೂ ತುಂಬಿಕೊಂಡಂತಿರುತ್ತದೆ, ಅವನ ಅಗಲಿಕೆ ಎಲ್ಲವನ್ನೂ ಬರಿದಾಗಿಸಿದೆ ಎಂಬ ಭಾವನೆಯೇ ಅಜಿತನ ಅನಿವಾರ್ಯತೆಯನ್ನು ಸಾರುತ್ತದೆ. ಇದಕ್ಕೆ ಸೊಗಸಾದ ನಿದರ್ಶನ ಈ ಪದ್ಯ (೬–೧೧೫) :

> ಏನೆಮ್ಮ ಮನಮೆ ಶೂನ್ಯಂ
> ನೀನಿಲ್ಲದ ರಾಜಮಂದಿರಂ ಶೂನ್ಯಮಯೋ
> ಧ್ಯಾನಗರ ಶೂನ್ಯಮಖಿಳಾ
> ಸ್ಥಾನಂ ಶೂನ್ಯಂ ತ್ರಿಲೋಕಮಂಡನ ತಿಲಕಾ

ಇಲ್ಲಿಯ ಭಾವಾಭಿವ್ಯಕ್ತಿ ಅತ್ಯಂತ ಸುಂದರವಾದುದು ಎಂಬುದರಲ್ಲಿ ಸಂಶಯವಿಲ್ಲ. ಅಗಲಿಕೆಯಿಂದ ಬೀಳುವ ಕೊರತೆಯನ್ನು ಇದಕ್ಕಿಂತ ಉತ್ತಮವಾಗಿ ಚಿತ್ರಿಸಲು ಸಾಧ್ಯವಿಲ್ಲ. ಆದರೆ ರನ್ನನ ಇನ್ನೊಂದು ಕೃತಿಯಾದ 'ಸಾಹಸ ಭೀಮ ವಿಜಯಂ' ಪದ್ಯವೊಂದು ಈ ಸಂದರ್ಭದಲ್ಲಿ ನೆನಪಿಗೆ ಬರುತ್ತದೆ. ಕರ್ಣ ದುಶ್ಶಾಸನರನ್ನು

---

39 'ಗದಾಯುದ್ಧ'ದ "ವಿಯೋಗಮೆಂತಾದುದಜೀಯೆನಂಗಾಧಿಪತೀ" (೫–೨೪) ಎಂಬುದನ್ನು ಹೋಲಿಸಿ.

ಕಳೆದುಕೊಂಡು ದುರ್ಯೋಧನ ದುಃಖಿಸುವ ಪ್ರಸಿದ್ಧ ಪ್ರಸಂಗಕ್ಕೆ ಸಂಬಂಧಿಸಿದ ಪದ್ಯವಿದು :[40]

ಎನಗೆ ಮಹೀಮಂಡಲಂ ಶೂನ್ಯಂ
ಮನೆ ಶೂನ್ಯಂ ಬೀಡು ಶೂನ್ಯಮಾದುದು ಸಕಲಾ
ವನಿ ಶೂನ್ಯಮಾಯ್ತು ದುಶ್ಶಾ
ಸನನಿಲ್ಲದೆ ಕರ್ಣನಿಲ್ಲದಾನೆಂತಿರ್ಪೆಂ

ಈ ಪದ್ಯದ ಇನ್ನೊಂದು ರೂಪವೆನ್ನುವಂತೆ ಮೇಲಿನ ಪದ್ಯವಿದೆ. ಈ ಎರಡೂ ಪದ್ಯ ಗಳಲ್ಲಿ ಹೇಳಿಕೊಳ್ಳುವ ವ್ಯತ್ಯಾಸವೇನೂ ಇಲ್ಲ. ಈ ಎರಡೂ ಪದ್ಯಗಳ ಸಂದರ್ಭ ಅಗಲಿಕೆಗೆ ಸಂಬಂಧಿಸಿದ್ದರಿಂದ ಇಂಥ ಹೋಲಿಕೆ ಸಾಧ್ಯವಾಗಿದೆ. ಇಂಥ ಸಾಮ್ಯಗಳು ಎರಡೂ ಕೃತಿಗಳು ಒಬ್ಬನೇ ಕೃತಿಕಾರನವೆಂದು ಹೇಳಲು ಆಂತರಿಕ ಆಧಾರಗಳಾಗಿವೆ. 'ಅಜಿತಪುರಾಣ'ದ ಈ ಪ್ರಸಂಗದ ಮೇಲೆ 'ಆದಿಪುರಾಣ'ದ ಪ್ರಭಾವವಿರುವುದನ್ನು ಹಿಂದೆ ಹೇಳಿದ್ದೇವೆ. ಪಂಪನ 'ಸ್ವಯಂಪ್ರಭೆ-ಲಲಿತಾಂಗ'ವಿರಹ ಚಿತ್ರಣದಿಂದ ರನ್ನ ಕವಿ ನಿಸ್ಸಂದೇಹವಾಗಿ ಸ್ಫೂರ್ತಿ ಪಡೆದಿದ್ದಾನೆನ್ನುವುದಕ್ಕೆ ಪದ್ಯಗಳಲ್ಲಿ ಹೋಲಿಕೆ ಯಿರುವುದೇ ಸಾಕ್ಷಿಯಾಗಿದೆ. ಪೂರ್ವೋಕ್ತ 'ಅಜಿತಪುರಾಣ'ದ ಪದ್ಯದೊಡನೆ 'ಆದಿಪುರಾಣ'ದ ಈ ಪದ್ಯವನ್ನು ಹೋಲಿಸಬಹುದು :[41]

ಅಲಕಂ ಮಂದಾರಶೂನ್ಯಂ ಕದಪು ಮಕರಿಕಾಪತ್ರಶೂನ್ಯಂ ಲಲಾಟಂ
ತಿಲಕಾಲಂಕಾರಶೂನ್ಯಂ ಘನಕುಚಯುಗಲಂ ಹಾರಶೂನ್ಯಂ ನಿತಂಬಂ
ಕಲಕಾಂಚೀದಾಮಶೂನ್ಯಂ ಚರಣಯುಗಲಮುಂ ನೂಪುರಾಲಾಪಶೂನ್ಯಂ
ಲಲಿತಾಂಗಂ ಪೋದೊಡಾಯ್ತಾಕೆಗೆ ದಿವಮನಿತುಂ ನಿರ್ಜರಾರಣ್ಯಶೂನ್ಯಂ

ಈ ಪದ್ಯದಲ್ಲಿ ಶೃಂಗಾರದ ಪರಿಕರಗಳೇ ತುಂಬಿದ್ದು, ಆ ಮೂಲಕ ವಿರಹದ ಚಿತ್ರವನ್ನು ಸಮರ್ಥವಾಗಿ ಕೊಡಲಾಗಿದೆ. ಅಜಿತನ ಸತಿಯರೂ ಇದೇ ಸ್ಥಿತಿಯಲ್ಲಿದ್ದಾರೆ. ಆದರೆ ಅಲ್ಲಿಯ ಪರಿಸ್ಥಿತಿಯೇ ಬೇರೆಯಾದ್ದರಿಂದ, ರನ್ನ ಈ ತೀವ್ರ ವಿಪ್ರಲಂಭಶೃಂಗಾರ ವನ್ನು ವಿವರಗಳಲ್ಲಿ ತರುವುದಕ್ಕೆ ಹೋದಂತಿಲ್ಲ. ನಾವಿಲ್ಲಿ ಗಮನಿಸಬೇಕಾದುದು ಪುನರಾವರ್ತನೆಗೊಳ್ಳುವ 'ಶೂನ್ಯಂ' ಪದ ; ಇದರ ಸಾಮ್ಯದಿಂದ ಎರಡೂ ಪದ್ಯಗಳ ಹೋಲಿಕೆ ಸ್ಪಷ್ಟವಾಗುತ್ತದೆ.

ಅಜಿತಪತ್ನಿಯರ ಅಳಲು ಅಜಿತನ ಗುಣಗಾನದಲ್ಲಿ ಇನ್ನಷ್ಟು ಮಡುಗಟ್ಟುತ್ತದೆ.

---

[40] ಬಿ. ಎಸ್. ಸಣ್ಣಯ್ಯ ಮತ್ತು ರಾಮೇಗೌಡ, ರನ್ನ ವಿರಚಿತ ಸಾಹಸಭೀಮವಿಜಯಂ, ೩-೪೯, ಪು. ೪೧

[41] ಕೆ. ಜಿ. ಕುಂದಣಗಾರ, ಆದಿಪುರಾಣಂ, ೩-೧೩, ಪು. ೫೦

ಸ್ತುತಿರೂಪದ ಈ ಪದ್ಯಗಳು (೬-೧೧೭ರಿಂದ ೧೨೦ರವರೆಗೆ) ಭಾವಬಂಧುರತೆಯಿಂದಲೂ ರಚನಾ ಸೌಷ್ಠವತೆಯಿಂದಲೂ ಕೂಡಿವೆ. ಅಜಿತನಾಥನ ವ್ಯಕ್ತಿತ್ವವನ್ನು ಇವು ಸಮರ್ಥವಾಗಿ ಕಟ್ಟಿಕೊಡುತ್ತವೆ. ಈ ವ್ಯಕ್ತಿತ್ವದ ಹಿನ್ನೆಲೆಯಲ್ಲಿ ಅಜಿತನ ಸತಿಯರ ಶೋಕಕ್ಕೆ ಮತ್ತಷ್ಟು ಅರ್ಥ ಪ್ರಾಪ್ತಿಯಾಗುತ್ತದೆ. ಈ ಪದ್ಯಗಳ ಮೇಲೆ ಪಂಪನ ಪ್ರಭಾವ ಸಹಜವಾಗಿಯೇ ಇದೆ. ಅಂತಹ ಒಂದು ಪದ್ಯವನ್ನು (೬-೧೧೮) ಉದಾಹರಿಸಬಹುದು :

ಪದಯಿದನೆಲ್ಲಿದಂ ಪರಮನೆಲ್ಲಿದನುಜ್ವಲಹೇಮವರ್ಣನೆ
ಲ್ಲಿದನಭಿಮಾನಿಯೆಲ್ಲಿದನಸಂಚಳನೆಲ್ಲಿದನಪ್ರಮಾದಿಯೆ
ಲ್ಲಿದನಪಥಾತ್ಮವೆಲ್ಲಿದನಿಭಧ್ವಜನೆಲ್ಲಿದನಾಪ್ತತತ್ವನೆ
ಲ್ಲಿದನಬಲಾಮನೋರಮಣನೆಲ್ಲಿದನೆಲ್ಲಿದನೋ ಮನಃಪ್ರಿಯಂ

ಪದ್ಯದಲ್ಲಿ ಪ್ರಯೋಗವಾಗಿರುವ ಗುಣವಾಚಕಗಳು ರಾಗ ವಿರಾಗಗಳೆರಡನ್ನೂ ಹೇಳುತ್ತವೆ. 'ಹೇಮವರ್ಣನೆ', 'ಅಭಿಮಾನಿ', 'ಅಬಲಾಮನೋರಮಣ', 'ಮನಃಪ್ರಿಯ'—ಇವು ಶೃಂಗಾರಭಾವಕ್ಕೆ ಪ್ರತೀಕಗಳಾಗಿದ್ದು, ಪರಿಸ್ಥಿತಿಯಲ್ಲಿ ವಿರಹವನ್ನು ಧ್ವನಿಸುತ್ತವೆ. ಈ ಪದ್ಯ ಸ್ವಯಂಪ್ರಭೆಯ ವಿರಹವನ್ನು ವ್ಯಕ್ತಪಡಿಸುವ 'ಆದಿಪುರಾಣ'ದ ಪದ್ಯವೊಂದನ್ನು ಆಶ್ಚರ್ಯಕರವಾಗಿ ಹೋಲುತ್ತದೆ. ಆ ಪದ್ಯ ಹೀಗಿದೆ:[42]

ಮದನನ ಕೈದುವೆಲ್ಲಿದನನಂಗನ ಕೈಪೊಡೆಯೆಲ್ಲಿದಂ ವಿಳಾ
ಸದ ಕಣಿಯೆಲ್ಲಿದಂ ಚದುರ ಪುಟ್ಟಿದನಲ್ಲಿದನೆಲ್ಲಿದಂ ವಿನೋ
ದದ ಮೊದಲೆಲ್ಲಿದಂ ಸೊಬಗಿನಾಗರಮೆಲ್ಲಿದನಿಚ್ಛೆಯಾಣ್ಮನೆ
ಲ್ಲಿದನೆರ್ದೆಯಾಣ್ಮನೆನ್ನರಸನೆಲ್ಲಿದನೋ ಲಲಿತಾಂಗವಲ್ಲಭಂ

ಎರಡೂ ಪದ್ಯಗಳ ಭಾವ ಹೆಚ್ಚುಕಡಿಮೆ ಒಂದೇ. ತಮ್ಮ ಪತಿಯರ ಅಗಲಿಕೆಯಿಂದ ನೋವನ್ನನುಭವಿಸುತ್ತಿರುವ ಚಿತ್ರ ಇವುಗಳ ವಸ್ತು. ಆದರೆ ಎರಡೂ ಪದ್ಯಗಳಲ್ಲಿನ ಸಂದರ್ಭ ಮಾತ್ರ ಬೇರೆ. ಎರಡೂ ಪದ್ಯಗಳ ಬಂಧ ಕೂಡ ಒಂದೇ ಆಗಿದೆ ಎನ್ನುವುದಕ್ಕೆ ಪುನರಾವರ್ತನೆಗೊಳ್ಳುವ 'ಎಲ್ಲಿದನ್' ಎನ್ನುವ ಪದವನ್ನು ಗಮನಿಸಬೇಕು. ಹೀಗೆ ಸಂದರ್ಭ ಸಿಕ್ಕಿದಾಗಲೆಲ್ಲಾ ರನ್ನ ಪಂಪನಿಂದ ಸ್ವೀಕರಿಸುವುದನ್ನು ಕಾಣುತ್ತೇವೆ.

'ಅಜಿತಪುರಾಣ'ದಲ್ಲಿ ಸತಿಯರ ಪ್ರಲಾಪದ ಪ್ರಸಂಗ ಒಂದು ಉತ್ತಮಭಾಗವೆನ್ನುವುದನ್ನು ಮೇಲಿನ ಅವಲೋಕನ ಹೇಳುತ್ತದೆ. ಇದು ವೈರಾಗ್ಯನಿರೂಪಣೆಯ ಸಂದರ್ಭದಲ್ಲಿಯೇ ಬರುವುದನ್ನು ಗಮನಿಸಬೇಕು. ಆದರೆ ರನ್ನ ಇದನ್ನು ಒಂದು 'ವಿರಹ' ಪ್ರಸಂಗವೆನ್ನುವಂತೆ ಚಿತ್ರಿಸಿರುವುದು ಸರಿಯೆ ಎನ್ನುವ ಪ್ರಶ್ನೆ ಕಾಡಬಹುದು.

---

42 ಅದೇ, ಪದ್ಯ ೩-೧೫, ಪು. ೩೦.

ಅಜಿತ ವಿರಕ್ತನಾಗಿ ಹೋಗುವಾಗ ಮೂಡಿಸುವ ಭಾವಕ್ಕೂ, ಸತಿಯರ ಈ ಪ್ರಲಾಪ ಮೂಡಿಸುವ ಭಾವಕ್ಕೂ ವ್ಯತ್ಯಾಸವಿದ್ದು, ಓದುಗ ಕೂಡಲೆ ವ್ಯತ್ಯಾಸಗೊಳ್ಳುವುದು ಕಷ್ಟವೇ. ಆದ್ದರಿಂದ ಇವು ಪರಸ್ಪರ ಪೂರಕವಲ್ಲವೆನಿಸುತ್ತದೆ. ಸತಿಯರ ಪ್ರಲಾಪ ವನ್ನು ಇಷ್ಟು ತೀವ್ರತೆಯಿಂದ ಚಿತ್ರಿಸುವ ಕವಿ, ಈ ಸತಿಯರು ಅಜಿತನಾಥನೊಡನೆ ನಡೆಸಿದ ಸಂಸಾರಜೀವನವನ್ನು ಕುರಿತು ಚಕಾರವೆತ್ತದಿರುವುದು ಪ್ರಶ್ನೆಯಾಗಿಯೇ ಉಳಿಯುತ್ತದೆ.

೬

'ಅಜಿತಪುರಾಣ'ದಲ್ಲಿ ಸಗರನ ಕಥೆ ಒಂದು ಮಹತ್ವದ ಪ್ರಕರಣ. ಇದರಲ್ಲಿಯೂ ಅಂತಿಮ ಉದ್ದೇಶ ವೈರಾಗ್ಯಬೋಧನೆಯೇ. ಆದರೆ ಅದು 'ತತ್ವ'ದಲ್ಲಿ ವಿರಮಿಸದೆ, 'ಅನುಭವ' ಮಟ್ಟದಲ್ಲಿ ಕೆಲಸಮಾಡುತ್ತದೆ. ಇದರ ಕಟ್ಟಡದಲ್ಲಿ ಹಲವಾರು ಸ್ವಾರಸ್ಯಾಂಶಗಳಿದ್ದು, ಕುತೂಹಲಕಾರಿಯಾಗಿದೆ. ವೈದಿಕ ಪರಂಪರೆಯಲ್ಲೂ ಸಗರನಕಥೆ ಇದೆ. ಆದರೆ ಅದರ ಉದ್ದೇಶ ಮತ್ತು ಹರಿವೇ ಬೇರೆ. ಆದರೆ ವೈದಿಕ ಪರಂಪರೆಯ ಕಥೆಯೇ ಮೂಲವಾಗಿದ್ದು, ಆಮೇಲೆ ಅನೇಕ ಮಾರ್ಪಾಡುಗಳೊಡನೆ ಜೈನಕಥಾ ಪರಂಪರೆಯಲ್ಲಿ ಬಳಕೆಗೊಂಡಿರಬೇಕೆಂದು ತೋರುತ್ತದೆ. ಹೀಗೆ ಸಿದ್ಧಗೊಂಡ 'ಉತ್ತರ ಪುರಾಣ'ದ ವಸ್ತುವನ್ನು ರನ್ನ ಅತ್ಯಂತ ಸಮರ್ಥವಾಗಿ ಉಪಯೋಗಿಸಿಕೊಂಡಿದ್ದಾನೆ. ಪ್ರಸ್ತುತ ಕಾವ್ಯದ ಪ್ರಧಾನ ಕಥೆಯಾದ ಅಜಿತತೀರ್ಥಂಕರನ ನಿರೂಪಣೆಗಿಂತಲೂ ಸಗರನ ಕಥೆಯಲ್ಲಿ ಹೆಚ್ಚು ರೋಚಕತೆಯಿದೆ. ಇದಕ್ಕೆ "ಇಲ್ಲಿ ವಿದಿತವಾಗಿರುವ ಮಾನವ ಹೃದಯ ಸಹಜವಾದ ಸನ್ನಿವೇಶ ಚಿತ್ರಣವೇ ಕಾರಣ"[43] ; ಜೊತೆಗೆ, ಒಂದು ಬಗೆಯ ಜಾಣ್ಮೆಯ ಕುಸುರಿಕೆಲಸ ನಡೆದಿರುವುದೂ ಇದಕ್ಕೆ ಪೂರಕವಾಗಿದೆ. ತೀರ್ಥಂಕರನ ಕಥೆಗಿಂತಲೂ ಚಕ್ರವರ್ತಿಯ ಕಥೆಯೇ ಹೆಚ್ಚು ವಿಜೃಂಭಿಸಿರುವುದು ಗಮನಿಸತಕ್ಕ ಅಂಶ. 'ಆದಿಪುರಾಣ'ದಲ್ಲೂ ಆದಿನಾಥನ ಚರಿತ್ರೆ ಅದ್ಭುತವಾಗಿಯೇ ಚಿತ್ರಣ ಗೊಂಡಿದ್ದರೂ, ಅದು ಭವ್ಯತೆಗೇರುವುದು 'ಭರತಬಾಹುಬಲಿ ವ್ಯಾಯೋಗ' ಪ್ರಸಂಗ ದಲ್ಲಿ. ಆ ಮಟ್ಟದ ಕವಿತೆ ಇದಲ್ಲದಿದ್ದರೂ, ಒಂದು ಪರಿಮಿತಿಯಲ್ಲಿ ಸ್ವಯಂಪೂರ್ಣತೆ ಯನ್ನೂ ಕಲಾತ್ಮಕತೆಯನ್ನೂ ಸಗರನ ಕಥೆ ಸಾಧಿಸಿಕೊಂಡಿದೆ.

ಕಥೆ ಸಗರನ ಮೂರನೆಯ ಜನ್ಮದಿಂದ ಮೊದಲಾಗುವುದು, ಮಗನ ಮರಣದಿಂದ ಜಯಸೇನಮಹಾರಾಜ ವೈರಾಗ್ಯಪರನಾಗುವುದು ಆರಂಭದ ಮುಖ್ಯಾಂಶಗಳಾಗಿವೆ.

---

[43] ಜಿ. ವರದರಾಜರಾವ್, ಕನ್ನಡ ಅಧ್ಯಯನ ಸಂಸ್ಥೆಯ 'ಕನ್ನಡ ಸಾಹಿತ್ಯ ಚರಿತ್ರೆ', ಪು. ೬೧೫.

ಮಗನ ಪರವಾದ ತಂದೆಯಲ್ಲಿನ ವ್ಯಾಮೋಹಕ್ಕೆ ನೇರವಾಗಿ ದಾಳಿಮಾಡುವುದರ ಮೂಲಕ ವೈರಾಗ್ಯ ಹೊಂದುವಂತೆ ಮಾಡುವುದು ಕಥೆಯ ಗುರಿ. ಇದು ಇಡೀ ಸಗರನ ಕಥೆಯ ಸಂದೇಶ ಕೂಡ. ಸಾವು ಮತ್ತು ವೈರಾಗ್ಯಗಳೆರಡೂ ಉದ್ದಕ್ಕೂ ಜೊತೆಯಲ್ಲಿ ನಡೆದಿವೆ. ಮಹಾಬಲ ಮತ್ತು ಮಣಿಕೇತುಗಳ ನಡುವೆ ಆದ ಒಪ್ಪಂದ ಕಥೆಯ ಕೇಂದ್ರ ಪ್ರಜ್ಞೆಯಾಗಿದ್ದು, ಮುಂದಿನ ಆಗುಹೋಗುಗಳೆಲ್ಲ ಇದರ ಸಾಕ್ಷಿಯಲ್ಲೇ ನಡೆಯುತ್ತವೆ. ಕಥೆಯ ನಾಟಕೀಯ ತಿರುವೆಲ್ಲ ಇದನ್ನು ಅವಲಂಬಿಸಿಯೇ ನಡೆಯುತ್ತದೆ.

ಯಥಾಪ್ರಕಾರ ಸಗರಚಕ್ರವರ್ತಿ ದಿಗ್ವಿಜಯಕ್ಕೆ ಹೊರಡುವುದು, ಷಟ್ಖಂಡ ಭೂಮಂಡಲಗಳನ್ನು ಗೆಲ್ಲುವುದು, ವೃಷಭಾಚಲದಲ್ಲಿ ವಿಜಯ ಪ್ರಶಸ್ತಿಯನ್ನು ಬರೆಸಲು ಹೋಗಿ 'ಗಳಿತಗರ್ವ'ನಾಗುವುದು, ಹಿಂದಿನದನ್ನು ಅಳಿಸಿ ತನ್ನ ಹೆಸರನ್ನು ಕೊರೆಯಿಸುವುದು—ಇವೆಲ್ಲ ಮುಂದಿನ ಅಂಶಗಳಾಗಿ ಬರುತ್ತವೆ. ಇಲ್ಲಿ ಸ್ವಾರಸ್ಯವೇನೂ ಇಲ್ಲ. ಮಾಮೂಲಿ ಕಾರ್ಯಕ್ರಮದಂತೆ ಕಾಣುತ್ತವೆ. ಇದರ ಮೇಲೆ 'ಆದಿಪುರಾಣ'ದ ಪ್ರಭಾವ ಇದ್ದೇ ಇದೆ. ಆದರೆ ಅಲ್ಲಿಯ ವೈಭವ, ಎತ್ತರಗಳು ಇಲ್ಲಿಲ್ಲ. ಕಥೆಯನ್ನು ಸಾಗಿಸುವುದಷ್ಟೇ ಇಲ್ಲಿ ಕವಿಯ ಕೆಲಸ ; ಅದಕ್ಕನುಗುಣವಾದ ಆತುರವನ್ನು ಕವಿ ತೋರಿದ್ದಾನೆ. ಒಟ್ಟಿನಲ್ಲಿ, "ರನ್ನನ ದಿಗ್ವಿಜಯ ಕೇವಲ ರೇಖಾಚಿತ್ರವಾಗಿದೆ"[44] ಎಂಬ ಅಭಿಪ್ರಾಯ ಸರಿ.

ಸಗರನ ಪ್ರಸಂಗದಲ್ಲಿ ಮಣಿಕೇತುವಿನ ಪಾತ್ರ ಅತ್ಯಂತ ಪ್ರಮುಖವಾದುದು. ಇಡೀ ಪ್ರಸಂಗವನ್ನು ಇದು ಅಭಿನಯಿಸಿ ತೋರುವಂತೆ ಮಾಡಿದೆ. ಮುಂದಿನ ಕಥೆಯೆಲ್ಲ ಇವನ ನಾಟಕೀಯ ಘಟನೆಗಳ ಮೂಲಕವಾಗಿಯೇ ನಡೆಯುವುದು. ಸಗರನನ್ನು ಸಂಸಾರವಿಮುಖನನ್ನಾಗಿಸಲು ಇವನು ಮೂರು ಸಾರಿ ಪ್ರಯತ್ನಿಸುವುದು ಒಂದು 'ಆಶಯ' (motif)ವೆಂದು ತೆಗೆದುಕೊಳ್ಳಬೇಕು. ಮೊದಲ ಎರಡರಲ್ಲಿ ವಿಫಲನಾಗಿ, ಮೂರನೆಯ ಪ್ರಯತ್ನದಲ್ಲಿ ಜಯಗಳಿಸುವುದು ಇದರ ಭಾಗವಾಗಿಯೇ ಬರುವಂಥದು. ಮೊದಲ ಘಟನೆಯೇನೊ—ಶ್ರೀ ಭಟ್ಟಾರಕರ ಮೂಲಕ ವಿಷಯ ತಿಳಿದು ಬೋಧಿಸಿದ್ದು—ಸಹಜವಾದುದು. ಆದರೆ ಎರಡನೆಯದು—ಚಾರಣಋಷಿರೂಪ—ಮತ್ತು ಮೂರನೆಯದು—ಸಗರಪುತ್ರರ ಮಾಯಾಬಂಧನ—ಉದ್ದೇಶಪೂರ್ವಕವಾಗಿ ನಿಯೋಜಿಸಿದಂಥವು. ಇವುಗಳ ಹಿಂದೆ ಕೃತಕ ಕೈವಾಡವಿದೆ. ಸಗರಪುತ್ರರನ್ನು 'ಭಸ್ಮಾವಲೇಪನ' ಮಾಡಿದ ಎಂಬ ಮಾತು ಸರಿಯಾದುದು ; ಆದರೆ ಕೃತಿಯ ಒಂದು ಕಡೆ (೧೦-೩೧ ವ) 'ಭಸ್ಮಾವಶೇಷ' ಎಂದು ಹೇಳಿರುವುದು (ಇದಕ್ಕೆ ಬೇರೆ

---

[44] ಜಿ. ಬ್ರಹ್ಮಪ್ಪ, ರನ್ನಕವಿ, ಪು. ೯೬.

ಪಾಠವಿಲ್ಲ) ಸರಿಯಲ್ಲ. 'ಉತ್ತರಪುರಾಣ'ದಲ್ಲಿಯೇ "ಮಾಯಾ ಭಸ್ಮಾವಗುಂಠಿತಾನ್ ಕುಮಾರಾನ್"[45] ಎಂಬ ಮಾತಿರುವುದನ್ನು ಗಮನಿಸಬೇಕು. ಇದಕ್ಕೆ ಸಂಬಂಧಿಸಿದಂತೆ ಕವಿ ತನ್ನ ಕಾವ್ಯದ ಕೊನೆಯಲ್ಲಿ, "ಸಗರಸುತರೆಲ್ಲರುಂ ಮೋಕ್ಷಗಾಮಿಗಳ್ ಚರಮ ದೇಹಧಾರಿಗಳಂತಾಬಗೆಗೆಟ್ಟವಂದಿರಂ ಪನ್ನಗರಾಜಂ ಕೊಂದನೆಂಬುದಪಸಿದ್ಧಾಂತಂ" (೧೨-೨೯) ಎಂದು ಹೇಳುತ್ತಾನೆ. ಕವಿ ಹೇಳುವ ಈ 'ಅಪಸಿದ್ಧಾಂತ' ಪ್ರತಿಪಾದಕರು ಯಾರೆಂಬುದು ಗೊತ್ತಾಗುವುದಿಲ್ಲ. ರನ್ನನಿಗಿಂತ ಹಿಂದೆ ಯಾರಾದರೂ ಹೀಗೆ ಕಲ್ಪಿಸಿದ್ದರೆ ಎಂಬುದು ತಿಳಿಯದು. ಆದರೆ ವೈದಿಕ ಪರಂಪರೆಯ ಕಥೆಯಲ್ಲಿ ಮಾತ್ರ ಸಗರಪುತ್ರರು ಭಸ್ಮಾವಶೇಷರಾಗುತ್ತಾರೆ.

ಸಗರಪುತ್ರರ ಸಾವಿನ ಸುದ್ದಿಯನ್ನು ಹೇಳಲು ಹೂಡಿದ ನಾಟಕ ಅಪೂರ್ವ ರೀತಿಯದು. ಪುತ್ರರ ವಿರಹವ್ಯಥೆಗೆ ಸಗರಚಕ್ರವರ್ತಿಯನ್ನು ಮಾನಸಿಕವಾಗಿ ಸಿದ್ಧಗೊಳಿಸುವುದು ಇಲ್ಲಿಯ ಉದ್ದೇಶ. ಇದಕ್ಕೆ ಕಪಟ ವೇಷದ ಬ್ರಾಹ್ಮಣನ ಪಾತ್ರ ಕಾರಣವಾಗಿದೆ. ಸತ್ತ ತನ್ನ ಮಗನನ್ನು ಬದುಕಿಸಿಕೊಡಬೇಕೆಂದು ಹುಯಿಲೆಬ್ಬಿಸುವುದರ ಮೂಲಕ ಸಗರಪುತ್ರರ ಸಾವಿನ ವಿಷಯವನ್ನು ತಿಳಿಸಲು ಅವಕಾಶ ಕಲ್ಪಿಸಿಕೊಳ್ಳುವುದು ತುಂಬ ಚೆನ್ನಾಗಿದೆ. ಈ ಸಂದರ್ಭದಲ್ಲಿ ಸಗರ ತಾನಾಗಿ ಸಿಕ್ಕಿಕೊಳ್ಳುವಂತೆ ಮಾಡುವ ತಂತ್ರ ಕೂಡ ಕೌಶಲಪೂರ್ಣ. ವ್ಯಥಿತ ಮನಸ್ಸನ್ನು ಮೊದಲು ಸೃಷ್ಟಿಮಾಡಿ, ಆಮೇಲೆ ಸಾವಿನ ಅನಿವಾರ್ಯತೆಯನ್ನು ಒಪ್ಪಿಕೊಳ್ಳುವುದರ ಮುಖಾಂತರ ದುಃಖವನ್ನು ಭರಿಸುವ ಶಕ್ತಿಯನ್ನು ಪಡೆದುಕೊಳ್ಳುವಂತೆ ಯೋಜಿಸುವುದು ನೂತನ ಹವಣಿಕೆ. ಸಾವಿಗೆ ಸಾಕ್ಷಿಯಾಗಲು ಭಗೀರಥನೊಬ್ಬನನ್ನು ಬದುಕಿಸುವುದು, ಅನಂತರ ಅವನು ತಡವಾಗಿ ಪ್ರವೇಶಿಸುವಂತೆ ಮಾಡುವುದು ಕವಿಯ ಜಾಣ್ಮೆಯನ್ನು ತೋರಿಸುವುದು. ಈ ಸನ್ನಿವೇಶದಲ್ಲಿ ಬುದ್ಧಿಸಾಗರ ವಹಿಸುವ ಪಾತ್ರ ಕೂಡ ಗಮನಾರ್ಹವಾದುದು. ಸಾವಿರದ ಮನೆಯಿಂದ ಹುಲ್ಲನ್ನೂ ಕಿಚ್ಚನ್ನೂ ತೆಗೆದುಕೊಂಡು ಬರುವಂತೆ ಬುದ್ಧಿಸಾಗರ ಕಪಟ ಬ್ರಾಹ್ಮಣನಿಗೆ ಹೇಳುವ ವಿಷಯ 'ಕಿಸಾಗೋತಮಿ'ಯ ಕಥೆಯನ್ನು ನೆನಪಿಗೆ ತರುತ್ತದೆ. ಈ ಅಂಶವನ್ನು ಬೌದ್ಧಧರ್ಮದಿಂದ ಸ್ವೀಕರಿಸಿರುವುದರಲ್ಲಿ ಸಂಶಯವಿಲ್ಲ; ಅಲ್ಲಿನ 'ಸಾಸಿವೆ'ಗೆ ಬದಲಾಗಿ ಇಲ್ಲಿ ಹುಲ್ಲು ಮತ್ತು ಕಿಚ್ಚು ಬಂದಿದೆ. ಈ ಇಡೀ ಪ್ರಸಂಗ ಒಂದು ಕಲಾತ್ಮಕ ದೃಶ್ಯ. "ಈ ಹೂಟದಲ್ಲಿ ಮನೋವೈಜ್ಞಾನಿಕ, ಆಧ್ಯಾತ್ಮಿಕ ಹಾಗೂ ವ್ಯಾವಹಾರಿಕ ಸತ್ಯಗಳು ಮುಪ್ಪುರಿಗೊಂಡಿರುವುದನ್ನು ಕಾಣುತ್ತೇವೆ."[46]

---

[45] ಎಂ. ಶಾತಿರಾಜ ಶಾಸ್ತ್ರಿ, ಮಹಾಪುರಾಣ ಸಂ. ೩, ಉತ್ತರಪುರಾಣ. ಸಂ. ೧., ಪು. ೨೧, ಶ್ಲೋಕ ೧೩೧.

[46] ಸಿ.ಪಿ.ಕೆ., ರನ್ನ ಪರೀಕ್ಷೆ, ಪು. ೭೧.

ಆದರೆ, ಸಗರನ ವೈರಾಗ್ಯವನ್ನು ಹೇಳಿ ಸಗರಪುತ್ರರೂ ವೈರಾಗ್ಯಹೊಂದುವಂತೆ ಮಾಡುವುದು ಕಥೆಯ ಶಿಲ್ಪದ ದೃಷ್ಟಿಯಿಂದ ಸರಿಯೆನಿಸಿದರೂ, 'ಒಪ್ಪಂದ'ದ ವ್ಯಾಪ್ತಿಗೆ ಬರುವಂಥದಲ್ಲ. ಒಪ್ಪಂದದ ಪ್ರಕಾರ ಮಣಿಕೇತುವಿನ ಉದ್ದೇಶ ಸಗರನನ್ನು ವೈರಾಗ್ಯಪರನನ್ನಾಗಿ ಮಾಡುವುದೇ ಹೊರತು, ಮಕ್ಕಳನ್ನಲ್ಲ. ಹಾಗೆ ಆಗದಿರುವುದಕ್ಕೆ ವೈರಾಗ್ಯದ ಬಗೆಗಿನ ಧಾರ್ಮಿಕ ನಿಲುವೇ ಕಾರಣವಾಗಿದೆ.

ಸಗರನ ಪ್ರಸಂಗ ಕವಿಯ ಪ್ರತಿಭೆಯ ಅಭಿವ್ಯಕ್ತಿಗೆ ಉತ್ತಮ ಅವಕಾಶವನ್ನು ಕಲ್ಪಿಸಿಕೊಟ್ಟಿದೆ ಎಂಬುದು ನಿಜ. ಆದರೆ, ಉದ್ದೇಶಪೂರ್ವಕ ಯೋಜನೆಯೊಂದು ಕಥೆಯೊಳಗೆ ಕೆಲಸ ಮಾಡುವುದರಿಂದ ಕೃತಕತೆ ಕಾಣಿಸುವುದಿಲ್ಲವೆ ? ನಾಟಕೀಯತೆ ಇದರ ಸಾಹಿತ್ಯಿಕ ಗುಣವಾದರೂ, ಆದರೊಳಗಡೆಯೇ 'ನಟನೆ'ಯ ಅಂಶಗಳಿಲ್ಲವೆ ? ಹೀಗೆ ಬಲವಂತ ಮಾಡುವುದಕ್ಕಿಂತಲೂ, ವೈರಾಗ್ಯದ ಸಹಜ ವಿಕಾಸಕ್ಕೆ ಅನುವುಮಾಡಿ ಕೊಡುವಂತೆ ಚಿತ್ರಿತವಾಗಿದ್ದರೆ ಇನ್ನೂ ಚೆನ್ನಾಗಿರುತ್ತಿತ್ತೇನೊ. ಆದರೆ ಸಗರ, ಪೂರ್ವಭವವನ್ನು ನೋಡಿದರೆ, ಪಕ್ವಜೀವವಾಗಿರುವುದರಿಂದ ಈ ಕೃತಕ ನಾಟಕವೂ ಪರಿವರ್ತನೆಯ ಹರಿಕಾರನಾಗಿ ಕೆಲಸಮಾಡುವುದನ್ನು ಕಾಣಬಹುದು.

—ರಾಗೌ

# ಪ್ರಥಮಾಶ್ವಾಸಂ

ಶ್ರೀಮನ್ನಮ್ರಾಮರೇಂದ್ರಾರುಣ ಮಣಿಮಕುಟದ್ಯೋತಿ ಬಾಲಾರ್ಕಲೀಲೋ
ದ್ದಾಮಂ ಕಾಶ್ಮೀ[1]ರರಾಗಂ[1] ತನಗೆ ವಿನತ ನಾಗೇಂದ್ರ ಹಸ್ತಾರುಣಾಬ್ಜಂ
ಹೈಮಂ ಕರ್ಣಾವತಂಸಂ ತನಗೆನೆ ಕರಮೊಪ್ಪಿ[2]ರ್ದ[2]ಳಾರ್ಹಂ[3]ತ್ಯ[3]ಲಕ್ಷ್ಮೀ
ಧಾಮಂ ಮಾಚಿಕ್ಕೆಮ್ಮ ಹೃತ್ಪದ್ಮಮನಜಿತ ಜಿನೇಂದ್ರಕ್ರಮಾಂಭೋರುಹಶ್ರೀ ೧

ಮೊದಲೊಳೆ ಸಿದ್ಧಭಕ್ತಿ ಸಕಳಕ್ರಿಯೆಗಾದುದು ಸಿದ್ಧಮಾತೃಕಾ
ಪದವಿಗೆ ತಾನೆ ಮೊತ್ತಮೊದಲಾದುದುಮಲ್ಲದೆ ಸಿದ್ಧಶೇಷೆಯೆಂ
ಬುದು ಶುಭವಾಕ್ಯಮಾಯ್ತೆ ನಿಪ ಸಿದ್ಧರನಂತಸುಖಪ್ರಯುಕ್ತರ
ಭ್ಯುದಯಸುಖಂಗಳಂ ನಮಗೆ ಮಾಡಿ ನಿಮಿರ್ಚುಗೆ ಕಾವ್ಯಸಿದ್ಧಿಯಂ ೨

ನೆಗೞ್ದಿರ್ದುತ್ತಮ[4]ಜೈನಮಾರ್ಗ[4]ರುಚಿಯಿಂ ಚಾರಿತ್ರ ಸಂಸಿದ್ಧಿಯೊಳ್
ನೆಗೞ್ದಿರ್ ಶಿಷ್ಯರುಮಂ ನೆಗೞ್ಚಿವರದರ್ಕಾಚಾರ್ಯರೆಂಬೀ ಪೆಸರ್
ಜಗತೀ ವ್ಯಾಪಕಮಾಗೆ ತಾಮೆ ಕಣಿಯಾಗಿರ್ದರ್ ಗುಣಂಗಳ್ಗೆ ಭ
ವ್ಯಗಣಂಗಳ್ಗ ಪುದಂ ನಿಮಿರ್ಚೆ ಮೆಱೆಗಾಚಾರ್ಯರ್ ನಿಜೌದಾರ್ಯಮಂ ೩

ಇವು [5]ಸು[5]ಜ್ಞಾನದ ಸಲ್ವ ಬಟ್ಟೆಗಳಿವಜ್ಞಾನಾಂಧಕೂಪಂಗಳೆಂ
ದು ವಿಶುದ್ಧೋದಿತ ಬುದ್ಧಿಯಿಂದಱಿಪಿ ಲಾಭ ಖ್ಯಾತಿ ಪೂಜಾನಪೇ
ಕ್ಷೆ ವಿನೇಯರ್ಕಳೊಳಾಗೆ ತತ್ವಗೃಹದೊಳ್ ರತ್ನಪ್ರದೀಪಂಗಳ
ರ್ಪವೊಲಿರ್ಪರ್ ನಿರಪಾಯರೀಗೆಮಗುಪಾಧ್ಯಾಯರ್ ಸುಖೋಪಾಯಮಂ ೪

ಭವಕಾಂತಾರವಿಹಾರದೊಳ್ ವಿಷಯಮಂ ವಿಚ್ಛೇದಿಸಲ್ ಚಿತ್ತಸಂ
ಭವನಂ ಸಂಹರಿಸಲ್ [6]ಕಷಾ[6]ಯಭಟರಂ ಬೆನ್ನಟ್ಟ[7]ಲೊಪ್ಪಿ[7] ಮಹಾ
ವ್ಯವಸಾಯಂ ತಮಗಾಗೆ ಭವ್ಯಜನಕೆಲ್ಲಂ ಶಾಂತಿಮಿಚ್ಛಂತಿ ಸಾ
ಧವಯೆಂಬುತ್ತಮ ಸಾಧುವರ್ಗಮೆ ನೆರಂ ಸ್ವರ್ಗಾಪವರ್ಗಂಬರಂ ೫

---

1 ರಾಂಗಂ (ಕ) 2 ರ್ದೋ (ತ) 3 ತ (ಟ) 4 ಕಾವ್ಯ (ಚ) 5 ಸ (ಕಚ) ಸಮ್ಯ (ಗಜ) 6 ಸಹಾ (ಜ) 7 ಲಾರ್ಪೀ (ತ)

ಜಿನವೃಂದಾರಕರಿರ್ಪ
ತ್ತು ನಾಲ್ವರಾ ತೀರ್ಥನಾಥಸಮುದಾಯದ ಶಾ
ಸನದೇವಿಯರ್ಕಳಿರ್ಪ
ತ್ತು ನಾಲ್ವರೀಗೆಮಗೆ ಯಕ್ಷರಕ್ಷಯಸುಖಮಂ ೬

ಸುರಪತಿಪೂಜಿತಂ ನೃಪತಿಸೇವಿತಮುನ್ನತ ಗಂಗಮಂಡಲೇ
ಶ್ವರ ಮಕುಟಾರ್ಚಿತಂ ಭುವನದಿಂ ತಮಗೆಂಬ ನೆಗೞ್ತೆವೆತ್ತಲಂ
ಕರಿಸಿ ಜಗತ್ಪವಿತ್ರಮೆನೆ ಸಂದುದೞಿಂದೆಮಗಿಷ್ಟಸಿದ್ಧಿಯಂ
ದೊರೆಕೊಳಿಸುತ್ತುಮಿರ್ಕಜಿತಸೇನಮುನೀಂದ್ರಪದಾಂಬುಜದ್ವಯಂ ೭

ಅಸದೃಶ ಸಮ್ಯಗ್ದರ್ಶನ
ಮೆಸೆಯೆ ಮನೋವಚನಕಾಯಶುದ್ಧಿಯಿನಾರಾ
ಧಿಸುವೆಂ ನೆಗೞ್ದರ್ಹತ್ ಸಿ
ದ್ಧಸಾಧುಧರ್ಮಂಗಳಂ ಚತುರ್ಮಂಗಳಮಂ ೮

ಅಱಿವು ನೆಗೞ್ತೆಯೆಂಬುಭಯಕಾಂಡಮೆ ಮುಕ್ತಿಪಥಕ್ಕೆ ಹೇತುವೆಂ
ದಱಿಪುವರನ್ಯರಂತವರೊಳೇನೊ ಜಿನಾಗಮಮಂತುಟಲ್ತು ಮಿ
ಕ್ಕಱಿವಿನ ಮಿಕ್ಕ ನಂಬುಗೆಯ ಮಿಕ್ಕ ನೆಗೞ್ತೆಯ ಕೂಟ[1]ದಿಂದಮಾ[1]
ದಱಿವನಿತರ್ಕಮಾ[3]ನೆ[2]ಱಗಿ ಪೊರ್ದುವೆ[3]ನ[3]ಕ್ಕಪವರ್ಗ ಮಾರ್ಗಮಂ ೯

ನೆಗೞ್ದಜಿತನಜೇಯಂ ಧರ್ಮಚಕ್ರಕ್ಕೆ ಕರ್ಮಾ
ರಿಗಳಗಿಯೆ ಜಿನಶ್ರೀಸೇವ್ಯನಪ್ಪಂದು ಭವ್ಯಾ
ಳಿಗೆ ಹಿತಕರನಾದಂ ಧರ್ಮಮಂ ನಿರ್ಮಲಂ ಮಾ
ಡುಗೆ ಗಣಧರಸೇನಾನಾಯಕಂ ಸಿಂಹಸೇನಂ ೧೦

ಎರಡರ್ಕಂ ಪ್ರತ್ಯಕ್ಷಂ
ಪರೋಕ್ಷಮೆಂಬಿದುವೆ ಭೇದಮಲ್ಲದೆ ಭೇದಾಂ
ತರಮುಂಟೆ ಸಕಳ ತತ್ವ
ಪ್ರರೂಪಿಗಳ್ ಕೇವಲಶ್ರುತಜ್ಞಾನಂಗಳ್ ೧೧

1 ದಿಂ (ಗಚ) 2 ಮೆ (ಕಗಟ) 3 ಮಿ (ಗ)

ಅಕ್ಕಂ ಬೋಧಂ ಶ್ರುತದೊಳ
ಪೊಕ್ಕಂದಾ ಬೋಧದಿಂದೆ ಸುಗತಿಯನೆಯ್ದು
ಲ್ಕಕ್ಕುಮದಱಿಂದಮುಭಯಭ
ವಕ್ಕಂ ಶ್ರುತದಿಂದೆ ಹಿತಕರಂ ಪೆಱತುಂಟೇ ೧೨

ಪದಿನಾಱಿಲ್ಲವಲಂಕ್ರಿಯಾರಚನೆ ಮೂವತ್ತಾಱು ನೇ[1]ರ್ಪ[1]ಟ್ಟುವೊಂ
ದಿದ ಶೃಂಗಾರಮದಲ್ಲವೊಂದೆ ರಸವೊಂಬತ್ತೆಯ್ದೆ ಡಂಬಟ್ಟುವೆಂ
ಬುದನೆಂಬನ್ನೆಗಮಂಗನೋಚಿತ ರಸಾಲಂಕಾರಮಂ ತಾಳ್ದಿದೊ
ಪ್ಪಿದ ವಾಕ್ಸುಂದರಿ ಬಂದು [2]ಸನ್ನಿ[2]ಹಿತೆಯಕ್ಕಸ್ಮನ್ಮುಖಾಂಭೋಜದೊಳ್ ೧೩

ಶ್ರೀಮದಗಣ್ಯ ಪುಣ್ಯನಿಧಿ ಜೈನಪದಾಂಬುಜಭೃಂಗಿ ಜೈನಧ
ರ್ಮಾಮೃತವಾರಿ[3]ವ[3]ರ್ಧಿತ ವಿನೇಯಜನೋತ್ಸವ ಸಸ್ಯಭೂಮಿ ಮ
ದ್ಭೂಮಿಗೆ ತಾನೆ ಬೇಲಿಯೆನಿಪಂಕದ ರೋಹಿಣಿ ಯಕ್ಷಿ ದಾನಚಿಂ
ತಾಮಣಿ ಮಾಱಿಕ್ಕೆ ಚಿಂತಿತ ಮನೋರಥಮಂ ಕವಿಚಕ್ರವರ್ತಿಯಾ ೧೪

ಪರಿಪೂರ್ಣಾಯತವಕ್ಷನಂಬುರುಹಪತ್ರಾಕ್ಷಂ ಜಿನೇಂದ್ರಾಂಘ್ರಿಪಂ
ಕರುಹಾನಂದಕ ಕಲ್ಪವೃಕ್ಷನಜಿತಶ್ರೀ ತೀರ್ಥಕೃತ್ಸಿಂಹವಿ
ಷ್ಟರ ಸಂರಕ್ಷಣ ದಕ್ಷನಕ್ಷಯ ಫಲಾಪೇಕ್ಷಂ ಮಹಾಯಕ್ಷನಾ
ದರದಿಂ ರಕ್ಷಿಸುತಿರ್ಕುಪಾಸಕ ಗ[4]ಣ[4]ಶ್ರೀಸೇವ್ಯರಂ ಭವ್ಯರಂ ೧೫

ಪಸರಿಸಿದ ಕುತೀರ್ಥಧ್ವಾಂತಮಂ ತೂಳ್ದಿ ಭವ್ಯ
ಪ್ರಸರ ಕಮಲಬೋಧಾವಾಪ್ತಿಯಂ ತಾಳ್ದಿ ಪೆಂಪಿಂ
[5]ವಿಶದ ವಿಭವ ತೇಜಶ್ಚಕ್ರಮರ್ಕಂಬೊಲುದ್ಯೋ
ತಿಸುಗೆ ಸಕಲ ಧಾತ್ರೀಚಕ್ರದೊಳ್ ಧರ್ಮಚಕ್ರಂ ೧೬

ವಿಜಯಧ್ವಜಮಂ ದುರಿತ
ಧ್ವಜವಿಧ್ವಂಸನದೊಳೆತ್ತಿ ನೀ[6]ಡುಂ[6]ಧರ್ಮ

1 ರ್ವ (ಕಗಚ) 2 ಸನ್ನ (ಕಗಜ) 3 ವಾ (ಗಚಜ) 4 ಣಂ (ಗಚಜ) 5 ನಿಸದ ನಿಜದ (ಕಗಚ) ವಿಶದ ನಿಜಿತ (ಜ) 6 ನುಂ (ಕಗಚಜ)

ಧ್ವಜನೆನಿಸಿದಜಿತನಾಥನ
ಗಜಧ್ವಜಂ ಮಾಡುಗೆಮಗೆ ಕೀರ್ತಿಧ್ವಜಮಂ ೧೭

ಅಜಿತಂ ವಿಷಯವಿಷಂಗ
ಳ್ಗಜಿತನನಂಗಂಗೆ ಖಳಕಷಾಯಭಟರ್ಕ
ಳ್ಗಜಿತನೆನಿಪಜಿತಜಿನನಪ
ವೃಜಿನನಪಾಕೃತ ಕೃತಾಂತ ಕೋಪಾಟೋಪಂ ೧೮

ಅಜಿತಜಿನಪದಪಯೋರುಹ
ರಜಸ್ಸಮಾಸಂಗಿ ಭೃಂಗಿ ಗುಣಶೀಲದಯಾ
ಧ್ವಜೆಯೆಂದು ನಾಡೆ ಸುವಿನೇ
ಯಜನಂ ಬಣ್ಣಿಪುದು ದಾನಚಿಂತಾಮಣಿಯಂ ೧೯

ದಿಗಿಭದೊಳಗಮರಕರಿ ದಾ
ನಿಗಳೊಳಗಗ್ಗಳದ ದಾನಚಿಂತಾಮಣಿ ಚ
ಕ್ರಿಗಳೊಳಗಾಹವಮಲ್ಲಂ
ಮಿಗಿಲೆನಿಕುಂ ವಿಷಯದೊಳಗೆ ವೆಂಗೀವಿಷಯಂ ೨೦

ತುಂಗಮತಂಗಜೇಂದ್ರವನದಿಂ ಫಲಭಾರವಿನಮ್ರ ನಾಳಿಕೇ
ರಂಗಳನದ್ರಿಕಾನನದಿನುತ್ತಮ ಶಾಳಿವನಂಗಳಿಂ ಚಳ
ದ್ಭೃಂಗಕುಳಾಕುಳೀಕೃತ ಸರೋರುಹಷಂಡದಿನಿಕ್ಷು ಪುಷ್ಪವಾ
ಟಂಗಳಿನಾವ ಮಂಡಲಮುಮಂ ಗೆಲೆವಂದುದು ವೆಂಗಿಮಂಡಲಂ ೨೧

ಅಲ್ಲಿ ಕಂಟಕವೃತ್ತಿಯುಂ ವಯಃಪರಿಣತಿಯುಂ ಫಲತರುಗಳೊಳೆ, ದಾನಭಂಗಮುಂ ಗಜಂಗಳೊಳೆ, ಕಂಠಗ್ರಹಮುಂ ಸಂಭೋಗದೊಳೆ, ಚಳನಕ್ರಿಯೆಯುಂ ರಸವಾದದೊಳೆ; ಮತ್ತಂ ಧನದರಲ್ಲದ ಧನದರಿಲ್ಲ, ತಕ್ಕರಲ್ಲದೆ ಟಕ್ಕರಿಲ್ಲ, ಜನ್ನಮಲ್ಲದೆ ಬನ್ನಮಿಲ್ಲ, ಭೋಗಮಲ್ಲದೆ [1]ರೋಗ[1]ಮಿಲ್ಲ, ಅಱನಲ್ಲದೆ ಬಱನಿಲ್ಲ, ಪೆರ್ಚಲ್ಲದೆ ಬೆರ್ಚಿಲ್ಲ, ಕುಲೀನರಲ್ಲದಕುಲೀನರಿಲ್ಲ, ವಂದಿಯಲ್ಲದೆ ಬಂದಿಯಿಲ್ಲ, ಜಾತಿಯಲ್ಲದೆ ವಿಜಾತಿಯಿಲ್ಲ, ವಿದಗ್ಧರಲ್ಲದವಿದಗ್ಧರಿಲ್ಲ, ಸುರಾಲಯಮಲ್ಲದಸುರಾಲಯಮಿಲ್ಲ, [2]ಸು[2]ಪ್ರ

1 ರಾಗ (ಕಟಿತ) 2 ವಿ (ಕಟಿತ)

ಳಾಪಮಲ್ಲದೆ ವಿಪ್ರಳಾಪಮಿಲ್ಲ, ಪಾರಿಜಾತಮಲ್ಲ[1]ದಪಾರಿಜಾತ[1]ಮಿಲ್ಲ, ಅಧಿಕಾರಿಗಳಲ್ಲದೆ ವಿಕಾರಿಗಳಿಲ್ಲ, ವಿಪ್ರಯುಕ್ತರಲ್ಲ[2]ದವಿ[2]ಪ್ರಯುಕ್ತರಿಲ್ಲ, ಪರಲೋಕಭಯಮಲ್ಲದಪರಲೋಕಭಯಮಿಲ್ಲ, ಪರಾರ್ಥವೇಷಿಗಳಲ್ಲದೆ [3]ಅಪ[3]ರಾರ್ಥವೇಷಿಗ[4]ಳಿಲ್ಲ, ಪಾಪಭೀರುಗಳಲ್ಲದಪಾಪಭೀರುಗಳಿಲ್ಲ[4], ಪರಹಿತವ್ಯಸನಿಗಳಲ್ಲದೆ ದುರ್ವ್ಯಸನಿಗಳಿಲ್ಲ, ಗೋಸಾಸಮಲ್ಲದೆ ಕನ್ನೆಗೋಸಾಸಮಿಲ್ಲ.

ಸಕಲ ವಿನೇಯ ಸಂಹತಿಯೊಳಲ್ಲದವಗ್ರಹಮೆಂಬುದಿಲ್ಲ ದೈ
ವಕೃತಮದಾದೊಡಂ ಕಳೆಯ ಕಟ್ಟದ ಕಾಲ್ಗಳ ನೀರೆ ಸಾರ್ವಕಾ
ಲಿಕ ಫಲದಾಯಿಯಗ್ಗಳದ [5]ಬ[5]ತ್ತದ [6]ಪೆ[6]ರ್ವೆಳಸಿಂದೆ ದೇವಮಾ
ತೃಕಮುಮುತ್ಕೃಷ್ಟಪಚ್ಯಮುಮೆನಲ್ ದೊರೆವೆತ್ತುದು ವೆಂಗಿಮಂಡಲಂ ೨೨

ಅಳಿಗೀತ ಕುಸುಮಪರಿಮಳ
ಫಲರಸ ಮಂದಾನಿಲಾದ್ರಿ ಕಾನನಲೀಲಾ
ವಿಲಸನದಿಂ ಭೋಗಮಹೀ
ತಳಮೆನಿಪುದು ವಿಷಯಜನಕೆ ವೆಂಗೀವಿಷಯಂ ೨೩

ಜಳಧಿತರಂಗತಾಡಿತ ಮಹೀತಳದೊಳ್ ನೆಗೞ್ದಿತ್ತು ವೆಂಗಿಮಂ
ಡಲಮದಱೊಳ್ ಜಿತಾನ್ಯವಿಷಯಂ ನೆಗೞ್ದಿರ್ದುದು ಕಂಮೆದೇಶಮು
ಗ್ಗಳಿಕೆಯ ಕಂಮೆದೇಶಮನಲಂಕರಿಸಿರ್ದುದು [7]ಪುಂಗ[7]ನೂರ್ ಜಗ
ತ್ತಿಲಕ[8]ಮದರ್ಕೆ[8] ಮುಖ್ಯಮೆನೆ ಪೆಂಪೆಸೆದಿರ್ದುದು ನಾಗಮಯ್ಯನಾ ೨೪

ನಾಗಮನರ್ಥಿಮಯೂರ[9]ಘ[9]
ನಾಗಮನಧಿಗತ ವಿನೇಯಜನಹಿತಕರ ಜೈ
ನಾಗಮನ[10]ಧಿ[10]ಕರಿಪ್ರೊಂ ದಿ
ಗ್ನಾಗಮನಕ್ಷೂಣ ಭದ್ರಲಕ್ಷಣಗುಣದಿಂ ೨೫

1 ದೆ ಪರಾಜಿತ (ಕಟತ) 2 ಡಿವ (ಗಚತ) 3 ಪ (ಕಟತ) 4 ಳಿಲ್ಲ (ಗಚಜ) 5 ಬಿ (ಕ) 6 ಹೆ (ಚ) 7 ಪಂಗು (ಗಜ) 8 ಮಿದಕ್ಕೆ (ಕ) ಮದಕ್ಕೆ (ಜ) 9 ಸು (ಜ) 10 ನು (ಕಗಚಜಟ)

ಆ ನೆಗಟ್ದ ನಾಗಮಯ್ಯನ
ಸೂನುಗಳಿರ್ವರೆ ದಲವರೊಳಗ್ರಸುತಂ ವಿ
ದ್ಯಾನಿಧಿ ಮಲ್ಲಪನನುಜನ
ನೂನಗುಣಂ ಪೊನ್ನಮಯ್ಯ[1]ನಣ್ಣನ[1] ಭಕ್ತಂ ೧೬

ನೃಪಶಾಸ್ತ್ರಜ್ಞತೆಗಿಲ್ಲಿ ಮಲ್ಲಪನೊಳಶ್ವೇಭಾಗಮಕ್ಕಿಲ್ಲಿ ಮ
ಲ್ಲಪನೊಳ್ ಶೂರತೆಗಿಲ್ಲಿ ಮಲ್ಲಪನೊಳಾರ್ತೀವೊಳ್ಗುಣಕ್ಕಿಲ್ಲಿ ಮ
ಲ್ಲಪನೊಳ್ ಭವ್ಯತೆಗಿಲ್ಲಿ ಮಲ್ಲಪನೊಳಾಚಾರಕ್ರಮಕ್ಕಿಲ್ಲಿ ಮ
ಲ್ಲಪನೊಳ್ ನೋಟಿಪ್ಪೊಡೆ ಕಾಣಲಾಗದು ಸಮಾನಂ ಮಾನವಾನೀಕಮಂ ೧೭

ಪಂಡಿತಮಂಡಳಿಗಂ ಕವಿ
ಮಂಡಳಿಗಂ ತನ್ನ ಮನೆ ತವರ್ಮನೆಯೆನೆ ಕೆ
ಯ್ಕೊಂಡು ಪೊಗಟ್ದಿಪುದು ಭುವನಂ
ಕೌಂಡಿನ್ಯಕುಲಪ್ರದೀಪನಂ ಮಲ್ಲಪನಂ ೧೮

ನೃಪಸಭೆಯೊಳ್ ನುಡಿದಂ ಮ
ಲ್ಲಪ[2]ನುಮ[2]ಸತ್ಯಾಕ್ಷರಕ್ಕೆ [3]ಗೆಂಟ[3]ದಱಿಂ ಮ
ಲ್ಲಪನ ಮತ[4]ಮಿಂತುಟಾ[4]ದೇ
ಶಪೂರ್ವಕಂ ನುಡಿಯದಾತನುಂ ತದ್ವಿಧನೇ ೧೯

ಪಡೆವೆಂ ಪುತ್ರನನೊರ್ವನಂ ಪಡೆವೆನಾನೊಂದೇಸಿನಕ್ಕಂ ಜಯಂ
ನುಡಿ[5]ದಂ[5] ಕೇಳ್ದರಿಮೆಂದು ಮುನ್ನಱಿಪಿ ತತ್ತದ್ವಿದ್ಯನಾಚಾರದೊಳ್
ಗುಡಿಯುಂ ಕಟ್ಟೆ ಕುಮಾರಲೋಥ್ರಸಮರಪ್ರಾರಂಭದೊಳ್ ಬಲ್ಮೆ ನೇ
ರ್ಪಡೆ ಭೂವಲ್ಲಭನಂ ಮನಂಗೊಳಿಸಿದಂ [6]ಶೌರ್ಯಾ[6]ರ್ಜಿತಂ ಮಲ್ಲಪಂ ೨೦

ಅಱಿವೆಡೆಯೊಳ್ ಕಾಲತ್ರಯ
ಮಿಱಿವೆಡೆಯೊಳ್ ತನ್ನ ಶೌರ್ಯಮಂ ಬಲ್ಮೆಯುಮಂ

1 ನ (ಚ) 2 ನಂ (ಕಟತ) 3 ಗೆನಿಪ (ಚ) 4 ಮಿಂತುಟು (ಕ) ಫಿಂತುಟ (ಗಜ) ಮುಂತುಟ (ಟ) 5 ದಂ (ಗಜ) 6 ಶೌರ್ಯೋ (ತ)

ಮೆಱೆಪದಂ ಮಲ್ಲಪನಲ್ಲದೆ
ಪೆಱನಾವನೊ [1]ಶಸ್ತ್ರ ಶಾಸ್ತ್ರ[1]ವಿದ್ಯಾಕುಶಲಂ ೩೧

ಪೊನ್ನಂ ನಯವಿದನಯುಸಂ
ಪನ್ನಂ ಮಂದರ ಗಿರೀಂದ್ರದನ್ನಂ ನಿಜಧೈ
ರ್ಯೋನ್ನತಿಯೊಳ್ ಬಲ್ಮೆಯೊಳ್[2]ಜ[2]
ನನ್ನಂ ಧರ್ಮಕ್ಕೆ ಧರ್ಮನಂದನನನ್ನಂ ೩೨

ಬಲದೇವ ವಾಸುದೇವರ
ನಿಱಿ[3]ಪುದು[3] ಗುಣದೊಳ್ಪು ರಾಮಲಕ್ಷ್ಮಣರಂ ಪೆಂ
ಪಿಱಿ[4]ಪುದು[4] ಭೀಮಾರ್ಜುನರುಮ
ನಿಱಿಪುದು ಮಲ್ಲಪನ ಪೊನ್ನಮಯ್ಯನ ಚರಿತಂ ೩೩

ಗುರು ಜಿನಚಂದ್ರಮುನೀಂದ್ರರ
ಪರೋಕ್ಷದೊಳ್ ತಮ್ಮುಮೂರ್ತಿರ್ವರುಂ ಪೊನ್ನಿಗನಿಂ
ಬರೆಯಿಸಿದರ್ ಸಕಳೋರ್ವಿಗೆ
ಪರೆಯಿಸಿದರ್ ಸಲೆ ಪುರಾಣಚೂಡಾಮಣಿಯಂ ೩೪

ಜಿನಭಕ್ತಂ ಮಲ್ಲಪನ
ಣ್ಣನ ಭಕ್ತಂ ಪೊನ್ನಮಯ್ಯನವ[5]ರಿರ್ವರ ಮಾಂ[5]
ತನದಳವನಳೆಯಲಜನಾ
ಜಿನೆನಿಸಿ ಕೌಂಡಿನ್ಯಗೋತ್ರಮಂಡನರಾದರ್ ೩೫

ಪರಮ ದ್ರೋಹರೊಳೊಂದಿ ತನ್ನೊಳಿಱಿಯಲ್ ಗೋವಿಂದರಂ ಬರ್ಪುದುಂ
ಸೆರಗಂ ಪಾರದೆ ತಾಗಿ ತೈಲಪನೃಪಂ ಬಾಱಿಗ್ಗಂದು [6]ಬಾಳ್ಗಿ[6]ತ್ತು ಮ
ಚ್ಚರದಿಂ ಸಾರ್ಚಿದರಂ ಪಡಲ್ವಡಿಸಿ ಕಾವೇರೀಸರಿತ್ತೀರದೊಳ್
ಸುರಲೋಕಾತಿಥಿಯಾದ ಪೊನ್ನನೆ ವಲಂ ಗಂಡಂ ಪೆಱರ್ ಗಂಡರೇ ೩೬

---

1 ಶಾಸ್ತ್ರ ಶಸ್ತ್ರ (ಟಿತ) 2 ಜಂ (ಗಜ) 3 ಪಿದ (ಕಗಚಜ) 4 ದ (ಕಚ) ಪಿದ (ಗಜ)
5 ರಿರ್ವರುಮಾ (ಗಜ) 6 ಬಾಳಿ (ಗಜ)

ತಲೆ ಪಗೆವರ ಕೆಯ್ಯೊಳ್ ಸುರ
ಲಲನೆಯ ತೋಳೊಳಗೆ [1]ಪತಿ[1]ಯ ಭಂಡಾರದೊಳಂ
ನೆಲ[2]ಸೆ[2] ಸುಭಟರ್ಕಳೊಳ್ ಮೂ
ದಲೆ ನೆಗಬ್ದುದು ಪೊನ್ನನನ್ನನಾವನೊ ಮೊನೆಯೊಳ್ ೩೭

ಅವರೊಳಪ್ರತಿಮ ವಿಪ್ರಕುಲದೀಪನುಂ ಅಸಹಾಯ ಸಾಹಸೋತ್ಸಾಹಸಮುದಿತ ಸಂಪತ್ಸಂಪನ್ನನುಂ ಶರಣಾಗತವಜ್ರಪ್ರಾಕಾರನುಂ ಅಭಿಮಾನತುಂಗನುಂ ಅಹಿತ ಗಜಘಟಾಸಿಂಹನುಂ ಪತಿಹಿತಾಚಾರ್ಯನುಂ ಅಭಿನವ ಕೃಪಾಚಾರ್ಯನುಂ ಅವ ಲೋಕಿತ ಕಾಲತ್ರಯನುಂ ಆರಾಧಿತ ರತ್ನತ್ರಯನುಮಖಿಲ ಜಗತ್ರಯ ಪ್ರಸಿದ್ಧ ದಿಗಂಬರ ವೈರೋಚನ ಶ್ರೀಜಿನಚಂದ್ರದೇವ ಚರಣಾರವಿಂದಾರಾಧನಾ [3]ವಿಧಿ[3] ಕೃತಾಂತಃಕರಣನುಂ ಚಾಳುಕ್ಯಾಭರಣನುಂ ಶೀವುದಾಹವುಮಲ್ಲದೇವ ಸಾಮ್ರಾಜ್ಯ ಲಕ್ಷ್ಮೀ ಪ್ರವರ್ಧಮಾನ ಹೇತುಭೂತ ನಿಜಾದೇಶ ಪರಂಪರಾ ಪ್ರಕಾಶಿತ ಪರಿಜ್ಞಾನಾತಿ ಶಯನುಮಪ್ರತಿಮ[4]ಲ್ಲ[4]ನುಮೆನಿಪ ಮಲ್ಲಪಂಗೆ

ವಿನಯಮತಿ ನಾಗಿಯಬ್ಬೆಗ
ಮನೂನ ಗುಣನೆನಿಪ ನಾಗಮಯ್ಯಂಗಂ ನಂ
ದನೆಯೆನಿಸಿದಪ್ಪಕಬ್ಬೆಯೆ
ಜಿನಪಾದಪಯೋಜಭೃಂಗಿ ಕುಲವಧುವಾದಳ್ ೩೮

ಅಂತಾ ಪುಣ್ಯಭಾಜನರಪ್ಪವರ್ಗೆ ಗುಂಡಮಯ್ಯನುಮೆಳಮಯ್ಯನುಂ ಪೊನ್ನಮಯ್ಯನುಂ ಆಹವಮಲ್ಲನುಂ ಮಲ್ಲನುಮೆಂಬ ಪುರುಷರತ್ನಂಗಳುಂ ಅತ್ತಿಮಬ್ಬೆಯುಂ ಗುಂಡಮಬ್ಬೆ[5]ಯುಂ ನಾಗಿಯಬ್ಬೆಯುಮೆಂಬ[5] ಕನ್ಯಾ[6]ರತ್ನಂಗಳುಂ[6] ಪು[7]ಟ್ಟಿ[7] ಸಚಿವೋತ್ತಮನುಮುತ್ತಮಜಾತಿಯುಂ ಸಕಲ ಚಕ್ರವರ್ತಿಯ ಸಭಾ ಸಂವಾಸ ಚತುರನುಂ ಚತುರುಪಧಾವಿಶುದ್ಧನುಮೆನಿಸಿದ ಚಾಳುಕ್ಯಚಕ್ರವರ್ತಿಗೆ ಮಹಾ ಮಂತ್ರಿ[8]ಯಾದ[8]ಲ್ಲಪಂಗೆ ಪುಟ್ಟಿ ನಿಜಮಹೀಪತಿಯ ಮಹೀಭಾಗಕ್ಕೆ ದಿಗ್ನಾಗನುಂ ನಾಗರಾಜನುಮೆನಿಸಿದ ನಾಗದೇವನೆಂಬ ಪುರುಷರತ್ನಕ್ಕೆ ರತ್ನತ್ರಯಾಲಂಕೃತೆಯುಂ ದಾನಚಿಂತಾಮಣಿಯುಂ ಚಾರಿತ್ರಮೇರುವುಂ ಗುಣದಂಕಕಾರ್ತಿಯುಂ ಭವ್ಯ

1 ಪತ್ತಿ (ಜ) 2 ಸಿ (ಗ) 3 ವಿಧೇಯಿ (ಗ) 4 ಲ್ಲಪ (ಜ) 5 ಯುಮೆಂಬ (ಗಚಜ) 6 ರತ್ನದ್ವಯಂಗಳ್ (ಚ) 7 ಟ್ಟ (ಗಜ) 8 ಯಾದದ (ಕಜಟ) ಯಾ ಮ (ಗ)

ಮನೋರಥಜನ್ಮಭೂಮಿಯುಂ ಕವಿ[1]ವರ[1] ಕಾಮಧೇನುವುಂ ಜಿನಧರ್ಮಪತಾಕೆಯುಂ ಮಹಾಸತೀಕುಲತಿಲಕೆಯುಮೆನಿಸಿದತ್ತಿಮಬ್ಬೆಯುಂ ಪತಿವ್ರತಾಗುಣಮಂಡನ ಮಂಡಿತೆಯೆನಿಸಿದ ಗುಂಡಮಬ್ಬೆಯುಮೆಂಬ ಕನ್ಯಾರತ್ನದ್ವಯಮಂ ಕೊಟ್ಟನಿಬರುಂ ಸುಖಮಿರೆ ಮಲ್ಲ[2]ಪತ[2]ನೂಜಂ ಗುಂಡನ[3]ತಿಪ್ರಚಂಡ[3]ನಾಗಿ

ನರನೆನಿಪ ಶೌರ್ಯದಿಂ ಗೋ
ನರನಂ ಪೆಣದಿಱಿದು ಗೆಲ್ದು ನಿಜವಿಜಯಯಶಂ
ಪರೆಯೆ ನೆಗಟ್ಟಿದನವನೀ
ಧರೆಯೊಳ್ ಮಲ್ಲಪನ ತನಯನೆಂಬುನ್ನತಿ[4]ಯಂ[4] ೩೯

ವೀರಾವತಾರನೆನಿಸಿದ
ವೀರಂ ಮಲ್ಲಪನ ತಮ್ಮನುಂ ನಂದನರುಂ
ವೀರ[5]ನಳಿ[5]ಯಂ ನೆಗೞ್ತಿಯ
ವೀರಾಗ್ರಣಿ ನಾಗದೇವನೊಱಟರ ಮಲ್ಲಂ ೪೦

ಎನೆ ನೆಗೞ್ದ ದಲ್ಲನ ನಂ
ದನಂಗಮಾ ಕಾಂತೆಯತ್ತಿಮಬ್ಬೆಗಮಾದಂ
ತನಯಂ ಪಡೆವಳತೈಲಂ
ವಿನಯಾಲಂಕಾರನೆನಿಸಿದಣ್ಣಿಗದೇವಂ ೪೧

ಅಂತು ನಿಜಕುಲತಿಲಕನೆನಿಸಿದ ನನ್ನಿನಾರಾಯಣಂ ತನಗೆ ತನಯನಾಗೆ ನಾಗದೇವ ನಭಿನವ ಕಾಮದೇವನುಂ ಹಯವತ್ಸರಾಜನುಂ ಸುಭಟಚೂಡಾಮಣಿಯುಮೊಱಟರ ಮಲ್ಲನುಮಾಹವಮಲ್ಲದೇವ ಪಾದಪಂಕಜಭ್ರಮರನುಮೆನಿಸಿ

[6]ಕು[6]ಮರರ ಕಾಳಗದೊಳ್ ಪತಿ
ಯ ಮುಂದೆ ತಱಿಸಂದು ನಿಂದು ಕಡಿತಲೆಗೊಂಡ

---

1 ವೃಂದ (ಗಚಜ) 2 ತ (ಚ) 3 ಪ್ರತಿಮ (ಗಚಜ) 4 ಯಿಂ (ಗಜ) 5 ನನ್ನಿ (ಚಜ) 6 ಕೊ (ಗಚಜ)

ನ್ಯಮತಂಗಜಂಗಳಂ ವಿ
ಕ್ರಮಸಿಂಹಂ ದಲ್ಲನಂದನಂ ಪೊಣರ್ದಿಱಿದಿಂ ೪೨

ಜನಪತಿ ಮೆಚ್ಚಿ ತನ್ನಯ ಚಮೂಪತಿ ಮಾಡಿದನಾಪ್ತಮಂತ್ರಿದ
ಲ್ಲನ ಮಗನೀತನಂ[1]ತದಟರುಂ[1] ಪತಿಭಕ್ತರುಮಾಗಳಾರುಮಿ
ಲ್ಲೆನಿಸಿದ ನಾಗದೇವನಣಿ ಮುಟ್ಟೆ ದುರಂಧರ ನಾಗದೇವನೆಂ
ಬಿನಮಿಱಿದಿಕ್ಕಿದಂ ಸೆಣಸಿ ಪೊಕ್ಕರನಾಜಿಯೊಳಂಗರಕ್ಕಸಂ ೪೩

ಕಳಕುಳಮಾಗೆ [2]ಪಂ[2]ಚಲನ ಬಲ್ವಡೆ[2]ಪಂ[2]ಚಲನಶ್ವಸಂಕುಲಂ
ಕಳಕುಳಮಾಗೆ [2]ಪಂ[2]ಚಲನ ದಂತಿಘಟಾವಳಿ ಯುದ್ಧರಂಗದೊಳ್
[3]ಕಳಕುಳ[3]ಮಾಗೆ ಗಾತ್ರಕರದಂತಿವಿಘಾತದೊಳುಗ್ರದಂತಿ ಮು
ಕ್ಕಳ[4]ಕರು[4]ವಾಗರಂ ಪರಿದುದುದ್ಭಟನಿಂ ಸುಭಟತ್ರಿಣೇತ್ರನಿಂ ೪೪

ಬಲ್ಲಹನ ಬೆಸದೊಳೊಱಟರ
ಮಲ್ಲಂ ದಲ್ಲನ ತನೂಭವಂ ಕರಹ[5]ಟದಿಂ[5]
ಮಲ್ಲಮನಂ ಬೆನ್ನಟ್ಟಿದ
ಬಲ್ಲಾಳ್ತನದಿಂ ನಿಜೇಶನಂ ಮೆಚ್ಚಿಸಿದಂ ೪೫

ಅಂತನೇಕ ಸಂಗ್ರಾಮರಂಗಲಬ್ಧ ವಿಜಯಲಕ್ಷ್ಮೀಸಮಾಗಮದೊಳಮಾಹವಮಲ್ಲದೇವಪ್ರಸಾದಾಸಾದಿತ ಸೈನ್ಯಾಧಿಪತ್ಯ ಸಂಪತ್ಸಮಾಗಮದೊಳಮತ್ಯಂತ ಕಾಂತ ಕಾಂತಾದ್ವಯ ಸಮಾಗಮದೊಳಮುದ್ದಾಮ ಯೌವನಲಕ್ಷ್ಮೀ ಸಮಾಗಮದೊಳಂ ನೆಱೆದು ದೇವಾಂಗನಾಜನಸಮಾಗಮೋತ್ಸುಕಚಿತ್ತನಾಗಿ ನಾಗದೇವಂ ದೇವಲೋಕಕ್ಕೆ ಪೋಗೆ

ಎರಡೆ ವಲಂ ಕುಲವಧುಗಾ
ಚರಿಸಲ್ ಪತಿಯಿಂ ಪರೋಕ್ಷದೊಳ್ ಜಿನದೀಕ್ಷಾ
ಚರಣಂ ಮೇಣ್ ಶುಭಚರಿತದೆ
ಮರಣಂ ಮೇಣಳಿಪಿನಿಂದೆ ಬಾಳ್ವುದು ದೊರೆಯೇ ೪೬

---

1 ತಿರಿತದರ್ (ಕಗಚಜಟ) 2 ಸಂ (ಜ) 3 ಕಳ (ಗಜ) 4 ಕುದು (ಗಜ) ೫ ಡದಿಂ (ಕಟ)

ಎಂದು ಪರಿಚ್ಛೇದಿಸಿ ತಮ್ಮಕ್ಕನತ್ತಿಮಬ್ಬೆಯಲ್ಲಿಗೆ ಗುಂಡಮಬ್ಬೆ ಬಂದು ಬದ್ಧಾಂ[1]ಜಲಿ[1]ಯಾಗಿ

ನಿನಗೆ ಮಗಂ ಜಗತ್ತಿಲಕನಿರ್ದಪನಕ್ಕ ಮಗಂ ಸಮರ್ಥನ
ಪ್ಪಿನಮಿರು ನಾಗದೇವನೊಡನಾಂ ಬಸಕೇಳ್ದಪೆನೆಂದು ಬೇಡಿಕೊಂ
ಡಿನಿಯನನಪ್ಪಿಕೊಂಡುಚಿತಮಾಗೆ ಚಿತಾಗ್ನಿಯೊಳಣ್ಮಿಸತ್ತ ಸ
ಜ್ಜನಿಕೆಯ ಪೆಂಪು ಸಜ್ಜನಕೆ ಬಣ್ಣಿಸೆ ಸಂದುದು ಗುಂಡಮಬ್ಬೆಯಾ ೪೭

ಅಂತು ಗುಂಡೆಲ್ಲಂ ಪೋಗಲ್ಕೆ ಗುಂಡಮಬ್ಬೆ ಮಹಾಸತೀಸಮುಚಿತಾಚಾರದೊಳ ಮಾಭರಣದೊಳ್ ನೆಗಳ್ಕೆ

ನೆರೆಯದೆ ದಲ್ಲನಂದನನೊಳಾದರದಿಂ ಬಯಸುತ್ತು ಮಿರ್ಪನ
ಮ್ಮಿರವಕೃತಾರ್ಥಮಾದುದೊಡಸತ್ತು ಪತಿವ್ರತೆ ಗುಂಡಮಬ್ಬೆ [2]ಸೌಂ[2]
ದರಸುಭಟಂಗೆ ಸಗ್ಗದೊಳಮಿಲ್ಲಿ ಮನಃಪ್ರಿಯೆಯಾದಳೆಂದು ಮ
ಚ್ಚರಿಸುವರಿಂದ್ರ[2]ಸೌಂ[2]ದರಿಯರೇಂ ಸೊಬಗೋ ಸುಭಟತ್ರಿಣೇತ್ರನಾ ೪೮

ಅಂತಿರ್ವರುಂ ಗೀರ್ವಾಣಲೋಕದೊಳೆ ದಂಪತಿಗಳಾಗೆ

ಪತಿಯೊಡನೆನ್ನ ತಂಗೆ ದಹನಾರ್ಚಿಯೊಳೊಂದೆ ಮುಹೂರ್ತದೊಳ್ [3]ದಿವೋ[3]
ದಿತ ತನುವಾದಳಾಂ ಪಿರಿಯೆನಪ್ಪುದಱಿಂ ಪಿರಿದಪ್ಪ ದಾರುಣ
ವ್ರತ ದಹನಾರ್ಚಿಯಿಂದನುದಿನಂ ತನುವಂ ತನುಮಾಡುತಿರ್ಪೆನೆಂ
ಬತನುವಿರೋಧಮುಂ ತನುವಿರೋಧಮುಮೊಪ್ಪುಗು[4]ಮತ್ತಿಮಬ್ಬೆ
ಯೊಳ್[4] ೪೯

ಪತಿವಿಗಮದೊಳಸಿಧಾರಾ
ವ್ರತಂಗಳಂ ತಾಳ್ದಿ ಧರ್ಮಮಂ ಮಾಡುವ ಸಂ
ತತಿಯುಂ ಕಾಯುತೆ ಕಾಯ
ಸ್ಥಿತಿ[5]ಯಂ ತಾ[5]ನತ್ತಿಮಬ್ಬೆ ಮಾಣ್ಬಳೆ ಮಾಣಳ್ ೫೦

1 ಜಳಿ (ಕ) 2 ಸುಂ (ಜ) 3 ನಿವೇ (ಕಗಜಟ) 4 ನಾಡೆಮತ್ತಿಯೊಳ್ (ಗಜ)
5 ಯಾಯ್ತಾ (ಕಗಜಟ)

ಒಡಲನುಪವಾಸದಿಂ ತ
ನ್ನೊಡವೆಯುನನವರತ ದಾನದಿಂ ತವಿಸಿ ಜಸಂ
ಬಡೆದಳ್ ನೂರ್ಮಡಿ ತೈಲನ
ಪಡೆವಳ ತೈಲಪನ ಜನನಿಗೆಣೆ ಪೆಱರೊಳರೇ ೫೧

ದಶದಿಗ್ವಿಜಯದೊಳಮಳಿನ
ಯಶವೆಸೆವಿನಮತ್ತಿಮಬ್ಬೆ ಜಿನಧರ್ಮದಯಾ
ವಶವರ್ತಿ[1]ನಿ[1] ದಾನಂ ಪೂ
ಜೆ ಶೀಲಮುಪವಾಸಮೆಂಬಿವಂ ಪ್ರಕಟಿಸಿದಳ್ ೫೨

ಶ್ರಾವಕಧರ್ಮದೊಳ್ ದೊರೆಯೆನಲ್ ಪೆಱರಿಲ್ಲೆನೆ ಸಂದ ರೇವತೀ
ಶ್ರಾವಕಿ ತಾನೆ ಸಜ್ಜನಿಕೆಯೊಳ್ ಜನಕಾತ್ಮ[2]ಜೆ ತಾನೆ[2] ಶೀಲದೊಳ್
ದೇವಕಿ ತಾನೆ ದಾನಗುಣದಿಂದೆ ಸುಲೋಚನೆ ತಾನೆಯೆಂದು ಭ
ವ್ಯಾವಳಿ ಮೆಚ್ಚಿ ಬಣ್ಣಿಪುದು ಭವ್ಯಮನೋರಥಜನ್ಮಭೂಮಿ[3]ಯಂ[3] ೫೩

ಬುಧಜನವಂದಿತೆ ಧರ್ಮ
ಪ್ರಧಾ[4]ನೆ[4] ದರ್ಶನವಿಶುದ್ಧೆ ದಾನಗುಣೈಕಾಂ
ಬುಧಿಯೆನಿಸಿದ ಕವಿವರಕಾ
ಮಧೇನುವೆಂದೆಂಬುದತ್ತಿಮಬ್ಬೆಯನೆ ಜಗಂ ೫೪

ಜಿನಪದಭಕ್ತೆ ಜಗತ್ರಯ
ಜನವಂದಿತೆ ಚಕ್ರವರ್ತಿಪೂಜಿತೆ ಜಿನಶಾ
ಸನರುಚಿ ಪಡೆವಳ ತೈಲನ
ಜನನಿಯೆ ತೀರ್ಥಕರ ಜನನಿಯೆನ್ನದರೊಳರೇ ೫೫

ಮನದೊಳ್ ತಾಳ್ದುವಳೀ ಸತಿ
ಜಿನನಂ ಜಿನಜನನಿ ಗರ್ಭದೊಳ್ ತಾಳ್ದುವಳಂ
ಬಿನಿತೆ ವಿಕಲ್ಪಂ ತೈಲನ
ಜನನಿಗೆ ಜಿನಜನನಿಗೇಂ ವಿಕಲ್ಪಮುಮುಂಟೇ ೫೬

1 ಯಹ (ಗಜ) ಯ (ಟ)   2 ಜೆ (ಕಟ)   3 ಯಾ (ಗಜಚ)   4 ನ (ತ)

ಆಸನ್ನಭವ್ಯೆಯುಂ ಜಿನ
ಶಾಸನದೀಪಿಕೆಯುಮೆನಿಸಿ ಮಣಿಕನಕ[1]ಮಯೋ[1]
ದ್ಭಾಸಿ ಜಿನಪ್ರತಿಮೆಗಳಂ
ಸಾಸಿರದೈನೂಱನರ್ತಿಯಿಂ ಮಾಡಿಸಿದಳ್ ೫೭

ಸ್ಫುರಿತೋದ್ಯನ್ಮಣಿಘಂಟೆಗಳ್ ಮಣಿವಿತಾನಶ್ರೇಣಿಗಳ್ ಸ್ವರ್ಣಭಾ
ಸುರ ದೀಪಂಗಳ ಮಾಲೆ ದಿವ್ಯವಸನ ಪ್ರಾರಬ್ಧ ಶುಂಭಧ್ವಜೋ
ತ್ಕರಮುದ್ಭಾಸಿತ ರತ್ನತೋರಣಗಣಂ ಮಾಡಿರ್ದುವೊಂದೊಂದು ಸಾ
ಸಿರದೈನೂಱನೆಯತ್ತಿಮಬ್ಬೆಗೆಣೆಯೆಲ್ಲೀ ಕಾಲದೊಳ್ ದಾನಿಗಳ್ ೫೮

ಸಮಯಕ್ಕೆ ಪಂಚಶತವಧಿ
ಕಮಾಗೆ ಸಮಯಿಸಿ ಸಹಸ್ರಕೂಟ ಸಹಸ್ರಾ
ಸ್ರಮುಮಂ ಸಮಯಿಸಲಾರ್ಗಂ
ಸಮಯಿಸಿದಳ್ ಸಮನೆ ದಾನಚಿಂತಾಮಣಿಯೊಳ್ ೫೯

ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ ಜಿನಭಕ್ತೆ ಪೋಗಿ ಕಾ
ಣ್ಬನ್ನೆಗಮನ್ನಮುಂ ಬಿಸುಟು ಪರ್ವತಮಂ ಪರಿದೇಱಿ ತಜ್ಜಿನಾ
ಸನ್ನದೊಳತ್ತಿಮಬ್ಬೆಗೆ [2]ಪಥ[2]ಶ್ರಮಮಾದುದಕಾಲವೃಷ್ಟಿಯಾ
ಯ್ತಿನ್ನ[3]ದೊ[3] ದೇವಭಕ್ತಿಗದು ಚೋದ್ಯಮೆ ಕೊಳ್ಳವೆ ಪುಷ್ಪವೃಷ್ಟಿಗಳ್ ೬೦

ಗುಣಿಗಳುಮಂ ನೆಗೞ್ದಳ್ಪಿನ
ಕಣಿಗಳುಮಂ ಕಾಣಲಪ್ಪುದದಱಿಂದವಸ
ರ್ಪಿಣಿಯಲ್ತು ಕಾಲಮುತ್ಸ
ರ್ಪಿಣಿಯೆಂ[4]ಬಂತಾ[4]ಯ್ತು ದಾನಚಿಂತಾಮಣಿಯಿಂ ೬೧

ಈ ಮಹಿಗೆಲ್ಲಮುಗ್ಗಳದ ದಾನಿಯನಗ್ರಣಿ ಮಾಡಿ ದಾನಚಿಂ
ತಾಮಣಿಯಂ ನೆಗೞ್ತೆವಡೆದೊಪ್ಪ[5]ಮೆ[5]ಸಾಲ್ಗು ಮದರ್ಕೆ ಮುನ್ನ ಚಿಂ
ತಾಮಣಿ ಕಾಮಧೇನು ಸುರಭೂರುಹಮೆಂಬಿವನೇಕೆ ಮಾಡಿದಂ
ತಾಮರಸೋದ್ಭವಂ ಜಡಜಜಂಗೆ ವಿವೇಕಮದೆಲ್ಲಿ ಬಂದುದೋ ೬೨

1 ಮಹಾ (ಗಚಜ) 2 ಪದ (ಚ) 3 ದ (ಗಜ) 4 ಬುದಾ (ಕಟ) 5 ದೆ (ಕಗಚಜ)

ಫಳಲತಿಕೆ ಕಲ್ಪಲತಿಕೆಯು
ನಿೞಿಸಿ[1]ಸವ[1]ತ್ವಾಮರೇಂದ್ರಥೇನುವ ಗುಣಮಂ
ತಳೆ[2]ದಿ[2]ಳೆಯೊಳ್ ನೆಗೞ್ದುದು ಪಡ
ವಳ ತ್ರೈಲನ ಜನನಿಯತ್ತಿಮಬ್ಬೆಯ ದಾನಂ ೬೩

ಪದೆದೆಱ[3]ದರ್ಥಿಜನಕ್ಕಿ
ತ್ತುದೆ ಧನಮೀಯದುದೆ ಕೆಟ್ಟುದೆಂದರ್ಥಮನೀ
ವುದಱಿಂ ತನ್ನಿಷ್ಟಂ ಯ
ನ್ನದೀಯತೇ ಎನಿಪುದತ್ತಿಮಬ್ಬೆಯ ದಾನಂ ೬೪

ಕಲಿಯೆನೆ ನೆಗೞ್ದಳ್ ಕಸವರ
ಗಲಿಯೆನೆ ಗುಣದಂಕಕಾರ್ತಿ ಮೊನೆಯೊಳ್ ಮನೆಯೊಳ್
ಮೊಲೆವೊತ್ತ ತ್ರೈಲಜನನಿಯ
ಕೆಲದೊಳ್ ರಂಜಿಪರೆ ಮೀಸೆವೊತ್ತಣ್ಣಂಗಳ್ ೬೫

ಅಸಿಲತೆಯೊಂದು ಬಣ್ಣಿಪುದು ಧರ್ಮವಿರೋಧಿಜನಕ್ಕೆ ಧರ್ಮದಿಂ
ದೆಸೆಪ ಜನಕ್ಕೆ ಕಲ್ಪಲತೆಯೆಂ[3]ದಿ[3]ಳೆ ಬಣ್ಣಿಪುದೆಂಬ ತನ್ನ ಪೆಂ
ಪೆಸೆಯೆ ಜಗಜ್ಜನಂ ಪೊಗೞೆ[3] ಸಂದ ಮಹಾಸತಿಯಂ ತಗುಳ್ದು ಬ
ಣ್ಣಿಸುವುದು ಪುಣ್ಯಮಲ್ತೆ ಜಿನಧರ್ಮಪತಾಕೆಯನತ್ತಿಮಬ್ಬೆಯಂ ೬೬

ಸಂದೆಯಮಾವುದೊ ಮಾಡುವೆ
ನೆಂದೊಡೆ ಮಾಡಿದೊಡೆ *ಕುಡುವೆನೆಂದೊಡೆ ಪೆಱತೇ
ನೆಂದೊಡಮೆಗೊಟ್ಟಳಾ ನುಡಿ
ದಂದದೊಳೆನೆ ಪೊಗೞಿ ದಾನಚಿಂತಾಮಣಿಯಂ ೬೭

ಜಿನಪದಪಂಕಜಭ್ರಮರನೆಂಬ ನೆಗೞ್ತೆಯನಾಂತ ಮಲ್ಲಪ
ಯ್ಯನ ನೆಗೞ್ದಪ್ಪಕಬ್ಬೆಯ ಮಗಳ್ ಸಚಿವೋತ್ತಮನಪ್ಪ ದಲ್ಲಪ

1 ಸನ (ಚ) 2 ದೆ (ಗಜ) 3 ದೆ (ತ) *-* ಇಲ್ಲ (ಕಗಚಜ)

ಯ್ಯನ ಸೊಸೆ ನಾಗದೇವನ ಕುಲಾಂಗನೆ ತೈಲನ*ತಾಯ್† ಜಸಕ್ಕೆ ಭಾ
ಜನಮೆನಿಪತ್ತಿಮಬ್ಬೆ ಜಿನಶಾಸನಮಂ ಬೆಳಗುತ್ತಮಿರ್ದಪಳ್ ೭೮

ಶ್ರೀಜಿನಧರ್ಮವಿಭೂತಿ ವಿ
ರಾಜಿತೆಯಂ ಚಕ್ರವರ್ತಿಪೂಜಿತೆಯಂ ಭ
ವ್ಯಾಜಿರಕಲ್ಪಲತಾವಿ
ಭ್ರಾಜಿತೆಯಂ ಪೊಗಟಿ ದಾನಚಿಂತಾಮಣಿಯಂ ೭೯

ಉತ್ತಮ ಗೋತ್ರೋದ್ಭವೆ ಸ
ದ್ವೃತ್ತೆ ಮಹಾಸತಿ ವಿನೇಯ ಚೂಡಾಮಣಿ ತಾ
ನೆತ್ತುಟಿದರೆತ್ತ ಪಿಕ್ಕುವೊ
ಡತ್ತಿಯಬ್ಬಣ್ಣತ್ತಿಮಬ್ಬೆಯಲ್ಲದರ ಗುಣಂ ೮೦

ಸತಿಯರೊಳಗಗ್ಗಳದವನೀ
ಸುತೆ ಸೀತೆ ಪುಲೋಮಸುತೆ ಶಚೀದೇವಿ ಕುಭೃ
ತ್ಸುತೆ ಗಂಗೆ ದಕ್ಷಸುತೆ ಭವ
ಸತಿಯರ್ ಸಮನಪ್ಪಡಕ್ಕೆ ಮಲ್ಲಪಸುತೆಯೊಳ್ ೮೧

ಅಂಗನೆಯರೊಳಗೆ ಶೀಲಗು
ಣಂಗಳನೊಳಕೊಂಡು ನೆಗಟ್ದ ರಾಮಾಂಗನೆ ಕಾ
ಮಾಂಗನೆ ಪಂಕೇರುಹನಾ
ಭಾಂಗನೆ ಸಮನಕ್ಕೆ ನಾಗದೇವಾಂಗನೆಯೊಳ್ ೮೨

ನಂಬುಗೆ ಜಿನ[1]ಮತ[1]ದಲ್ಲಿ ಮ
ನಂಬುಗೆ ದರ್ಶನವಿಶುದ್ಧಿ[2]ಯಿ[2]ನೆ ನೆಗಟ್ದ ಜಯಂ
ತಾಂಬಿಕೆ ಸಲೆ ನೆಗಟ್ದ ಜಿತಜಿ
ನಾಂಬಿಕೆ ಸಮನಪ್ಪೊಡಕ್ಕೆ ತೈಲಾಂಬಿಕೆಯೊಳ್ ೮೩



1 ಪದ (ಗಚಜ) 2 ಯೆ (ಗಜಟ) † ಇಲ್ಲಿಂದ ಪದ್ಯದಕೊನೆಯವರೆಗೆ ಇಲ್ಲ (ಗಚಜ)

ಶೀಲಾಲಂಕೃತೆಯುಂ ಗುಣ
ಮಾಲಾಲಂಕೃತೆಯನಾ ಮಹಾಸತಿಯಂ ಶ್ರೀ
ತ್ಯೆಲಾಂಬಿಕೆಯುಂ ಪೆಸಗೊರ್ಳೆ
ಬಾಲೆಯರಂ ಖಳಕಲಂಕಮೇಂ ಪೊರ್ದುಗುಮೇ ೭೪

ಆಳುರದು ಕಿರ್ಚು ಮುಟ್ಟದು ವಿಷಾಹಿ ಮಹಾಸತಿಯಿರ್ದ ಮಂಡಲಂ
ಬೆಳೆವುದು ಬೇಡಿದಂತೆ ಮಟಿಕೊಳ್ವುದೆನಿಪ್ಪ ಜಸಕ್ಕೆ ನೋಂತ ಭೂ
ತಿಲಕಪವಿತ್ರಿಯುಂ ಗುಣಪವಿತ್ರಿಯನಾ ಸತಿಯುಂ ಮಹಾಸತೀ
ತಿಲಕೆಯನತ್ತಿಮಬ್ಬರಸಿಯುಂ ಪೆಸಗೊರ್ಳ್ವುದು ಪುಣ್ಯಕಾರಣಂ ೭೫

ಅದು ಕಾರಣದಿಂ

ಭ್ರಾಂತೇನಾದಿಪುರಾಣದ
ಶಾಂತಿಪುರಾಣದ ಸಮಾನಮೆನೆ ಕೃತಿಯುಂ ಕ
ಲ್ಪಾಂತಸ್ಥಾಯಿಯನಾಶ್ರಿತ
ಚಿಂತಾಮಣಿಗತ್ತಿಮಬ್ಬೆಗರ್ತಿಯೆ ಪೇಟಿಸ್ಸಿಂ ೭೬

ಪೊನ್ನಿಗ[1]ನಿಂ[1] ಮಲ್ಲಪನುಂ
ಪೊನ್ನನುಮರ್ತಿಯೆ ಪುರಾಣ ಚೂಡಾಮಣಿಯುಂ
ಮುನ್ನಂ ಪೇಟಿಸಿದಂತೆ ಗು
ಣೋನ್ನ[2]ತೆ[2] ಕವಿರತ್ನನಿಂದಿದಂ ಪೇಟಿಸಿದಳ್ ೭೭

ಎನಿತುಂಟಾಗಮವರ್ಣನ
ಮನಿತುಮನೊಳಕೊಂಡು ಸಕಲ ಭವ್ಯಜನಂಗ
ಳ್ಗನುರಾಗಮನೊಡರಿಸಿದಪು
ದೆನಿ[3]ಪ ಪುರಾಣಂ[3] ಪುರಾಣತಿಲಕಮಿದಲ್ತೇ ೭೮

ಜಿನತಿಲಕಚರಿತಮೆಸೆದಿರೆ
ಜಿನೇಂದ್ರನುತಿಮತಿ ಮಹಾಸತೀತಿಲಕಂ ಪೆಂ

1 ನುಂ (ಗಜಟ) [ನಿಂ](ತ) 2 ತ (ಕಚಟತ) 3 ಪ (ಚ)

ಷಿನ ಕಣಿ ಪೇಟಿಸೆ ಪೇ[1]ಟ್ದಂ[1]
ಮನಮೊಸೆದು ಪುರಾಣತಿಲಕಮಂ ಕವಿತ್ರಿಲಕಂ ೭೯

ಕವಿಮುಖಚಂದ್ರಂ ಕವಿಚ
ಕ್ರವರ್ತಿ ಕವಿರಾಜಶೇಖರಂ ಕವಿರಾಜಂ
ಕವಿಜನ ಚೂಡಾರತ್ನಂ
ಕವಿತಿಲಕಂ ಕವಿಚತುರ್ಮುಖಂ ಕವಿರತ್ನಂ ೮೦

ಕೊಂಡಾಟದ ಸಾಮಂತರ
ಮಂಡಳಿಕರ ಸಕಲ ಚಕ್ರವರ್ತಿಗಳ ಸಭಾ
ಮಂಡಳದೊಳುಭಯಕವಿಮುಖ
ಮಂಡನಮಾಗಿರ್ಪ ರತ್ನಮಿ ಕವಿರತ್ನಂ ೮೧

ಕವಿಮಾರ್ಗದೊಳೊಖ್ಖಾಣಿಪ
ಠವಣಿಪ ಕಮ್ಮೈಸುವೆಡೆಯೊಳಖ್ಖಾಣಿಸಲುಂ
ಠವಣಿಸಲುಂ ಕಮ್ಮೈಸಲು
ಮಿವನಂತಾರ್ ಬಲ್ಲರೆನಿಸಿದಂ ಕವಿರತ್ನಂ ೮೨

ವಸುಧೆಯೊಳಗೊಂದು ರತ್ನಮಿ
ದೆಸೆದಿರ್ದುದು ಪಲವು ರತ್ನಮಿಲ್ಲೆಂಬಿನಮೇಂ
ಮಸುಳಿಸಿದನೊ ಬಹುರತ್ನಾ
ವಸುಂಧರಾ ಎಂಬ ವಾಕ್ಯಮಂ ಕವಿರತ್ನಂ ೮೩

ಅವನಿಪರೊಳ್ ನಿಜಭುಜ ಚ
ಕ್ರವರ್ತಿ ರಣಜಯಕೆ ತೈಲನೆಂತಸಹಾಯಂ
ಕವಿಗಳೊಳವಂತೆ ಕವಿಚ
ಕ್ರವರ್ತಿ ಕವಿರ[2]ತ್ನ[2]ನಂತು ಕೃತಿಗಸಹಾಯಂ ೮೪

/

1 ಟ್ದಂ (ಗಜ) 2 ನ್ನ (ತ)

ಮತಿಕೋಶಂ ಪದವಿದ್ಯೆ ಕಂಠಿಕೆ ಜಸಂ ಶ್ವೇತಾತಪತ್ರಂ ಸರ
ಸ್ವತಿ ಮಾದೇವಿ ಪದೋಕ್ತಿ ಭೇರಿ ಕಳಿತಂ ಸಿಂಹಾಸನಂ ಸಂದಲಂ
ಕೃತಿ ಚಂಚಚ್ಚಮರೀಜಮಾಗೆ ಕವಿತಾಸಾಮ್ರಾಜ್ಯಮಂ ತಾಳ್ದಿದು
ನ್ನತಿಯಿಂದಂ ಕವಿಚಕ್ರವರ್ತಿವೆಸರೇಂ ರನ್ನಂಗೆ ಮೆಯ್ವೆತ್ತುದೋ ೮೫

ಕವಿಮಾರ್ಗದೊಳೊಳಪೊಕ್ಕುಂ
ನವರಸಮಂ ತಿಳಿಯೆ ನುಡಿದನೆನಿಸಿ[1]ದ ಕವಿ[1] ಸ
ತ್ಕವಿಯೆನಿಕುಂ ಗೂಡಾರದ
ಕವಿಯಂತಿರೆ ಮುಚ್ಚಿಪೋ[2]ದ[2] ಕವಿಯುಂ ಕವಿಯೇ ೮೬

ಕಾರಕ ಪೂರಕ ವಸ್ತುವಿ
ಚಾರಕ ನಿಸ್ತಾರಕರ್ಕಳೋಳಿಯೆ ಸಭೆಗೊ
ಟ್ಟೋರಂತೆ ನಾಲ್ವರಿರ್ದುವಿ
ಚಾರಂಬೇಟ್ಟಂತೆ ಪೇಟ್ದ ಕೃತಿಯುಂ ಕೃತಿಯೇ ೮೭

ದರಪುರಮುಮಂಟಸುಂಟೆ[3]ಯು
ಮರೆವೋರಕನುಮೆನಿಸಿ ತಱತಱಂ ನುಡಿದು ಸಭಾಂ
ತರದೊಳ್ ರಂಜಿಪುದೆ[3] ರಸಾಂ
ತರಂಗಳಂ ಮುಟ್ಟೆ ನುಡಿದು ರಂಜಿಸವೇಡಾ ೮೮

ಸರಸತಿಯನಬಲೆಯಂ ಗೋ
ಣ್ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವವನ
ಕ್ಕುರಿಗನೆ ಪಾತಕನಾತನೆ
[4]ಸರಸ್ವತೀದ್ರೋಹನವನನಾರ್ ಮುಟ್ಟುವರೋ[4] ೮೯

[5]ಪೊಸದೇಸೆಯಂ ಬೆಡಂಗಂ
ರಸಘಟ್ಟೆ[5]ಯನರ್ಥದೃಷ್ಟಿಯಂ ಬಗೆವರೊ ಭಾ

1 ದ (ಗಜ) 2 ಪ (ಗಜಜ) 3 ಯು (ಚ) 4 ಸ (ಚ) 5 ಪುಳ್ದ (ಚ)

ವಿಸುವರೊ ಸಾರಣೆಯಂತಿರೆ
ಕಸವಂ ಪಿಡಿವರ್ ಕೆಲರ್ ಮಹಾಪುರುಷರ್ಕಳ್ ೯೦

ಗುಣಮಂ ಕಾಯದೆ ಕಾವರೇ ಪಣಮುಮಂ ಕಲ್ಪಾಂತರಸ್ಥಾಯಿಯೇ.
ಗುಣದಂತಾ ಪಣಮನ್ಯರಿಂದರಸರಿಂ ದಾಯಾ[1]ದ[1]ರಿಂ ಕಳ್ಳರಿಂ
ಪಣಮೆಂತುಂ ಕಿಡಲಿರ್ಪುದುಳ್ಳ ಗುಣಕೇಂ ಕೇಡುಂಟೆ ಕಾವ್ಯಂಗಳೊಳ್
ಗುಣಮಂ ಬೈತಿಡವೇಡ ನಿಲ್ವೊಡೆ ಗುಣಂ ನಿಲ್ಕುಂ ಪಣಂ ನಿಲ್ಕುಮೇ ೯೧

ಶೃಂಗಾರನದಿಯನೆಳವೆಱಿ
ಮಾಂಗಾಯನೆ ಮಱಿಸಿ ಪೇೞಿವೇೞ್ಪುದೆ ರಸಭಾ
ವಂಗಳನಾಗಮಮುಮಂ ಕಾ
ವ್ಯಾಂಗಮೆ ಬಹುಯುದ್ಧರೋಮಕರ್ಕಶವಚನಂ ೯೨

ಜಿತಕಂದರ್ಪಮೆನಿಪ್ಪ ಶಾಂತರಸಮೆತ್ತು ದ್ದಾಮ ಶೃಂಗಾರಮೆ
ತ್ತತಿಗಂಭೀರ ಜಿನೋಕ್ತಿಯೆತ್ತ ಸಕಲಂ ಲೋಕೋಕ್ತಿಯೆತ್ತಾಗಮಾ
ಮೃತಮೆತ್ತನ್ಯಮತ ಪ್ರಚಂಡವಿಷಮೆತ್ತೆಂಬಂತು ಕಿಂಕೇನ ಸಂ
ಗತಮೆಂಬಂತಿರೆ ಪೇೞ್ದ ಧರ್ಮಕಥೆಯಂ ಪಾಪಕ್ಕೆ ಪಕ್ಕಪ್ಪುದೇ ೯೩

ನೆಗೞ್ದ ಕವಿರತ್ನನಂತೊಳ
ಪುಗುವುದು ಮೊಗ್ಗಾಯ್ತು ಜಿನಮತಾಂಬೋಧಿಯುಮಂ
ಪುಗದಾಗಮಮಱಿವರ ಬಗೆ
ವುಗದೆ ಕೆಲರ್ ಕವಿಗಳಾಡಿದರ್ ತಡಿ[2]ತ[2]ಡಿಯೊಳ್ ೯೪

ಸುರಲೋಕಾವತರೋತ್ಸವಂ ಪರಿಕೃತಂ ಜನ್ಮಾಭಿಷೇಕೋತ್ಸವಂ
ಪರಿನಿಷ್ಕ್ರಾಂತಿಮಹೋತ್ಸವಂ ಪ್ರವಿಮಲಂ ಕೈವಲ್ಯಬೋಧೋತ್ಸವಂ
ಪರಿನಿರ್ವಾಣಮಹೋತ್ಸವಂ [3]ಜಿನಮಹಾ[3]ಕಲ್ಯಾಣಮೈದುಂ ಸವಿ
ಸ್ತರದಿಂದಿರ್ಪುವು [4]ವರ್ಣ[4]ಕಂಗಳಿವಱಿಂ ಭವ್ಯಾಂಗಮೇನೊಪ್ಪದೇ ೯೫

---

1 ದ್ಯ (ಕ) 2 ದ (ಕ) 3 ಜಿನ (ತ) 4 ವರ್ಣ (ತ)

ಪೆಸರ್ಗೊಂಡರ್ತಿಯೊಳತ್ತಿಮಬ್ಬೆಯ ಗುಣವ್ರಾತಂಗಳಂ ಕೇಳ್ದು ಭ
ವ್ಯಸಮೂಹಂ ಪೊಗೞ್ವಂತು ಕೀರ್ತಿ ನೆಗೞ್ವಂತೀ ಲೋಕದೊಳ್ ಬಲ್ಮೆ ರಂ
ಜಿಸೆ ಬಲ್ಲರ್ಗೆಡೆಗೊಂಡು ಬಣ್ಣಿಸೆ ಮಹಾಕಾವ್ಯಂಗಳೊಳ್ ಮೆ[1]ಚ್ಚೆ[1] ಬ
ಣ್ಣಿಸುವೆಂ ಪುಣ್ಯಪುರಾಣಮಂ ಜಿತಮನೋಜಾತಾಜಿತಸ್ವಾಮಿಯಾ ೯೬

ಇದು ಸಕಲ ಮುನೀಂದ್ರವೃಂದವೃಂದಾರಕ ಶ್ರೀಮದಜಿತಸೇನಭಟ್ಟಾರಕ
ಶ್ರೀಪಾದಪದ್ಮಪ್ರಸಾದಾಸಾದಿತ ರತ್ನತ್ರಯಾಲಂಕೃತ ಶ್ರೀಮದಭಿನವ
ಕವಿಚಕ್ರವರ್ತಿ ಕವಿರತ್ನ ನಿರ್ಮಿತ ಶ್ರೀದಾನಚಿಂತಾಮಣಿ ನಿರ್ಮಾಪಿತ
ಶ್ರೀಮದಜಿತತೀರ್ಥಕರ ಪುರಾಣ[2]ತಿಲಕದೊಳ್[2]

## ಕಥಾಪರಿವರ್ಣನಂ

## ಪ್ರಥಮಾಶ್ವಾಸಂ

1 ಚ್ಚ (ಕಟ) 2 ದೊಳ್ (ಗಜ)

# ದ್ವಿತೀಯಾಶ್ವಾಸಂ

ಶ್ರೀಮದಮರೇಂದ್ರರುಂದ್ರ ಶಿ
ಖಾಮಣಿಮಾಲಾರ್ಚಿತಾಂಘ್ರಿ ಭುವನತ್ರಯ ಚೂ
ಡಾಮಣಿಯೆನೆ ನೆಗಟ್ದ ಜಿತ
ಸ್ವಾಮಿಯ ಜಿನಪತಿಯ ಚರಿತಮುಪಗತದುರಿತಂ ೧

ಅದೆಂತೆಂದೊಡೆ ಅಖಿಲ ಜಲಚರಕುಲಕಳಬಧಿರಕೋಳಾಹಳ ಸಮುಚ್ಛಲಿತ ಪ್ರಬಲ ರೌದ್ರ ಲವಣಸಮುದ್ರಮಧ್ಯಸ್ಥಿತ ಜಂಬೂದ್ರುಮೋಪಲಕ್ಷಿತ ಜಂಬೂದ್ವೀಪ ಮಧ್ಯವರ್ತಿಯುಂ ಸಕಲ ಕುಲಾಚಲಚಕ್ರವರ್ತಿಯುಂ ನಿಖಿಳ [1]ಶೈಲಕುಲ[1] ಚಕ್ರವಾಳ ಚೂಡಾಮಣಿಯುಮೆನಿಸಿ

ಎರಡುಂ ವಿದೇಹವಿಷಯದ
ಭರತೈರಾವತದ ನಟ್ಟನಡುವಿರ್ದುದು [2]ಸೌಂ[2]
ದರ ಮಂದರಾಚಲಂ ಕಂ
ದರೋದರಂ ಕಿನ್ನರಾಮರಸ್ತ್ರೀರಮ್ಯಂ ೨

ವನಧಿದ್ವಿಪಕುಲಾದ್ರಿಮುದ್ರಿತ ಜಗಚ್ಚಕ್ರಂ ಯುಗಾಂತ ಪ್ರ[3]ಭಂ[3]
ಜನನೀರಾವತ ಚಕ್ರದಂತೆ ತಿರಿವಂತಾಳ್ಗಂ [4]ನಿರಾ[4]ಳಂಬಮಾ
ಬನವಾಸಂ ರಸೆಗೆಂಬ ಶಂಕೆಯೊಳೆ ದೇವೇಂದ್ರಾಲಯಂಗಳ್ಗೆ ದೇ
ವನಗಂ ಪೋಲ್ವುದು ಪದ್ಮಗರ್ಭನ ಕಿರೀಟಸ್ತಂಭಮಂ ಸ್ತಂಭಮಂ ೩

ಕ್ರಮದಿಂದಂ ಬಂದು ಪರಿ
ಭ್ರಮಣಂಗೆಯ್ವಲ್ಲಿ ಮಂದರಾದ್ರಿಗೆ ರತ್ನೋ
ತ್ತಮಕುಂಡಲಯುಗಮೆನೆ ಪೌ
ರ್ಣಮಿಯಂದಿನ ಚಂದ್ರಸೂರ್ಯಮಂಡಲಮೆಸೆಗುಂ ೪

---

1 ಕುಲ (ಚ) 2 ಸುಂ (ಗಜ) 3 ಭಾಂ (ಗಜ) 4 ನಿರೇ (ಕ)

ಮೇರುನ್ನೃಪಂಗೆ ನಭಃಶ್ರೀ
ನೀರಾಜನವಿಧಿಯನೊಸೆದು ಮಾಳ್ಪಿಂತೆಸೆದ
ತ್ತಾರಾತ್ರಿಕ ದೀಪದವೊಲ
ಹೋರಾತ್ರಂ ಬಳಸಿ ಬರ್ಪ ತಾರಾಚಕ್ರಂ ೫

ನಾಭೇಯ ಜಿನಮಹಾಜ
ನ್ಮಾಭಿಷವ ಕ್ಷೀರವಾರಿಧಾರಾಪ್ರಸರಂ
ಶೋಭಿಪ ನಿಜಕೀರ್ತಿಪತಾ
ಕಾ[1]ಭಾವ[1]ದಿನೆಸೆದುದಂದು ಮಂದರಶೈಲಂ ೬

ಆ ಮಂದರದ ದಕ್ಷಿಣಕ್ಷೋಣೀತಳದ ಭರತಕ್ಷೇತ್ರದ ಮಧ್ಯವರ್ತಿಯಾಗಿ

ನೆಗಟ್ದಿಕ್ಷ್ವಾಕುಕುಲಪ್ರಸೂತ ಸಕಲ ಕ್ಷ್ಮಾಪಾಲ ಭೂಪಾಲಲ
ಕ್ಷ್ಮಿಗಧಿಷ್ಠಾನಮುಮಾದಿತೀರ್ಥಕರ ಜನ್ಮಸ್ಥಾನಮುಂ ಚಕ್ರವ
ರ್ತಿಗೆ ನಾಭೇಯತನೂಭವಂಗೆ ಭರತಂಗೇಕಾತಪತ್ರಪ್ರಭಾ
[2]ಸ್ಫುರಿತಾ[2]ಸ್ಥಾನಮುಮೆಂಬ [3]ಪೆಂಪನೊಳಕೊಂಡಿರ್ದ[3]ತ್ತಯೋಧ್ಯಾಪುರಂ ೭

[4]ಉತ್ಸಾಹರಗಳೆ[4]
ಅದಟಿ ಬಳಸಿದುಪವನಂಗಳುದಿತ ಕೋಕಿಲಸ್ವನಂಗ
ಳೆಸೆವಶೋಕಚೂತವನದ ಮಿಸುಪ ವಕುಳತಿಲಕವನದ
ನಾಗನಕ್ತಮಾಲವನದ ಪೂಗವನತಮಾಲವನದ
ಲೀಲೆ ಕರಮೆ ಕಣ್ಗೆವರ್ಕುಮೋಳಿವಟ್ಟು ಸೊಗಯಿಸಿರ್ಕು
ಮಲೆವ ಮಲೆಯ ಪವನನಿಂದಮುಲುಪ ಸೆಳ್ಳಿಗೊಂಬಿನಿಂದ
ಮುದಿರ್ದ ಕುಸುಮರಜದ ಧೂಳಿ ಪುದಿದುಮೋದುವರ ಶುಕಾಳಿ
ಪಾಡುತಿರ್ಪ ತುಂಬಿಯಿಂದಮಾಡುತಿರ್ಪ ಸೋಗೆಯಿಂದ
ಮೊಸೆಯೆ ಪುಟಿಲ ನೆಟಿಲ ತಾಣಮಿಸೆ ಕಡಂಗಿ ಕುಸುಮಬಾಣ
ನೆಳೆಯಲತೆಯ ಕಾವಣಂಗಳೊಳಗೆ ಕಾಮಿನೀಗಣಂಗ
ಳಳಿಪಿ ಪೊಕ್ಕು ನೀತಿ ಪೆರ್ಚೆ ಕಳಿಯೆ ಮದನಬಾಣಮುರ್ಚೆ

1 ಸ (ಗಜ) 2 ಸ್ಥಗಿತಾ (ಗಜ) 3 ಪೆರ್ಮೆಸರನಾಂತಿರ್ದ (ಗಜ) 4 ಲಲಿತರಗಳೆ (ಗಜ)

ಮೃದುಮೃಣಾಳಲೋಲಲೀಲೆ ವಿದಳದಬ್ಜಕುಸುಮಮಾಲೆ
ತಾರಹಾರಭಾರದಿಂಬು ಸಾರಚಂದನದ್ರುಮಾಂಬು
ಬೀಸುತಿರ್ಪ ತಾಳವೃಂತಮಾಸೆಯಾಗದಿರೆ ನಿತಾಂತ
ಮಾಸೆಮಾಡಲಾಱಿಮೆಂದು ಬೇಸಱಿಂಱೊದವೆ ಮನದೆ ನಿಂದು
ನಿಂದ ಬಿರಯಿಗದವಳಲ್ ಕುಂದದೆನಿಪ ಪೊಱಿವೊಟಿಲ್ ೮

ಹರಿತಾಳದೊಳ್ ನಖಾಗ್ರದೆ
ಬರೆದ ನಿಜಾವಸ್ಥೆಯುಂ ನಿವೇದಿಸೆ ಬನದಿಂ
ದರಗಿಳಿ ತಳರ್ವುವು ದೇಶಾಂ
ತರಕ್ಕೆ ಸಂದೇಶಹರರವೋಲ್ ಬಿರಯಿಗಳಾ ೯

ಅಡೆವೊತ್ತಿ[1]ನ[1] ತಳಿರ್ವಾಸಿನ
ಪಿಡಿದಿರ್ದಂಬುಜದ ನಡುವೆ ಮದನನಿನೊಡನೆ
ರ್ದೊಡಲು[2]ರಿ[2]ಪದೆ ಪುಟಪಾಕಂ
ಗುಡೆ ಸುಡುವಂತಿರ್ಪುವಲ್ಲಿ ವಿರಹಿಜನಂಗಳ್ ೧೦

ಮೇದಿನಿ ಪೆರ್ವೆಳಸಿಂ ಕ
ಣ್ಗಾದಮೆ ಬರೆ ತಾಮೆ ತಮ್ಮ ಪರಿಣತಕಣಿಶಾ
ಮೋದದೊಳೆ ಸೊರ್ಕಿ ತಲೆಕೆಳ
ಗಾದಂತಿರ್ಪುವು ಸುಗಂಧಶಾಲಿವನಂಗಳ್ ೧೧

ಇವೆ [3]ವಿಜಯು[3]ಚಾಪಮುಂಗೋ
ದ್ಭವಂಗೆ ವಿಜಯಾಸ್ತ್ರಮಿವೆ ಮನೋಜಂಗೆನೆ ಬ
ರ್ಪುವು ಜನದ ಮನಕೆ ಪುಂಡ್ರೇ
ಕ್ಷುವಾಟಮುಂ ಪುಷ್ಪವಾಟಮುಂ ಪೊಱಿವೊಟಿಲೊಳ್ ೧೨

1 ದ (ಕಟತ) 2 ಲಿ (ಕಟ) 3 ನಿಜ (ಚ)

ವನಲತಿಕಾಗೃಹಂ ತಳಿರ ತೊಂಗಲ ತೋರಣದಿಂದೆ ಕಾಮದೇ
ವನ ಮನೆಯಂತೆ ಸೋರ್ವ ಸಹಕಾರದೆ ತೀವಿದ [1]ಬಾವಿ[1] ಕಾಮದೇ
ವನ ರಸ[2]ಕೂಪ[2]ದಂತೆ ತಲೆಯುದ್ದದ ಪೂವಿನ [3]ಪುಟ್ಟು[3] ಕಾಮದೇ
ವನ ಕೃತಕಾದ್ರಿಯಂತೆಸೆಯೆ ಕಣ್ಗೆಸೆಗುಂ ಸಹಕಾರನಂದನಂ ೧೩

ಮಲೆಯೆಲರಲೆಪುಂ ಮನಸಿಜ
ನಲೆಪುಂ ಕೋಗಿಲೆಯ ಜಡಿಪುವೊಡನೆಗೆಟಿಪ್ಪಿನಮೋ
ನಲಜಡಿಯಾದಂತಿರ್ಪುವ
ಗಲದಾ ವನಲತೆಯ ಜೊಂಪದೊಳ್ [4]ದಂ[4]ಪತಿಗಳ್ ೧೪

ಕೊಳದಿಂ ಮಜ್ಜನಕಾರ್ಯಮಚ್ಚನನೆಯಿಂ ಭೂಷಾವಿ[5]ಧೇ[5]ಯಂ ಫಲಾ
ವಳಿಯಿಂ ಭೋಜನಕೃತ್ಯಮಬ್ಜದಳದಿಂ ಶಯ್ಯಾವಿಧಾನಂ ಪುಟಿ
ಲ್ಗಳಿನುದ್ಯಾನಮಹೀವಿಹಾರವಿಧಿ ಭೃಂಗಾನೀಕದಿಂ ನಿತ್ಯಮುಂ
ಗಳಗೇಯಕ್ರಿಯೆ ತೀರೆ ಮೆಚ್ಚಿ ಸುಟಿವರ್ ಪಾಂಥರ್ ವನೋಪಾಂತ
ದೊಳ್ ೧೫

ಪಾತಾಳತಳಮನೆಯ್ದಿದ
ಖಾತಂ ಸುರಪುರಮನೆಯ್ದಿದಟ್ಟಳೆ ಪೆಂಪು
ದ್ಯೋತಿಸೆ ಪುರವಿಟಿಪುದು ಭೋ
ಗಾತಿಶಯದ ಭೋಗವತಿಯನಮರಾವತಿಯಂ ೧೬

ಆ ಪುರದ ರತ್ನಭವನ ಕ
ಳಾಪದ್ಯುತಿ ನೆಗಟಿತ ಗಗನತಳ ದೊಳ್ [6]ಬಲಭೃ[6]
ಚ್ಚಾಪರುಚಿಗೆತ್ತು ಮತ್ತೆ ಕ
ಳಾಪಿಗಳಾಡುವುವು ಮಧುರಕೇಕಾರವದಿಂ ೧೭

ವಿವಿಧ ಮಣಿಕನಕಕೃತ ಗೃಹ
ಗವಾಕ್ಷಜಾಳಂಗಳಿಂದಮಾದಂ ಪೊಱಪೊ

---

1 ಕೂಪ (ಗಚಜ) 2 ಬಾವಿ (ಗಚಜ) 3 ಘುಟ್ಟ (ಕಗಚಜಟ) 4 ಜಂ (ತ)
5 ರೇ (ಕಗಚಜ) ರೋ (ಟ) 6 ಜಲಭೃ (ಟ) ಬಲಬಿ (ತ)

ಣ್ಮಿವ ಧೂಪಧೂಮಯಷ್ಟಿಗೆ
ನವಿಲೊಸೆದೆಜಿಗುವುದು ಪಾ[1]ವು[1]ಗೆತ್ತಾ ಪುರದೊಳ್ ೧೮

ಶೋಣಮಣಿದೀಪ್ತಿರುಚಿ ಕೋ
ಣ್ಗೋಣೊಳ್ ಪಜ್ಜಳಿಸೆ ರತ್ನದೀ[2]ಪ್ತಿ[2] ಸುವರ್ಣ
ಕ್ಷೋಣೀಧರಮೆನಿಪುದು ನೇ
ರಾಣಿಯು ಪೊಂಬೆಸದ ಸಮೆದ ರಾಣೀವಾಸಂ ೧೯

ತಳದಿಂ ಕಳಶಂಬರಮೊಂ
ದಳವಿಯು ರೂವಾರಮೆನಿಸಿ ಬಹುರೂಪಿಣಿಯೊ
ಲ್ವೊಳಗೆಗಳಿಂ ಜ್ಯೋತಿರ್ಮ್ಮಂ
ಡಳದವೊಲೊಪ್ಪುವುವು ನಾಡೆಯುಂ ಕರುಮಾಡಂ ೨೦

ಪುರದೊಳ್ ಸಂದಿರ್ದಯೋಧ್ಯಾಪುರತಿಲಕಮೆನಿಪ್ಪೀ ಪುರಸ್ತ್ರೀಯರಂ ಪೋ
ಲ್ವರೆ ನಿನ್ನಾನಚ್ಚತಿರ್ಪ[3]ಚ್ಚರಸಿ[3]ಯರಿದಱುದ್ಯಾನದೊಳ್ ನಂದನಂ ಪೇೞ್
ದೊರೆಯೇ ನೀಂ ಬಂದ ಸಂಕ್ರಂದನಪುರ[4]ಮಿದನೇಂ[4] ಪೋಲ್ವುದೆಂದಾ
[5]ಪುರ[5]ಶ್ರೀ
ಪುರುಹೂತಾಹೂತಿಗೆಯ್ವಂತಿರೆ ಸೊಗಯಿಸುಗುಂ ಕೇತುಹಸ್ತಂಗಳಿಂದಂ ೨೧

ಜಾಣ್ಗೆಡೆ ಬಣ್ಣಿಪ ವರ್ಣನೆ
ಮಾಣ್ಗೆಮ ಚತುರಶ್ರಮಾಗಿ ನೋೞ್ಪೊಡೆ ನಾಲ್ವ
ತ್ತೆಣ್ಗಾವುದಗಲಮೆಂಬ ಪ
ವಣ್ಗೆ ನಿಕೇತನಮುದಾಯ್ತು ಸಾಕೇತಪುರಂ ೨೨

ಆದೆ ಸಾಕೇತಮಯೋಧ್ಯೆಯು
ಮದೆ ಸಂಪತ್ಕೌಶಲಾಭಿಧಾನೆಯುಮೆನೆ ಮ
ತ್ತದು ನೆಗೞ್ದ ವಿನೀತೆಯುಮೆನಿ
ಸಿದ ನಾಲ್ಕುಂ ಪೆಸರ್ಗಳೆಸೆದುವಾ ಪುರವರದೊಳ್ ೨೩

---

1 ವೆ (ಕಟ) ವಿ (ಗಚಜ) 2 ಪ್ತ (ತ) 3 ಪ್ಸರಸೆ (ಜ) 4 ಮನಿದಂ (ಕ) ಮನಿದೇಂ (ಗಜ) 5 ಪುರಂ (ಕಗಜಟ)

ಅದನಾಳ್ವನಖಿಲ ಜಗತೀತಳಾಲಂಕಾರನುಮುದಾತ್ತ ಕ್ಷತ್ರಕುಲತಿಲಕನುಮಿಕ್ಷ್ವಾಕುವಂಶೋತ್ತಂಸನುಮಶೇಷ ಜಗತ್ಪವಿತ್ರ ಕಾಶ್ಯಪಗೋತ್ರಮಂಡನನುಮೆನಿಸಿ ನಿಜಭುಜಬಲಾವಲೇಪಪ್ರತಾಪಾಟೋಪ ನಿರ್ಜಿತಾನೇ[1]ಕಶತ್ರು[1] ಜಿತಶತ್ರುವೆಂಬರಸನಾ ಮಹೀವಲ್ಲಭನ ಮನೋವಲ್ಲಭೆ ವಿಜಯಸೇನೆಯೆಂಬೊಳಾ ಪರಮೇಶ್ವರಿ ಸಕಳ ಜಗತ್ತುಂಗ ಕುಲಸ್ತಂಭೆಯುಮಖಿಲಾಂತಃಪುರ ಪ್ರಧಾನಭೂತೆಯುಮಶೇಷ ಯೋಷಿದ್ಗುಣಾಲಂಕೃತೆಯುಮಾಗಿ

ಶ್ರೀ ವೀರಶ್ರೀ ಕೀರ್ತಿ
ಶ್ರೀ ವಾಕ್ಶ್ರೀಯೆಂಬ ದೇವಿಯರೆ ನೆಲಸಿರೆ ಸ
ದ್ಭಾವದೊಳೆ ವಿಜಯಸೇನಾ
ದೇವಿ ಮಹಾದೇವಿಯೆಂಬ ಪೆಸರಂ ಪಡೆದಳ್ ೨೪

ಧವಳವಿಲೋಚನಂ ಧವಳಚಾಮರಮಾಗೆ ಲಲಾಟಪಟ್ಟಮೊ
ಪ್ಪುವ ಪೊಸವಟ್ಟಮಾಗೆ ಕಟಿ ಕೇಸರಿವಿಷ್ಟರಮಾಗೆ ಚಿತ್ತಸಂ
ಭವ ಭುವನೇಶ್ವರಂಗಳಕಜಾಳಮೆ ಸೀಗುರಿಯಾಗೆ ಪೋಲ್ತು ತೋ
ಱುವುದಸಿತೋತ್ಪಲೇಕ್ಷಣೆಯ ಯೌವನಲಕ್ಷ್ಮಿಯೆ ರಾಜ್ಯಲಕ್ಷ್ಮಿಯಂ ೨೫

ಅರುಣಮೃದು ಚರಣಪಲ್ಲವ
ಕರಪಲ್ಲವ ವಿಳಸದಧರಪಲ್ಲವ ಲೀಲಾ
ಪರಿಕಲಿತ ಶ್ರೀಯಿಂದನು
ಕರಿಸುವಳಾ ಲಲನೆ ಪಲ್ಲವಿತ ವನಲತೆಯಂ ೨೬

ಲತೆಯೊಳ್ ಕೇದಗೆಯೆತ್ತ ಪೊಂಗೊಡಮಿದೆತ್ತಂಭೋಜಮೆತ್ತುತ್ಪಲ
ಸ್ಥಿತಿಯೆತ್ತಂಗಜಚಾಪಮೆತ್ತ ಮಿಳಿರ್ವೊಳ್ಗೊಂಬೆತ್ತ ಕಿಂಕೇನ ಸಂ
ಗತಮೆಂಬಂತಿರೆ ಸೆಳ್ಳುಗುರ್ ಮೊಲೆ ಮೊಗಂ ಕಣ್ಪುರ್ವು ತೋಳ್ಸೆಲ್ವುವೆ
ತ್ತುತಿಗಂಭೀರಮತಿಪ್ರಸನ್ನಮೆನಿಸುತ್ತಿರ್ಕುಂ ಮಹಾದೇವಿಯಾ ೨೭

ಮಣಿನೂಪುರ ಮಣಿಕಾಂಚೀ
ಮಣಿಹಾರ ವಿಲಾಸಮೆಸೆಯೆ ಭಾಸುರ ವಿದ್ಯಾ

1 ಕ (ಗಜ)

ಮಣಿಯಿಂ ಭಾಸ್ವಚ್ಚೂಡಾ
ಮಣಿಯಿಂ ಪೋಲ್ತೆಸೆವಳಬಲೆ ಮಣಿಪುತ್ರಿಕೆಯಂ ೨೮

ಕಮಳಾಸ್ಯೆಯ ನಿರ್ಮಳಿನ
ಪ್ರಮಾಣದಿಂ ಕಟಿಯಿಂ ಬಳೆದ ಜಘನಸ್ಥಳಮಂ
ಕಮಳಜನಳೆಯಲ್ ಮಾಡಿ
ರ್ದ ಮಾನಸೂತ್ರಂಬೋಲೊಪ್ಪುಗುಂ ಕಟಿಸೂತ್ರಂ ೨೯

ಶೃಂಗಾರಾರ್ಣವ ಸೇತುವ
ನಂಗ ಮತಂಗಜದ ಪೊನ್ನಬಳ್ಳಿ[1]ಗೆ ಸಮೆದಾ[1]
ನಂಗದ್ವಿಪಪತಿಗೆಣೆಯೆನೆ
ತುಂಗ ನಿತಂಬೆಗೆ ಬೆಡಂಗು ಕಾಂಚೀದಾಮಂ ೩೦

ಅಂಗನೆಯ ನಾಭಿಕೂಪದ
ಶೃಂಗಾರಜಲಕ್ಕೆ ಬಾಸೆ ನೀರ್ವರಿ ವೃತ್ತೋ
ತ್ತುಂಗಕುಚಂ ಮಾನ್ಗ[2]ೆ ಮದ
ನಂ ಗಡ ಯೌವನವನಕ್ಕೆ ತೋಂಟಿಗನಾದಂ ೩೧

ನೆಲೆ ನವಯೌವನಲಕ್ಷ್ಮಿಗೆ
ನೆಲೆ ಚಿತ್ತಭವಂಗೆ ನೃಪನ ಕಣ್ಗಂ ಮನಕಂ
ನೆಲೆ ತಾರಹಾರ ಶೋಭೆಗೆ
ನೆಲೆಯೆನೆ ನೆಲೆವೊಲೆಗಳೆನಿಕುಮಬಲೆಯ ಮೊಲೆಗಳ್ ೩೨

ಇದು ಮದನಭವನ ತೋರಣ
ಮಿದು ವಂದನಮಾಲೆ ಮದನಸದನಕ್ಕೆನೆ ಚೆ
ಲ್ವೊದವಿ ಸೊಗಯಿಪುದು ಸುದತಿಯ
ಹೃದಯಂಗಮಮೆನಿಪ ವೃತ್ತ[3]ಮೌಕ್ತಿಕಹಾರಂ[3] ೩೩

---

1 ಯ ಸಮೆದಾ (ಗ) ಯ (ಜ) 2 ನೆ (ಗಜ) 3 ಮೆತ್ತಿ ಸಹಾಯಂ (ಚ)

ಹಾರಲತಾವಿದ್ಯುಲ್ಲತೆ
ಚಾರುಪಯೋಧರ ಸಮೀಪದೊಳ್ ಪೊಳೆಯೆ ಶುನಾ
ಸೀರ ಶರಾಸನ ರುಚಿರಾ
ಕಾರದಿನೆಸೆವುದು ತದೀಯ ಕಂಠಾಭರಣಂ ೩೪

ವನಜಲಕೇಳಿಗೆ ಯೌವನ
ವನಮಂ ಶೃಂಗಾರಜಲಮನೊಳಕೊಂಡಿರ್ದಾ
ವನಿತೆ ಮನಸಿಜನ ಜಂಗಮ
ವನಕ್ಕೆ ಜಂಗಮಸರೋವರಕ್ಕೈ ಣೆ[1]ಯೆನಿಪಳ್[1] ೩೫

ಶೃಂಗಾರಜಳದೆ ಬಳೆದ ಲ
ತಾಂಗಿಯ ತನುಲತಿಕೆ ಪಾಣಿಪಲ್ಲವಮದಱಿಳೊಳ್
ಸಂಗಳಿಸೆ ಮಿಸುಪ ಕುಸುಮಚ
ಯಂಗಳನನುಕರಿಪುವೆಸೆವ ದಶನಚಯಂಗಳ್ ೩೬

ಚಿತ್ತಜನಿಕ್ಷುಚಾಪಲತೆಯಂ ಗೆಲೆವಂ[2]ದುದು[2] ಪುರ್ವಿನೊಳ್ಪು ಕ
ಣ್ಬೆತ್ತ ಪಯೋಜಪತ್ರರುಚಿಯಂ ಗೆಲೆವಂ[3]ದುದು[3] ಕಣ್ಮಲರ್ ಮದೋ
ನ್ಮತ್ತ ಗಜೇಂದ್ರಮಂದಗತಿಯಂ ಗೆಲೆವಂ[4]ದುದು[4] ಬರ್ಪ ಲೀಲೆ ದಾ
[5]ಹೋ[5]ತ್ತರಮಪ್ಪ ಪೊನ್ನ ಪೊಳೆಪಂ ಗೆಲೆವಂದುದು ಕಾಂತಿ ಕಾಂತೆಯಾ ೩೭

ತರುಣಿಯ ಮುಖಚಂದ್ರಬಲಂ
ದೊರೆಕೊಳೆ ಪುರ್ವೆಂಬ ಕರಿಯ ಕರ್ಬಿನಬಿಲ್ಲಿಂ
ಮರಲೆದೆಗೆದತನು ಕಣ್ಣಿಂ
ಬರಲಂಬಿಂದೆಚ್ಚು ಜಗಮನಡಿಗೆಱಗಿಸುಗುಂ ೩೮

ಸುದತಿಯ ಮುಖೇಂದುವಂ ಪೂ
ರ್ಣದಿನದೊಳಂ ಪೋಲಲಿಂದು ನೆಱೆಯದೆ ನಿರ್ವೇ

1 ಯಾದಳ್ (ಗಚಜ) 2 ದವು (ಕಗಚಜ) 3 ದವು (ಕಗಜ) 4 ದವು (ಗ)
ಕೋ (ಗಜ)

ಗದೆ ಪಕ್ಷಚರ್ಯೆಯೊಳ್ ಕೂ
ಡಿದ ಕಾಯಕ್ಲೇಶತಪದೊಳೊದಗುವನಿನ್ನುಂ ೩೯

ಚಳಮೀನಂ ಪದ್ಮಷಂಡಂ ತರಳ ಮಧುಕರಾಲಂಕೃತಂ ಪದ್ಮನಾಳಂ
ವಿಳಶೃಂಗೋದ್ಭಾಸಿ ಚಂದ್ರಂ ಸೊಗಯಿಸಿತೆನೆ ಲೋಲೇಕ್ಷಣಂ [1]ಸಂ[1]ಚಲತ್ಸ್ಕಂ
ತಳಮುದ್ಭ್ರೂವಿಭ್ರಮಂ ಶೋಭಿಸೆ ತಿಳಿಗೊಳನಂ ಫುಲ್ಲಪಂಕೇಜಮಂ ನಿ
ರ್ಮಳ ತಾರಾಧೀಶನಂ ಪೋಲ್ತೆಸೆಯೆ ನಗೆಮೊಗಂ ಕಾಂತೆ ಕಣ್ಗೊಪ್ಪಿ
ತೋರ್ಕುಂ ೪೦

ಲಳಿತ ಭ್ರೂನೃತ್ಯಮಾಸ್ಯಾಂಬುರುಹ ಪರಿಮಳಾಲೋಲ ಭೃಂಗಾಂಗನಾಮಂ
ಜುಳಗೀತಂ ರತ್ನಮಂಜೀರಕ ಮಣಿರಶನಾ ಕಿಂಕಿಣೀಜಾಳ ಕೋಳಾ
ಹಳವಾದ್ಯಂ ಕೂಡೆ ಚಿತ್ತೋದ್ಭವನಿನೆಸೆಯೆ ತೂರ್ಯತ್ರಿಕಂ ಹಾಸಪುಷ್ಪಾಂ
ಜಳಿಯಿಂ ತತ್ಕಾಂತೆ ದೇಹದ್ಯುತಿಜವನಿಕೆಯಿಂ ನಾಟ್ಯರಂಗಂಬೊಲಿರ್ಪಳ್ ೪೧

ದರಹಾಸಾಮೃತವಾರಿ ಮಜ್ಜನಜಲಂ ದೇಹಪ್ರಭಾಜಲಮಂ
ಬರಶೋಭಾವಹಮಾ ನಿತಂಬಿನಿಯ ವಕ್ತ್ರಾಮೋದಮಾಲೇಪನಂ
ತರಳಾಪಾಂಗ ಮರೀಚಿಕಾಂತಕಮನಸ್ರಗ್ಮಾಳೆ ತದ್ವಿದ್ರುಮಾ
ಧರಲೀಲಾಲಕದಭ್ರದಂತರುಚಿರ ಶ್ರೀಮಂಡನಾಡಂಬರಂ ೪೨

ಕಚಭಾರಂ ಕೊರಲ್ಗ ಬಲೆಯ
ಕಚಕುಚಭರಮುಸಿಯ ನಡುಗೆ ಕಚಕುಚ ಜಘನೋ
ಪಚಯಭರಂ ತೊಡೆಗ[2]ಳ್ಗೊ[2]
ವಿ ಚತು[3]ರಮಂ[3] ಮೆಟ್ಟ ತೋರ್ಪಳೋಜೆಯ ಪಿಡಿಯಂ ೪೩

ಲಲಿತಾಂಗಂ ಕನಕಾವದಾತಮಲರ್ಗಣ್ ನೀಲೋತ್ಪಲಚ್ಛಾಯೆಯು
ಜ್ವಲದಂತಂ ಪರಿವೃತ್ತಮೌಕ್ತಿಕಸಮಂ ವೃತ್ತಾಧರಂ ವಿದ್ರುಮೋ
ಪಲಲೀಲಂ ತನುರೋಮರಾಜಿ ವಿಲಸದ್ದೂರ್ವಾಂಕುರಾಭಂ ಮನಂ
ಗೊಳೆ ಚಂಚನ್ನಿಜಪಂಚವರ್ಣೆ ಪಡೆಗುಂ ಚಿತ್ರಾಂಗನಾಶಂಕೆಯಂ ೪೪

1 ಚಂ (ಗಚಜ) 2 ಳ್ಗ (ಕಟ) 3 ರಿಂದಂ (ಕಟ)

ಎಸೆಗುಂ ಖುಜ್ವಾಗತಂ ಕಣ್ಗೊಳಿಸುಗುಮಳವಟ್ಟಿರ್ದ ಖುಜ್ವಾಗತಂ ರಂ
ಜಿಸುಗುಂ ಪಾರ್ಶ್ವಾಗತಂ ನೋಟ್ಪಿರನು[1]ಡುಗಿಸುಗುಂ[1] ಸಾಚಿ ತದ್ವಿದ್ಯರಂ ಮೆ
ಚ್ಚಿಸುಗುಂ ದ್ವ್ಯರ್ಥಾರ್ಕ್ಷನೆಂಬಂತಿರೆ ಸೊಗಯಿಸುತಿರ್ಪಂಗನಾಭಂಗಿಯಂ ಚಿ
ತ್ರಿಸಿ ಚಿತ್ರಕ್ಕಾಯುವೊಯ್ದಂ ಮದನನೆನೆ ಮಹಾದೇವಿ ಕಣ್ಗೊಪ್ಪಿ
ತೋರ್ಪಳ್ ೪೫

ಅದೆ ಕಂದರ್ಪಂಗೆ ದೋರ್ದರ್ಪದ ಮೊದಲದೆ ಪುಷ್ಪೇಷುಗೀ ಲೋಕಮಂ ಗೆ
ಲ್ವದಟಂದೆತ್ತಿರ್ಪ ಚೈತ್ರಧ್ವಜಮದೆ ಕುಸುಮಾಸ್ತ್ರಂಗೆ ಸೌಭಾಗ್ಯಭಾಗ್ಯಾ
ಭ್ಯುದಯ ಪ್ರಸ್ತಾವನಾ ನಾಟಕಗೃಹಮದೆ ಕಾಮಂಗೆ ಸಾಮ್ರಾಜ್ಯಲಕ್ಷ್ಮೀ
ಪದಮೆಂದಂದೇನನೆಂಬೆಂ ನೃಪವನಿತೆಯ ರೂಪಾರ್ಗಮಾಶ್ಚರ್ಯರೂಪಂ ೪೬

ಅಂತು ಪೊಗೞ್ತೆವಡೆದಾ ಮಹಾದೇವಿಯೊಳಾ ಮಹಾನುಭಾ[2]ವನೇಕ
ಭಾವ[2]ದೊಳನಂಗಸಾಮ್ರಾಜ್ಯಸುಖಮನನುಭವಿಸಿ

ಸಮನಿಪ ಧರ್ಮಕ್ಕವಿರು
ದ್ಧಮರ್ಥಮರ್ಥಕ್ಕೆ ಕಾಮಮವಿರುದ್ಧಮನು
ಕ್ರಮದೊಳೆ ಕಾಮಕ್ಕಂ ಕಡೆ
ಯ ಮೋಕ್ಷಮವಿರುದ್ಧಮೆನೆ ಚತುರ್ವರ್ಗ ಫಲಂ ೪೭

ಅಂತು ಚತುರ್ವಿಧ ಪುರುಷಾರ್ಥಮಂ ವ್ಯರ್ಥಮಾಗಲೀಯದನುಭವಿ
ಸುತ್ತುಂ ಚತುರ್ವಿಧ ರಾಜವೃತ್ತಮನುದಾತ್ತಮಪ್ಪಂತಾಚರಿಸುತ್ತುಂ
ವಿಜಿಗೀಷುವೃತ್ತಿ ಯನೆತ್ತಿಕೊಂಡು ವಿಕ್ರಮಾವಲಂಬಿಯಾಗಿ

ನಾಗಮೆ ನಾಗದಂತಿರೆ ಪಡಲ್ವಡೆ ವಾಹಮೆ ವಾರಿವಾಹದಂ
ತಾಗಿರೆ ಮಾಯಮಾಗೆ ರಥಮನ್ಯಮನೋರಥದಂತೆ ಗೆಂಟುಗೆಂ
ಟಾಗೆ [3]ವಿಪತ್ತಿಯಿಂ[3] ಪಗೆ[4]ಯೆ[4] ಪತ್ತಿ ಬಲಂ ನಡುಗಿತ್ತು ಚಂಚಲಾಂ
ಭೋಗತಚಂದ್ರಮಂಡಲದವೊಲ್ ಜಿತಶತ್ರುಗೆ ಶತ್ರುಮಂಡಲಂ ೪೮

ಶತ್ರುಗಳುಮನಭ್ಯಂತರ
ಶತ್ರುಗಳಾಱುಮನದಿರ್ಪಿ ಗೆಲ್ದುದಱಿಂದಂ

1 ಡಿಗಿನಿಸುಂ (ಗಜ) ಡಿಗೆಸೆಗುಂ (ಟ) 2 ವ (ಗಚಜ) 3 ಪತಿಯಂ (ಚ)
4 ಯ (ಕಟ)

ಶತ್ರುಂತಪನೆನಿಸಿದ ಜಿತ
ಶತ್ರುಗೆ ಜಿತಶತ್ರುನಾಮಮಾಯ್ತನ್ವರ್ಥಂ ೪೯

ಆತನೇಕಾಂಗವೀರನುಮುಭಯಕುಲಶುದ್ಧನುಂ ತ್ಯಾಗಾದಿ ಮಹಾಗುಣತ್ರಯ ಪವಿತ್ರನುಂ ಚತುರ್ವರ್ಗಫಲೋಪಭೋಗಿಯುಂ ಪಂಚಾಂಗಮಂತ್ರನಿರತನುಂ ಷಾಡ್ಗುಣ್ಯನಯಾಲಂಕೃತನುಂ ಸಪ್ತಾಂಗ ರಾಜ್ಯ ಸಂಪನ್ನನುಮಷ್ಟದಿಕ್ಚಕ್ರ ವಿಜಯಿಯುಂ ನವನಿಧಿಪರಿಪೂರ್ಣನುಂ ದಶ[1]ಕುಲ[1] ಧರ್ಮನಿರ್ಮಲನುಂ ಏಕಾದಶೋಪಾಸಕಸ್ಥಾನವೇದಿಯುಂ ದ್ವಾದಶ ರಾಜಮಂಡಲ ನಿಯೋಜಿತ ಪ್ರಧಾನ ವಿಜಿಗೀಷುವೃತ್ತನುಂ ತ್ರಯೋದಶ ಮತೋಪಚಾರಪರಿಣತ ಪ್ರಕಟಿತ ತುಂಗ ಗಜಾಗಮ ಪರಿಜ್ಞಾನನುಂ ಚತುರ್ದಶ ಮನುಮುನಿ ಚರಿತನುಂ ಪಂಚದಶ ಕರ್ಮ ಭೂಮಿಸ್ಥಿತಿ ವಿಭಾಗ ಪ್ರಗಲ್ಭಮತಿಯುಂ ಷೋಡಶ ತೀರ್ಥಕರ ಭಾವನೋಪಚಿತ ತೀರ್ಥಕರ ಜನ್ಮೋತ್ಪತ್ತಿ ಹೇತುಭೂತನುಮಾಗಿ ಸುಖದಿನಿರಲ್

ಇತ್ತ ಜಂಭೂದ್ವೀಪದ ಪೂರ್ವ ವಿದೇಹದ ಸೀತಾನದಿಯ ತೆಂಕಣ ತಡಿಯ ವತ್ಸ[2]ಕಾವತೀ[2] ವಿಷಯದ ಸುಸೀಮಾನಗರಮನಾಳ್ವಂ ವಿಮಲವಾಹನನೆಂಬರಸಂ ಪಲವು ಕಾಲಮರಸುಗೆಯ್ಯುತಿರ್ದೊಂದು ದಿವಸಂ ರಾಜವಿದ್ಯಾವಿಲಾಸಿನೀ ವಿಲಾಸಮಣಿದರ್ಪಣಂ ಪಳನಾಳದರ್ಪಣತಳಪ್ರತಿದರ್ಪಣಬಿಂಬಿತ ವಿಮಲ ಕಪೋಲ ಮೂಲೋದ್ಗತ ಪಳಿತಾಂಕುರಾವಳೋಕನದೆ ಪರಮ ವೈರಾಗ್ಯಪರನಾಗಿ

ಅರಯೆ ಮೂತ್ರಪುರೀಷಾ
ಗಾರಂ ಸಂಪ್ರಾಪ್ತ ಸಪ್ತಧಾತುವಿಕಾರಂ
ಚಾರುಗುಣದೂರಮತಿವಿಷ
ದಾರು ಶರೀರಂ ದುರಂತ ದುಃಖಾಧಾರಂ ೫೦

ಅಗಲೊಳಗಿಕ್ಕಿದೊಳ್ಳುಣಿಸಮೇಧ್ಯಮುಮೆಂಜಲುಮಪ್ಪುದುಟ್ಟ ಪು
ಟ್ಟಗೆಗಳುಮಂತೆ ಮೈ[3]ಲ[3]ಗೆಳಪ್ಪುವು ಸೂಡಿದ ಮಾಲೆ ಕಂದು ನಾ
ಱುಗು[4]ಮೆದವೀಳೆ ಸಾಂದು[4] ಮೊದಲಾಗಿರೆ ಪೂಸಿದ ಚಂದನಂಗಳುಂ
ಮಗಮಗಿಸುತ್ತಮಿರ್ದು ಮಲಮಪ್ಪುವು ಸಂಗತಿಯಿಂ ಶರೀರದಾ ೫೧

1 ಕುಶಲ (ಕ) 2 ಕಾ (ಗಚಜ) 3 ಲಿ (ಗಚಜ) 4 ಮೊಡಸಂದುಮಿಂತು (ಗಜ)

ನೆನೆಯದೆ ಕಾಣದೆ ಕೇಳದೆ
ತನುವಿನ ಪೊಲ್ಲಮೆಯನಱಿದುಮಱಿಯದೆ ತೊಱಿಯಲ್
ಮನಮುಳ್ಳೊಡೆ ಜೀವಕ್ಕೀ
ತನುವಿರೆ ವೈರಾಗ್ಯಕಾರಣಂ ಪೆಱತುಂಟೇ. ೫೨

[1]ಕ್ರಿಮಿ ಮೇಣ್[1] ಭಸ್ಮಂ ಮೇಣ್ ಪಿ
ಷ್ಟಿ ಮೇಣ್ ಶರೀರಕ್ಕೆ ನಿಟ್ಟೆಯಿಾ ದೊರೆಯಿದಱೊಳ್
ಕಮನೀಯಮೊಂದುಮಿಲ್ಲ ಶು
ಚಿ ಮಲಾಧಿಷ್ಠಾನಮಿದುವೆ ನರಕಸ್ಥಾನಂ ೫೩

ಏಬೞ[2]ಂಬ ನರಕಮಾವುದೊ
ಪೇೞ[2]ಂಬ ದುರಂತ ದುಃಖದೊಳೆ ಕೇಳಸಿ ನಿಂ
ದೇೞಿಂ ಶರೀರಧಾತುಗ
ಳೇೞಿಂ ನರಕಂಗಳವಱ[3]ೊಳೇಗುಂದದವೋಲ್ ೫೪

ತನಗಲ್ಲದೊಡಲ್ಗೊಡಮೆಗೆ
ಮನಮಿಟ್ಟಪವರ್ಗಮಾರ್ಗಮಂ ಪೊರ್ದದೆ ತ
ನ್ನನೆ[3]ತಾನೆ ನಂ[2]ಬಿಸುವೊಡಾ
ತ್ಮನಂತು ಪೇೞಾತ್ಮವಂಚಕರ್ ಪೆಱರೊಳರೇ ೫೫

ಸಾರದೆ ಸಾರಮಪ್ಪ ಜಿನಧರ್ಮಮನಾತ್ಮನ ಸಾರಮಪ್ಪುದಂ
ಸಾರಮಿದೆಂದು ನಂಬಿ ತನಗಲ್ಲದುವಂ ತನಗಪ್ಪುದೆಂದು ಕೇ
ದಾರವಿಹಾರ ಸೋದರ ಕೃಶೋದರ ಸುಂದರ[3]ದಾ[3]ರ ದಾರಕೋ
ದಾರವಿಮೋಹದೊಳ್ ತೊಡರ್ದು ದಾರುಣ ದುಃಖಮನೆಯ್ದಿದರ್ಕುಮೋ ೫೬

ಮುನಿ[4]ದುಯ್ವ[4] ಜವಂಗಂ ಮಾ
ಯೆನಲಮ್ಮುವರಿಲ್ಲ ಬಗೆಯೆ ನಿನಗಿನ್ನಾರ್ಮಂ
ಜಿನಧರ್ಮಮೊಂದೆ ಜೀವನೆ
ನೆನೆ ಗಡ ಲೋಕತ್ರಯಕ್ಕೆ ದಿನನಂ ಜಿನನಂ ೫೭

1 ಕ್ರಮೇಣ (ಚ) 2 ನಂ (ಚ) 3 ರಾ (ಗಜ) 4 ದೊ (ಕಗಚಜ)

ಮತಿಗೆಟ್ಟು ಜೀವಧರ್ಮಾ
ಮೃತಮಂ ಸೇವಿಸದಧರ್ಮವಿಷಮಂ ಸೇವಿಸಿ ದು
ರ್ಗತಿಗಿೞಿದೀ ಜವನೆಂಬೞ
ಸಿ ತಿಂಬ ದೈವಕ್ಕೆ ಪೋಗಿ ಸಾೞಿಂಬಡುವೈ ೫೮

ತನು ತಾಳಲಾಱದನ್ನೆಗ
ಮೆನಸುಂ ನೀನದಱಿಕೊಳಾತ್ಮಶಕ್ತಿಕ್ಷಯಮ
ಪ್ಪಿನೆಗಮಿರಲ್ಕಕ್ಕುಮೆ ಕಟ್ಟಿ
ದ ನೀರ್ಗೆ ಬಂದಪುದೆ ಬೞಿಕ ಜರೆಗಂ ತಿರ್ದಲ್ ೫೯

ಎನಿತೆನಿತು ಕೞಿದ ಭವಮಂ
ನೆನೆದಪೆಯೆನಿತೆನಿತು ಭವದ ಬಂಧುಗಳಂ ನೀಂ
ನೆನೆದಪೆಯೆನಿತೆನಿತೊಡಲಂ
ನೆನೆದಪೆಯೆಲೆ ಜೀವ ನೀನೆ ಪೇೞ್ ಪವಣೊಳವೇ ೬೦

ಎನಿತಂ ಕು[1]ಕ್ಕು[1]ೞಗುದಿದಪೆ
ಯೆನಿತಂ [2]ಕಕ್ಕಳಗ[2]ೞಲ್ದಪಯ್ ಜೀವನೆ ನೀ
ನೆಸಿತಂ ಮಲ್ಮಲ ಮಱುಗು[3]ವೆ[3]
[4]ಯೆ[4]ನಿತಂ ಸಂಸಾರದೊಳಗೆ ತಿಱ್ಱನೆ ತಿರಿವಯ್ ೬೧

ಎನಿತಂ ಬೆದವೆದ ಬೆಂದಪಯ್
ಯೆನಿತಂ ಸುಡುಸುಡನೆ ಪುಗುವಯ್ ಜೀವನೆ ನೀ
ನೆಸಿತಂ ಮಲ್ಮಲಮಱುಗು[5]ವೆ[5]
ಯೆನಿತಂ ಭವಗಹನದೊಳಗೆ ಬಟ್ಟನೆ ಬರ್ಪಯ್ ೬೨

ಕಡೆಯಿಲ್ಲದ ಸಂಸಾರದ
ಕಡೆಗಾಣಲ್ ಬಗೆವೆಯಪ್ಪೊಡೆನ್ನುಕ್ತಿಗೊಡಂ

---

1 ಙ್ಕು (ಟತ) 2 ಕಕ್ಕಳನೆಗ (ಗಚಜ) ತಕ್ಕಳಗ (ಟ) ಕಜ್ಜನೆಕ (ತ) 3 ವಯ್ (ತ) 4 ನೆ (ಗಚಜ) 5 ವರ್ಯ್ (ತ)

ಬಡು ಜೀವ ನಿನ್ನ ಕಾಲಂ
ಪಿಡಿವೆಂ ಧರ್ಮಮನೆ ಮಗುೞೆ[3] ಬಲ್ವಿಡಿವಿಡಿ[1]ಯಾ[1] ೬೩

ಪೊಲ್ಲಮೆ ಪರಮತದೊಳ್ ಫಲ
ಮಿಲ್ಲವಱೊ[3]ಳ್ ತೊಡರ್ದು ಕಿಡದಿರೆಲೆ ಜೀವನೆ ನೀ
ನಲ್ಲಿಯೆ ತೊಡ[2]ರ್ವಯ್[2] ತಿಂಬರ
ನಲ್ಲದೆ ಕುಱಿ ಮಚ್ಚದೆಂಬ ನುಡಿ ತಪ್ಪುಗು[3]ಮೋ[3] ೬೪

ಹೇಯಮಿದೆಂದಱಿಯದುಪಾ
ದೇಯಮಿದೆಂದಱಿಯದಾತ್ಮವಸ್ತುಗಳೊಳ್ ಸ
ಮ್ಮೋಯಿಸುವುದು ಹೇಯೋಪಾ
ದೇಯಂಗಳ್ ಪಾಪಧರ್ಮಮಲ್ಲದೆ ಪೆಱತೇಂ ೬೫

ಜನನ ಮೃತ ದೇವ ನಾರಕ
ಮನುಷ್ಯ ತಿರ್ಯಗ್ವಿಕಲ್ಪಗತಿಗಳೊಳೆನಸುಂ
ನಿನಗೆ ಸುಖಮಿಲ್ಲ ನೆಟ್ಟನೆ
ಮನದೊಳ್ ಭಾವಿಪೊಡಸಾರಮೀ ಸಂಸಾರಂ ೬೬

ಪುಸಿ ಕೊಲೆ ಕಳವು ಪರಸ್ತ್ರೀ
ವ್ಯಸನಂ ಬಹುವಿಧಪರಿಗ್ರಹಂ ನರರಂ ಬಂ
ಧಿಸಲೀ ಭವಾಬ್ಧಿಯೊಳಗ
ರ್ದಿಸಲಾರ್ಕುಂ ದ್ಯೂತ ಮದ್ಯ ಮಾಂಸ ವ್ಯಸನಂ ೬೭

ಮಧು ಮದ್ಯ ಮಾಂಸಸೇವನೆ
ವಧಾನುರಾಗಂ ಜಿನಾಗಮಾರುಚಿ ಕುಲಟಾ
ನಿಧುವನಮೆಂಬಿವು ಜನ್ಮಾಂ
ಬುಧಿಗರ್ತಾವರ್ತಪಾಪಹೇತುಗಳಲ್ತೇ ೬೮

---

1 ಯೋ (ತ) 2 ಪೆರ್ (ಗಚ) ಪಿರ್ (ಜ) 3 ಮೋ (ಚ)

ಜವನಟ್ಟಿಕೊಲ್ವ ಕೊಲೆಗಾ
ಜವಂ ಜವಸ್ಥಿತಿಗೆ ನೆಯ್ಯ ನೀರ್ ತೆಗೆವನ್ನಂ
ಜವ ಜವ ಜವನಂಜಿಸಿದುವು
ಜವನಾಳ್ಗಳ ತೆಱದಿನೆನ್ನ ಕೆನ್ನೆಯ ನರೆಗಳ್ ೧೯

ಬಡಿವ ಪಿಡಿದುಡಿವ ಕಟ್ಟುವ
[1]ಕಡಿವ ಕರಂ ಜಡಿವ[1] ಬಯ್ದು ನುಡಿ[2]ವ[2] ತೊಡರ್ಪಂ
ತೊಡರಿಸುವ ನರಕಗತಿಯೊಳ್
ತೊಡರ್ವುದೆ ತೊಡರದೆ ಜಿನೇಂದ್ರಮತದೊಳ್ ಹಿತದೊಳ್ ೨೦

ಏಱುವ[3] ಪೇ[3]ಱುವ ಮೂಗಿನೊ
ಳೂಱುವ ಮಣಿಗಟ್ಟ ತೋಱುವೊಯ್ದಂಗಡಿಯೊಳ್
ಮಾಱುವ ತಿರ್ಯಗ್ಗತಿವುಗ
ಲಾಱದೆ[4]ನರಗತಿಗೆ[4] ಬಯಸುವೆಗ್ಗರುಮೊಳರೇ ೨೧

ಎಱೆ[5]ಯಂಗೆ ಜೀಯ ದೇವಂ
ದೆಱಗುವುದಾಯುಃಪ್ರಮಾಣದಡಿಗಾಣಲೊಡಂ
ಮಱುಗುವುದಂಗಜಶರದಿಂ
ತುಱುಗುವುದೆನೆ ದೇವಗತಿಯೊಳೇಂ ಸುಖಮುಂಟೇ ೨೨

ಈ ನಾರಕ ತಿರ್ಯಗ್ಗತಿ
ಗೀ ನರ ಸುರಗತಿಗೆ ಪೇಸಿದೆಂ ದರ್ಶನದಿಂ
ಜ್ಞಾನದಿನೊಪ್ಪುವ ಪರಮ
ಸ್ಥಾನಮನಾಂ ಪಡೆ[5]ವೆ[5]ನಕ್ಕೆ ಪಂಚಮಗತಿಯಂ ೨೩

ಶಿಷ್ಟಜ[6]ನೋಚ್ಛಿಷ್ಟಂ[6] ಬಹು
ಕಷ್ಟಂ ಬಹುದುಷ್ಟಮುಷ್ಟಕಮಾರ್ಗ್ನಿಪರೀ

---

1 ಜಡಿದು ಕರಂ (ಕಗಚಜಟ) 2 ( ವ...(ಟ) 3 ಸೇ (ಚ) 4 ನರಕಕ್ಕೆ (ಗಜ) 5ವ (ಕಚಟತ) 6 ನಾ ಶಿಷ್ಟಂ (ಕಗಜಟ)

ಪುಷ್ಟಂ ಹಾ ಹಾ ಧಿಕ್ ಛೀ
ಕಷ್ಟಮವಶ್ಯಂ ನಿಕೃಷ್ಟಮಿಾ ಸಂಸಾರಂ ೭೪

ಅಂಗನೆಯರ್ಕಳ ಸವತಿ ಜ
ರಾಂಗನೆ ತಾನವ[1]ಳ್[1]ಸವತಿ ಸಂದಿರ್ದ ನಿಯ
ತ್ಯಂಗನೆಯಾ ಸವತಿ[2]ಯುಮಂ[2]
ಪಿಂಗಿಸಿ ಪುದುವಾೞ್ಪನಕ್ಕೆ ಮುಕ್ತ್ಯಂಗನೆಯೊಳ್ ೭೫

ಮೆಲುತಂ ಸವಿಯುಱಿಸುವ ಗಾ
ವಿಲರಿರ್ಪವರಿರ್ಪೊಡಿಕ್ಕೆ ಮೆಳ್ಪಟ್ಟು ಜವಂ
ಕೊಲೆ ಕಾವರೊಳರೆ ಧರ್ಮಮೆ
ತಲೆಗಾಯ್ಗುಂ ಧರ್ಮಮಾರ್ಗಮುಭಯಭವಕ್ಕಂ ೭೬

ಮೇಲೆನಿಸುವ ಜಿನಧರ್ಮಂ
ಪೋಲದು ಪೆಱಪೆಱರ ಪೇೞ್ವ ಧರ್ಮದ ತೆಱನಂ
ಪಾಲೆಂಬ ತೆಱದೆ ಪಶುವಿನ
ಪಾಲಂ ಪೋಲುವುದೆ ನಾಯ ಕಳ್ಳಿಯ ಪಾಲ್ಗಳ್ ೭೭

ಜಸಮಂ ಧರ್ಮಮುಮನುಪಾ
ರ್ಜಿಸುವೊಡೆ ಚದುರದುವೆ ನಿಟ್ಟೆ ನಿಮಗಕ್ಕಟ ಮಾ
ನಸವಾೞ್ತಿ ಮಱುಗಿ ಸೋಲ್ತಪಿ
ರಿಸಗುವುದರ್ತಿಯೊಳೆ ಜಸಮುಮಂ ಧರ್ಮಮುಮಂ ೭೮

[3]ದೆವಸ ದೆ[3]ವಸಂಗಳಿಂ ಕುಂ
ದುವುವಲ್ಲದೆ [4]ಬಳಮುಮಾ[4]ಯುವುಂ ವಪುವುಂ ಪೆ
ರ್ಚುವುವಲ್ಲವು ವಿಷಯಸುಖ
ಕ್ಕವಚರ್ತೆಂ ಪಡೆದುಕೊಳ್ವಿನಕ್ಷಯಸುಖಮಂ ೭೯

---

1 ರ (ಕಗಚಜಟ) 2 ಯವೊಲ್ (ಕಗಚಜಟ) 3 ದಿವಸ ದಿ (ಕಜಟ) 4 ಬಳೆವುವಾ (ಕಗಜ) ಬಳೆವುಪಾ (ಚ) ಬಳೆಯವಾ (ಟ)

ಅಂಗಜನ ಸುಖದ ಸಾಮ್ರಾ
ಜ್ಯಂಗಳ್ ಶಾರೀರ ಮಾನಸಾಗಂತುಕ ದುಃ
ಖಂಗ[1]ಳ್[1]ನೆ ಮಾಟ್ಪುವದಱಿಂ
ಪಿಂಗುವೆನಿನ್ನೆನಗೆ ಜಿನ[2]ನ[2] ಚರಣಂ ಶರಣಂ ೮೦

ಊಟದಿನಾಟದಿನೊಪ್ಪುವ
ಪಾಟದಿನಾಱಿಸುವ ತೀಟದಿಂ ಕಂಪಿನ ಕ
ಯ್ಯೂಟದಿನಪ್ಪ ಸುಖಂಗಳೆ
ಪಾಟಿಸಿದ ಸುಖಂಗಳಿಂದ್ರಿಯಂಗಳ ದೆಸೆಯಿಂ ೮೧

ನೆಱೆಯಱಿವ ನೆಱೆಯೆ ಕಾಣ್ಬೇ
ತೆಱದಿಂ ಸಮಸಂದು ಸಂದತೀಂದ್ರಿಯಸುಖದ
ತ್ತೆಱಗಿದೆನಿಂ ವಿಷಯಸುಖ
ಕ್ಕೆಱಗೆಂ ಪೞಿಕೆಯ್ದು ತೊ[3]ೞ್ತಿ[3]ನುೞಿವಂತುೞಿವೆಂ ೮೨

ಆಧಿಗಳುಮನೇಕವಿಧ
ವ್ಯಾಧಿಗಳುಂ ಬಾಧಿಸುತ್ತುಮಿರೆ ನರಜನ್ಮಾಂ
ಬೋಧಿಯೊಳಗರ್ದು ದುರಿತವಿ
ರೋಧಿಗಳಳ್ಕೆಱೊಳಳ್ಕೆಜೊಳ್ಕೆಯನಾದೆಂ ೮೩

ಕರಗುವ ಮುಗಿಲಂ ಕೆನ್ನೆಯ
ನರೆಯುಂ ಕಂಡನಿತಱಿಂ ಕೆಲರ್ ಪರಮತಪೋ
ಭರದೊಳ್ ಭರದೊಳ್ ನೆಗೞಲ್
ಗುರುಬಂಧುಪ್ರಿಯ ವಿಯೋಗಮುಂ ಕಂಡು ಕೆಲರ್ ೮೪

ನರರರೆಬರ್ ವೈರಾಗ್ಯಂ
ದೊರೆಕೊಂಡೊಡೆ ತೊಱೆವೆನೆಂಬರನ್ನೆವರಂ ಸ

---

1 ಳ (ಕ) 2 ದ (ಗಳ) 3 ತ್ತು (ಕಗಬಜ)

ಯಿತ್ತುರಲೀಯದಂತಕಂ ಗೋ
ಣ್ಮುರಿಗೊಂಡೆೞ್ದೊಯ್ವೊಡಡ್ಡಬರ್ಪರುಮೊಳರೇ ೮೫

ಕುಸುಮಾಸ್ತ್ರಗಜಂ ಬೆಂಕೊಳೆ
ಬಿಸುಟಂ ಕಡಿಕೆಯ್ಯೆ ತಪಮನೊಳಕೊಂಡಿರ್ದಿ
ರ್ದೆಸೆಯೊಳಡಂಗದೆ ಬಸನದ
ಬಸದಿಂ ತಲೆದೋಱಿ ತೋಱದಿರ್ಕುಮೆ ಕೊಲೆ[1]ಯಂ[1] ೮೬

ಮದನಮದೇಭಂ ಕಡಿಕೆ
ಯ್ಯದನ್ನೆಗಂ ಸಲ್ಗುಮಾರ ಬೀರಂಗಳುಮಂ
ತದು ಕಡುಪಿಂ ಪಂಚತೆಯಾ
ಗದೆ ಮಾಣ್ಗುಮೆ ವಶಗತಂಗೆ ಪಂಚೇಂದ್ರಿಯದಿಂ ೮೭

ಮನ[2]ದ[2] ಬೞಿವೞಿಯೊಳಾಡುಗು
ಮನಿತಿಂದ್ರಿಯಗುಣಮುಮನಿತುಮಂ ಗೆಲಲಾರ್ಕುಂ
ಮನಮಂ ಗೆಲ್ವೊಡೆ ನಾಯಕ
ನನೆ ಗೆಲ್ವೊಡೆ ಪಂಚತಂತ್ರಮಂ ಗೆಲಲರಿದೇ ೮೮

ಜಿನವಂದನಸಮಯದೊಳೊಂ
ದಿನಿಸಾನುಂ ಬೇಗಮಿರಿಸಲರಿದೊಂದೆಡೆಯೊಳ್
ಮನಮನದೆ ಬಹುಪರಿಗ್ರಹ
ವಿನೋದದೊಳ್ [3]ತೊಡರ್ದ[3]ಜಡರ್ಗೆ ಸಯ್ತಿರ್ದಪುದೇ ೮೯

ನುಡಿಯದೆ ನೋಡದೆ ಕೇಳದೆ
ಮಿಡುಕದೆ ಸಮತೆಯೊಳೆ ಸಂಯಮಂ ಬೆರಸಿರೆ ಬಂ
ದಡಿಗಡಿಗೆ ಧರ್ಮಶುಕ್ಲ
ಕ್ಕೆಡೆಗುಡದೆಡೆವುಗುಗುಮಾರ್ತರೌದ್ರಧ್ಯಾನಂ ೯೦

1 ಯುಂ (ಗಚಜ) 2 ವ (ಕಟ) 3 ಒಡರ್ದು (ಚ)

ಒಡಲಂ ದಂಡಿಸಿ ತಪದೊಳ್
ನಡೆವ ತಪಸ್ವಿಗಳುಮೆಯ್ದೆ ಮನಮಂ [1]ತೆ ಗೆಲಲ್[1]
ಪಡೆಯರೆನೆ ಚಪಳರಕ್ಕಟ
ಪಡೆದಪರೆ ಗೃಹಸ್ಥರೆಂತೊ ಸರ್ವಾವಸ್ಥರ್ ೯೧

ಭವ ಭವದೊಳ್ ಪೆರ್ಚಿದ [2]ಕೆ[2]
ರ್ಚುವಿರ್ದ ಮಿಥ್ಯಾತ್ವದವರ್ಗೆ ಜಿನಧರ್ಮಕಥಾ
ಶ್ರವಣಂ ಪ್ರೈತ್ತಿಕಮಾಗಿ
ರ್ದ[3]ವರ್ಗೆ[3] ಪಾಲ್ ಕೈಪೆಯುಪ್ಪವೊಲ್ ಕೈಪೆವಲಂ ೯೨

ಆವರಿಸೆ ಕೂಸುತನಮು
ಪ್ಪಾವಳಿಯುಂ ತನುಧನಂಗಳಿಂದಿನ್ನೆವರಂ
ಮೂವಣ್ಣಂ ಬರೆ ರೂಪಪ
ರಾವರ್ತನವಿಧಿಯಿನವರ್ಗೆ ವಿಧಿ ವಿಧಿಯಿಸುಗುಂ ೯೩

ಬಸನಂಗಳೆ ನಿನ್ನಂ ಬ
ರ್ದಿಸುತಿರ್ದಪುವವಱ ಬಸದೊಳೆಸಪುದಱಿಂ [4]ನಾ
ಣ್ಚಿಸುವೀ ನಾಣಲಿ ನಾಣಂ[4]
ಪಸುವಂದಲೆ ಜೀವ ನೀನದೆಲ್ಲಿಗೆವೋದೈ ೯೪

ಬಳೆ ಕಣ್ಬೆರ್ದುವು ಕಣ್ಬಾ
ಯ್ಬುಳಿಯಾ[5][ಯಿತ್ತು][5]ಳಿಪುವೆ[6]ತ್ತುಮಱಿ[6]ವೋಪಿನೆಗಂ
ಬಳಸಿ ಬಲವಂದು ನೋಡು[7]ವೆ[7]
ಯೆಳೆವೆಂಡಿರನವರೊಳಜ್ಜ ನಿ[8]ನ್[8]ಗೇಂ[8]ಕಜ್ಜಂ ೯೫

---

1 ತಗೆಯಲ್ (ಕತ) ತೆಗೆಯಲ್ (ಗ) ತೆಗೆಲ್ (ಜ) 2 ಕಿ (ಗಚಜ) 3 ವಂಗೆ (ಗಚಜ) 4 ನಾಣಲಿನಾಣಂ (ಕ) ನಾಣ್ಚಸುವೀನಾಣ್ಚನಿಂ (ಗಚ) ನಾಣ್ಚವಿನಾಣ್ಚಂ (ಜ) ದಂ...... ನಾಣಲಿ...ನಾಣಂ...(ಟ) 5 ಯ್ತ್ತು (ಕಗಚಜಟ) ಯ್ತ್ತು ಬರ್ದೆಯ (ತ) 6 ತ್ತುದ [ಱಿ] 7 ವ (ತ) 8 ಗೆಂ (ಕಚಜಟತ)

ಕೆನ್ನೆಯ ನರೆಯಂ ಕದಪಿನೊ
ಳುನ್ನನ್ನಂ ನೆಗೆದ ತೆರೆಯ[1]ನೊಡ್ಡಿ[1]ದ ಜಗೆಯಂ
ಕನ್ನಡಿಯ ನೋಡಿ[2] ತಱಿಸಲೆ[2]
ಕನ್ನಡಿಕುಂ ವೃದ್ಧ ನೋಡ ನಿನ್ನಯ ಮೊಗಮಂ ೯೬

ಚಪ್ಪರಿಸಿ ಬಂದು ನಿನ್ನಂ
ಮುಪ್ಪಡಿಸಿದುದಣಲೊಳಡಸಲಿರ್ದಂ ಜನನಿ
ನ್ನಪ್ಪಡಮುಱಿ ಬಸನಮನಿ
ನ್ನಪ್ಪಡಮಿಲ್ಲೆನಿಸಿ ಶಕ್ತಿಗೆಟ್ಟಂದುಱಿವೋ ೯೭

ಪೂಸಿದ [3]ಕಱಿ[3]ಯಿವು ಗಡ್ಡದ
ಮಿಾಸೆಯೆ ಬೇರ್ಬೆಳ್ಪನಾಗೆ ಕಂಡೆಳವೆಂಡಿರ್
ಪೇಸೆ ಕುಲವೃದ್ಧವಿಟರುಂ
ಸಾಸಿಗರಾಕೆಗಳ ಬಱಿಯನುಱಿಯದೆ ಸುಱಿವರ್ ೯೮

ತಾನೊತ್ತೆಯಿಡಲ್ ಪೋದಡೆ
ನೀನಿನ್ನೆಮಗೆ[4]ಮ್ಮ[4]ತಂದೆಯೈಯೊತ್ತೆಗೆ ಕ
ಯ್ಯಾನೆಮೆನೆ ಮೆಚ್ಚಿ ಸುಱಿವಂ
ಮಾನಿನಿಯರಜ್ಜನೊಟ್ಟಜಂ [5]ಮ[5]ಚ್ಚಿದವೊಲ್ ೯೯

ಮುಸುಮೊಗಮಾಯ್ತು ಮೊಗಂ ಕಾ
ಲ [6]ಸುತ್ತುಗಂ[6] ಪೋಯ್ತು ಪಲ್ಗಳಳ್ಳಾಡಿದುವೇ
ಡಿಸುವಂತಿರ್ದಪಿರಿನ್ನುಂ
ಬಿಸುಡಿರೆ ನೀವಜ್ಜ ನಿಮ್ಮ ನಿರ್ಲಜ್ಜೆಕೆಯಂ ೧೦೦

ತರುಣತೆ ಪೋಗಿ ಜಿನಾಗಮ
ಪರಿಣತೆ ನಿಮಗಾಗೆ ತಪದೊಳೆಸಗಲ್ಕೆ ವಯಃ

---

1 ನೋಡಿ (ಕಗಛಜಟ) 2 ತೆರೆಯಂ (ಕಗಛಜಟ) 3 ನರೆ (ಚ) 4 ನ್ನ (ಕಗಛಜಟ) 5 ಮು (ತ) 6 ಸುತ್ತುಕಂ (ಚ) ಸತ್ತುಗಂ (ಗಜ)

ಪರಿಣತಿಗಿನಿವಿರಿದಂಬಂ
ದೊರೆಯೆನಿಕುಂ ಯುವತಿ ಗುರುನಿತಂಬಂ ದೊರೆಯೇ ೧೦೧

ಎಮ್ಮಾನೆಯೆಮ್ಮ ಕುದುರೆಯು
ವೆಮ್ಮರಸಿಯರೆಮ್ಮ ಮಕ್ಕಳವರೆಂಬೀ ಮ
ತ್ತಮ್ಮನದೊಳ್ ಕಯ್ಗಳಿಯೆಗ
ಳುಮ್ಮನೆ ರಸೆಗಿೞಿದರೆನಿಬರಾನುಮಿಳೇಶರ್ ೧೦೨

ಪುಡುಕೆಯು ಪೊಂಗಳಾರೊಡನೆ ಭೂತಳಮಾರೊಡನಂಗನಾಳಿಯಾ
ರೊಡನೆ [1]ಗಜಂಗಳಾ[1]ರೊಡನೆ ವಾಜಿಗಳಾರೊಡನಾಪ್ತತಂತ್ರಮಾ
ರೊಡನೆ ರಥಂಗಳಾರೊಡನೆ ಚಾಮರಮಾರೊಡನಾತಪತ್ರಮಾ
ರೊಡನೆ ವಿಭೂತಿಯಾರೊಡನೆ ಪೋದುವು ರಾಜ್ಯಮನೆಂತೊ ನಂಬುವರ್
೧೦೩

ಕರಿ ಪೋಗವು ಹರಿ ಪೋಗವು
ಪರಿವಾರಂ ಪೋಗವೊಡನೆ ನಡೆಪಿದ ನಾಲ್ವರ್
ನೆರಮಾಗಿ ಪೋಗರಂತಕ
ಪುರಕ್ಕೆ ಪೋಪೆಡೆಯೊಳರಸರೊರ್ವರೆ ಪೋಪರ್ ೧೦೪

ಇತ್ತ [2]ನಿ[2]ಷೇಕಮಾಗೆ ಗುರುಗತ್ತಭಿಷೇಕವಿಭೂತಿಗೊಂದುಗುಂ
ತತ್ತನಯರ್ಕಳೊಳ್ ಮೃತಕತೂರ್ಯಮೆ ಮಂಗಳತೂರ್ಯಮಕ್ಕುಮಾ
ಸತ್ತವರೆತ್ತ ನೀರಿೞಿವರೆತ್ತ ಜನಂ ನೆರದಿಂಡೆಯಾಡಿ ಪಾ
ಡುತ್ತೆಸೆದಿರ್ಪರಿಂತು ಮೃತರಾಜವಿಡಂಬಮನೇಕೆ ಕಾಣ್ಬರೇ ೧೦೫

ಮುನ್ನಿನ ಭವದೊಳ್ ಪುಣ್ಯಮ
ನಾನ್ನೆರಪಿದೆನದಱ ಫಲಮನುಂಡಪೆನದಱಿಂ
ದಿನ್ನಪ್ಪ ಭವಕೆ ನೆರಪುವೆ
ನೆನ್ನದ ನರಪತಿಗೆ ನರಕಪತನಂ ಪಿರಿದೇ ೧೦೬

1 ಪದಾತಿಯಾ (ಗ, ಚ) 2 ವಿ (ಕ)

ಪೆಱರ ಮಡಗೂ[1]ೞಿ[1] ರಾಜ್ಯ
ಕ್ಕೆಱಗಿರ್ದುದು ತವಗೆ ನಿಟ್ಟೆಯೆಂಬಂತಱನಂ
ಮಱ[2]ದಿರೆ ಸಪ್ತವ್ಯಸನ
ಕ್ಕೆಱಗಿರೆ ರಾಜ್ಯಾಂತಮಾಗದಿರ್ಕುವೆ ನರಕಂ ೧೦೭

ಜಲಬುದ್ಬುದ ಚಲವಿದ್ಯು
ದ್ವಿಲಸನ ಬಳರಿಪು ಶರಾಸನಂಗಳ್ ನಿರುತಂ
[3]ಬ[3]ಲ ವಿಭವ ರೂಪ ಯೌವನ
ವಿಲಾಸ[3]ವಿ[3]ಲಯಕ್ಕಿವಲ್ತೆ ದೃಷ್ಟಾಂತಂಗಳ್ ೧೦೮

ಆಗಳೆ ತಂಬುಲಮುರಿಸಿನ
ಮಾಗಳೆ ದಿವ್ಯಾಂಬರಂಗಳಾಗಳೆ ಕೆಲರಂ
ತಾಗಳೆ ಮಱ[2]ವರ್ ಸ್ವಾಮಿಯ
ನಾಗಳೆ ಪೆಱರ್ಗೆಱಗಿ ಜೀಯ ದೇವೆನುತಿರ್ಪರ್ ೧೦೯

ಕೃತಪೂರ್ವಮೆಂದು ತಂದೆಯ
ಮತಂಗಜಂ ವಾಜಿ ಪಟ್ಟಬಾಹ್ಯಂ ತತ್ಸಂ
ತತಿಗಪ್ಪೊಡೆ ರಾಜ್ಯಶ್ರೀ
ಸತಿಗೆ [4]ಪತದ್ಗ್ರಹಣ[4]ಯುಪ್ಪ ಕಾರಣಮೇನೋ ೧೧೦

ಎನಿಸಿದವ[5]ಸ್ಥೆ[5]ಗಳಂ ನೀ
ನನಿತುಮನೆಯ್ದಿದ್ದುರ್ದುವಾತ್ಮ ನಾಣ್ಬುವೆಯಲ್ಲೈ
ಮನದೊಳಣಂ ಸಿಗ್ಗಾಗ್ಗೈ
ನೆನೆಯೈ ನೀಂ ನಿನ್ನ ಬಂದ ಬಾರದ ಭವಮಂ ೧೧೧

ಹಾಸಕರಂ ಬುಧರ್ಗೆ[6]ಸು[6]ಖಾ
ಭಾಸಕರಂ ವಿಷಯಿಗಳ್ಗೆ ಕಾಯಂ ಕವಿಗಾ

---

1 ೞಿ (ಗಜಟ) 2 ಚ (ಕಟ) 3 ನಿ (ಚ) 4 ಪತಗ್ರಹಣೆ (ಕಟ) ಪೃಥಗ್ರಹಣೆ (ಗಜ) 5 ಸ್ಥು (ಗಜ) 6 ಸ (ಕಗಚಜಟ)

[1]ಯಾಸಕರಂ[1] ಪ್ರಾಣಿಗೆ ಸಂ
ತ್ರಾಸಕರಂ ಭೋಗಿ ಭೋಗದಂತುಟೆ ಭೋಗಂ ೧೧೩

ಎಂದಱಿದೀ ನಶ್ವರ ಶರೀರಾನಿತ್ಯತೆಯುಮನತಿಜಡಾತ್ಮಕಾತ್ಮ ಸ್ವಭಾವಮು ಮನನಿತ್ಯಾಸಾರಸಂಸಾರಸ್ವಭಾವಮುಮ[2]ನ[2]ತ್ಯಧಿಕನವ್ಯಾಬಾಧೆಯುಮನತಿಪ್ರಾಜ್ಯ ರಾಜ್ಯದೂಷಣಮುಮನತ್ಯಗಣ್ಯ ತಾರುಣ್ಯ ವೈಗುಣ್ಯಮುಮನತ್ಯುದ್ದಾಮ ಭೋಗ ಭಂಗುರತೆಯುಮನಂತೆ ನಿಜಾಂತರಂಗದೊಳ್ ಭಾವಿಸಿ ಬಾರದ ಭವಂ ಬಂದ ಜೀವನ ನೆಗಟ್ತೆಯಂ ಪ್ರತ್ಯಕ್ಷಮಾಗಿ ನುಡಿದುದಕ್ಕೆ ಕೊಕ್ಕರಿಸಿ

ಪಿರಿಯ ಸಿರಿಯಂ ಜಿನಾಗಮ
ಪರಿಣತಮತಿ ಕೊಳೆದ ಪುಲ್ಲ ದಕ್ಕಂ ಬಗೆವಂ
ತಿರೆ ಬಗೆದು ಬಿಸುಡಬಗೆದಂ
ಶರೀರ ಸಂಸಾರ ಭೋಗನಿರ್ವೇಗಪರಂ ೧೧೪

ಸೆರಗಂ ಪಾರ್ವುದೆ ಗಂಡಂ
ಶರೀರಸಂಸಾರ ಭೋಗ ನಿರ್ವೇಗಂಗಳ್
ದೊರೆಕೊಳುತೆ ಪರಿಗ್ರಹಮಂ
ಪರಿಹರಿಪುದು ಕಲಿಯ ದಂಡೆಯಂ [3]ನೂಂ[3]ಕುವವೋಲ್ ೧೧೫

ಎಂದು ತಳ್ತಿಸಂಡಾಗಳ್

ನರಲೋಕ ಶ್ರೀಕಾಂತಾ
ವಿರಕ್ತಮಾದತ್ತು ಪರಮ ನಿರ್ವೇಗಪರಂ
ಪರೆ ನೆಗಟ್ಟೆ ಮುಕ್ತಿಕಾಂತಾ
ನುರಕ್ತಮಾದತ್ತು ವಿಮಲವಾಹನನ ಮನಂ ೧೧೬

ಅಂತು ವಿಮಲವಾಹನಂ ವಿರಕ್ತಚಿತ್ತನಾಗಿಯುಂ ಮುಕ್ತಿಕಾಂತಾನುರಕ್ತಚಿತ್ತನಾಗಿ

1 ಯೊ ಸಕಳಂ (ಕಗಜಟ) 2 ನತಿ ನಿರ್ಮಳ ಧರ್ಮಮು ಮಹಾತ್ಮ್ಯಮುಮನತಿವಿಷಮ ವಿಷಯ ಜೃಂಭಿತಮುಮನ (ಗಚಜ) 3 ತೂಂ (ಗಜ)

ಬರವೇಟ್ದಾತ್ಮೀಯ ಮಂತ್ರಿಪ್ರಮುಖರನವರೊಳ್ ನಿಶ್ಚಯಂಗೆಯ್ದು ಧಾತ್ರೀ
ಭರಮಂ ಕೊಟ್ಟಾತ್ಮಜನ್ಮಂಗಧಿಕ ವಿಭವದಿಂ ಪಟ್ಟಮಂ ಕಟ್ಟಿ ದೀಕ್ಷಾ
ಭರಮಂ ಕೆಯ್ಕೊಂಡು ಗೆಲ್ಲಂಗೊಳಲೆ ಬಗೆದನುತ್ಸಾಹದಿಂ ಜೈನಧರ್ಮೋ
ದ್ಧರಣಂ ಭವ್ಯಾಬ್ಜಮಿತ್ರಂ ವಿನಯನಿಧಿ ಸುಹೃದ್ವತ್ಸಲಂ ವತ್ಸನಾಭಂ ೧೧೬

ಇದು ಸಕಲ ಮುನೀಂದ್ರವೃಂದ ವೃಂದಾರಕ ಶ್ರೀಮದಜಿತಸೇನ ಭಟ್ಟಾರಕ ಶ್ರೀಪಾದಪದ್ಮಪ್ರಸಾದಾಸಾದಿತ ರತ್ನತ್ರಯಾಲಂಕೃತ ಶ್ರೀಮದಭಿನವ ಚಕ್ರವರ್ತಿ ಕವಿರತ್ನ ನಿರ್ಮಿತ ಶ್ರೀ ದಾನಚಿಂತಾಮಣಿ ನಿರ್ಮಾಪಿತ ಶ್ರೀಮದಜಿತತೀರ್ಥಕರ ಪುರಾಣತಿಲಕದೊಳ್

ಅನಿತ್ಯವರ್ಣನಂ

ದ್ವಿತೀಯಾಶ್ವಾಸಂ

# ತೃತೀಯಾಶ್ವಾಸಂ

ಶ್ರೀಮದ್ಗುಣಮಣಿ ಜಲಧಿಸು
ಸೀಮಾನಗರಾಧಿನಾಯಕಂ ನಿಜಗುಣಚೂ
ಡಾಮಣಿ ಬಿಸುಟಂ ರಾಜ್ಯ
[1]ವ್ಯಾ[1]ಮೋಹಮನಚಲಚರಿತನಪಗತದುರಿತಂ ೧

ಅಂತು ತನಗೆ ಕಾಲಲಬ್ಧಿ[2]ಯುಂ ಕರಣಲಬ್ಧಿಯು[2]ಮುಪಶಮಲಬ್ಧಿಯುಮೆಂಬ ಲಬ್ಧಿತ್ರಯಂ ದೊರೆಕೊಳೆ ಸಾಮ್ರಾಜ್ಯದೀಕ್ಷಿತಂ ದೀಕ್ಷಾಭಿಮುಖನುಂ ಸಂಸಾರ ಪರಾಙ್ಮುಖನುಮಾಗಿ ಪಲಬರರಸುಮಕ್ಕಳ್ವೆರಸು ಮೋಕ್ಷಮಾರ್ಗರೂಪಮಂ ಕೈಕೊಂಡು ಮೂಲಗುಣಂಗಳೊಳಮುತ್ಕೃಷ್ಟಚಾರಿತ್ರದೊಳಮುತ್ತರೋತ್ತರಂ ನೆಗಳುತ್ತುಂ ಏಕವಿಹಾರಿಯುಂ ದ್ವಿವಿಧ ಸಂಯಮಧಾರಿಯುಂ [3]ತ್ರಿಗುಪ್ತಿ[3]ಗುಪ್ತನುಂ ಚತುಷ್ಕಷಾಯದರ್ಪದಳನನುಂ ಪಂಚಸಮಿತಿನಿಯತನುಂ [4]ಷಡ್ಜೀವ[4]ದಯಾನಿರತನುಂ ಸಪ್ತರ್ಧಿಸಂಪನ್ನನುಂ ಅಷ್ಟಮಲವ್ಯಪೇತನುಂ ನವವಿಧ ಬ್ರಹ್ಮಚ[5]ರ್ಯೋಪೇತನುಂ[5] ದಶಕುಶಲಧರ್ಮನಿಪುಣನುಂ ಏಕಾದಶಾಂಗಧಾರನುಂ ದ್ವಾದಶವಿಧ ತಪೋನುಷ್ಠಾನ ನಿಷ್ಠಿತನುಂ ತ್ರಯೋದಶವಿಧ ಕ್ರಿಯಾತತ್ಪರನುಂ ಚತುರ್ದಶ ಪೂರ್ವವೇದಿಯುಂ ಪಂಚದಶ ಪ್ರಮಾದ ಪರಿವರ್ಜಿತನುಮಾಗಿ ಕೇವಲಜ್ಞಾನೋಪಲಕ್ಷಿತ ಜೀವದ್ರವ್ಯ ಸಹ ಕಾರಿಕಾರಣ ಬಂಧುರ ಪ್ರಾರಂಭಮುಮನುಪಮಾನಂತ್ಯಪ್ರಾಭವಮುಮಚಿಂತ್ಯಾಶೇಷ ಕಾರಣಮುಂ ತ್ರೈಲೋಕ್ಯವಿಜಯ ಹೇತುಭೂತ[6]ಮುಂ[6] ತೀರ್ಥಕರನಾಮ ಗೋತ್ರ ಕರ್ಮಕಾರಣಮುಮಪ್ಪ ಷೋಡಶ ತೀರ್ಥಕರ ಭಾವನೆಯುಮಂ ಭಾವಿಸಲ್ ಬಗೆದು

ತನು ತನುವಾಗೆ ನೋಂತು ಪರಮಾಗಮ ಭಾವನೆಯೊಳ್ ನಿರಂತರಂ
ಮನಮಿರೆ ತನ್ನ ನಾಲಗೆ ಜಿನೇಂದ್ರಗುಣಸ್ತುತಿಗೆಯ್ಯೆ ತನ್ನೊಳಿಂ
ಬೆನೆ ಕರಣ[7]ತ್ರಯ ಪ್ರಕೃತಿ[7]ಶುದ್ಧಿ ನೆಗಳ್ದಿರೆ ಮುನ್ನಿನ ರಾಜ್ಯಲೀಲೆಯಂ
ನೆನೆಯದೆ ತಾಳ್ದಿದಂ ವಿಮಲವಾಹನಯೋಗಿ ತಪೋನಿಯೋಗಮಂ ೨

---

1 ಮಹಾ (ಗಚಜ) 2 ಯು (ಕಚ) 3 ತ್ರಿಗುಪ್ತ (ಗಜ) ಶ್ರೀಗುಪ್ತ (ಚ) 4 ಷಡ್ವಿಧ (ಗಚ) 5 ರ್ಯೋಪನುಂ (ಕ) ರ್ಯಧರನುಂ (ಗಚಜ) 6 ಮಪ್ಪ (ಕಚ) ಮುಮಪ್ಪ (ಗಜ) 7 ತ್ರಿ (ಕ)

ಅಂತು ತಾಳ್ದಿ ದರ್ಶನವಿಶುದ್ಧಿರ್ವಿನಯಸಂಪನ್ನತಾ ಶೀಲವ್ರತೇಷ್ವನತಿಚಾರೋಽಭೀಕ್ಷ್ಣಜ್ಞಾನೋಪಯೋಗಸಂವೇ[1]ಗಾ[1]ಶಕ್ತಿತಸ್ತ್ಯಾಗತಪಸೀ ಸಾಧುಸಮಾಧಿರ್ವೈಯಾಪೃತ್ಯಕರಣಮರ್ಹದಾಚಾರ್ಯ ಬಹುಶ್ರುತಪ್ರವಚನ ಭಕ್ತಿರಾವಶ್ಯಕಾಪರಿಹಾಣಿರ್ಮಾರ್ಗಪ್ರಭಾವನಾ ಪ್ರವಚನ ವತ್ಸಲತ್ವಮಿತಿ ತೀರ್ಥಕರತ್ವಸ್ಯ ಎಂದಾದ ತತ್ವಾರ್ಥಸೂತ್ರದೊಳ್ ಪೇಳ್ದ ಷೋಡಶ ತೀರ್ಥಕರ ಭಾವನೆಗಳಂ ಭಾವಿಸಿ ಸಕಲ ಜಗತ್ರಯಕ್ಷೋಭಕಾರಿಯಪ್ಪ ತೀರ್ಥಕರ ಪುಣ್ಯಮಂ ಕಟ್ಟಿ ಕಾಲಾಂತರದೊಳ್ ಚತುರ್ವಿಧಾರಾಧನ ಪುರಸ್ಸರಂ ಸಮಾಧಿಮರಣದಿಂ ಶರೀರಪರಿತ್ಯಾಗಂಗೆಯ್ದು ಪಂಚಾಣೂತ್ತರೆಗಳೊಳಗಣ ವಿಜಯದೊಳಹಮಿಂದ್ರನಾಗಿ ಪುಟ್ಟಿ ಸಮಚತುರಸ್ರ ಸಂಸ್ಥಾನನುಂ ಶರತ್ಸಮಯ ಸಮುದಿತ ಶಶಾಂಕಸಂಕಾಶ ವಿಶದವರ್ಣನುಂ ಸರ್ವಾಂಗೋಪಾಂಗ ಸುಂದರ ಶುಭಲಕ್ಷಣೋಪಲಕ್ಷಿತೈಕರತ್ನಿಪ್ರಮಾಣ ವೈಕ್ರಿಯಕ ಶರೀರನುಂ ತ್ರಾಯಸ್ತ್ರಿಂಶತ್ಸಾಗರೋಪಮಪ್ರಮಿತ ಜೀವಿತನುಂ ಪ್ರಶಸ್ತ ವರ್ಣ[2]ರಸ ಗಂಧ[2] ಸ್ಪರ್ಶನುಂ ಅಣಿಮಾದ್ಯಷ್ಟಗುಣಮಣಿವಿಭೂಷಣನುಂ ಶುಕ್ಲ ತರ ಲೇಶ್ಯಾಪರಿಣಾಮನುಂ ಸಾರ್ಧ ಷೋಡಶ ಮಾಸ ನಿರ್ಯತ್ಸುರಭಿ ನಿಶ್ವಾಸನುಂ ತ್ರಿಸಹಸ್ರೋತ್ತರ ತ್ರಿಂಶತ್ಸಹಸ್ರ ವತ್ಸರ ಸಂಕಲ್ಪಿತಾಮೃತಾಹಾರನುಂ ಸಪ್ರವಿಚಾರ ಸುಖಾನಂತ ಗುಣ ನಿಷ್ಪ್ರವಿಚಾರ ಸುಖನುಂ ಲೋಕನಾಳಿಕಾಭ್ಯಂತರ ಗತಾವಧಿಜ್ಞಾನನುಂ ನಿಜಾವಧಿ[3]ಬೋಧ[3] ಕ್ಷೇತ್ರಮಾತ್ರ ಪುರಾಣ ಸಮರ್ಥಮೂಲಶರೀರ ವಿಕ್ರಿಯಾಬಲನುಂ ಪಂಚವಿಧಾಂತರಾಯ ಕರ್ಮಕ್ಷಯೋಪಶಮ ಸಮುದ್ಭವ ಪಂಚೇಂದ್ರಿಯನತೃಪ್ತಿಸಂಪಾದಿತ ಸ್ವಾತ್ಮಸುಖಂ ಸಾತಶುಭಪಂಚಸುಖಾನುಭವನಿರತನುಮಾಗಿ ವಿಮಲವಾಹನನ ಹಮಿಂದ್ರಂ ಸಾಗರೋಪಮಂಗಳೆಲ್ಲಮಂ ನೆರಪಿ ಭರತಕ್ಷೇತ್ರದೊಳೆರಡನೆಯ ತೀರ್ಥಕರ ಪರಮದೇವನಾಗಲೆಂದು ಬರಲಿರ್ಪನ್ನೆಗಂ

ಜಿನಭಾನು ಬಂದು ಭರತಾ
ವನಿಯೊಳ್ ಭವ್ಯಾಬ್ಜ ಬಂಧುವುದಯಿಸಿದಪ್ಪೊಂ
ನೆನೆದಱಿಗೆಂಬಂತೆ ನಿಳಿಂ
ಪನಾಯಕಂಗಾದುದಾಗಳಾಸನಕಂಪಂ ೩

ಅಂತು ತನಗಾಸನಕಂಪಮಾಗೆ

1 ಗಾ (ಗಜ) 2 ಗಂಧರಸ (ಕ) 3 ಬಂದ (ಜ)

ನೆಗೞ್ದ ಜಿತಶತ್ರು ನೃಪತಿಗೆ
ಮಗನಾದಪನಜಿತನಾಥನೆಂದಱಿದು ಮನ
ಕ್ಕೊಗೆದವಧಿಬೋಧದಿಂ ವಿಬು
[1]ಧಗಣಾ[1]ಗ್ರಣಿ ಬರಿಸಿ ಬೆಸಸಿದಂ [2]ಧನ[2]ಪತಿಯಂ ೪

ಬೆಸಸಿದೊಡೆ ಮಱು ಪೊೞ್ತುಂ
ವಸುಧಾರೆಯನೊಸೆದು ಮೂಱುಕೋಟಿಯುಮರೆಯಂ
ವಸುಪತಿ ಕರೆದಂ ರಾಜಾ
[3]ವಸಥ[3]ದೊಳೇಂ ಪಿರಿದೊ ಜಿನನ ಪುಣ್ಯಾತಿಶಯಂ ೫

ಅಂತು ಮುನ್ನಮಱುದಿಂಗಳುಂಟೆನೆ ವಸುಮಯಮನಯೋಧ್ಯೆಯೊಳ್ ಧನದಂ ಕಱೆಯೆ ಕಱೆಯುತಿರ್ಪಿನಂ [4]ಪ್ರ[4]ಸಾದವರ್ಧನ ಜಾತವರ್ಧನ ಧೈರ್ಯವರ್ಧನ ಮನೋವರ್ಧನ ಸೌಭಾಗ್ಯವರ್ಧನ ಹೇತುಭೂತೆಯರಂ ಪದ್ಮಾದಿ ಸರೋವರ ನಿವಾಸಿಯರಂ ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬಱುವರುಂ ದೇವಿಯರುಮಂ ಅನೇಕ ಕೂಟಕೋಟಿ ರುಚಿರಮಪ್ಪ ರುಚಕಾಚಲದ ಪೂರ್ವದಿಗ್ಭಾಗದ ವೈಡೂರ್ಯಾದಿಗಳಪ್ಪೆಂಟು ಕೂಟಂಗಳೊಳಿರ್ಪ ವಿಜಯಾದಿ ದೇವಿಗಳಪ್ಪೆಣ್ಬರುಂ ದಿಗ್ದೇವಿಯರುಮಂ ಅಕ್ಷೋಣೀಧರದ ದಕ್ಷಿಣದಿಗ್ಭಾಗದ ಮೋಘಾದಿಗಳಪ್ಪೆಂಟುಂ ಕೂಟಂಗಳೊಳಿರ್ಪ ಸುಪ್ರದೀಪಾದಿಗಳಪ್ಪೆಣ್ಬರುಂ ದಿಗ್ವನಿತೆಯರುಮಂ ಆ ಪರ್ವತದ ಪಶ್ಚಿಮ ದಿಗ್ಭಾಗದ ರೋಹಿತಾಕ್ಷಾದಿಗಳಪ್ಪೆಂಟುಂ ಕೂಟಂಗಳೊಳಿರ್ಪಿಳಾದೇವತಾದಿಗಳಪ್ಪೆಣ್ಬರುಂ ದಿಗಂಗನೆಯರುಮಂ ಆ ಮಹೀಧರದುತ್ತರ ದಿಗ್ಭಾಗದ ಸ್ಫಟಿಕಾದಿಗಳಪ್ಪೆಂಟುಂ ಕೂಟಂಗಳೊಳಿರ್ಪ ಲಂಬೂಷಾದಿಗಳಪ್ಪೆಣ್ಬರುಂ ದಿಕ್ಕಾಂತೆಯರುಮಂ ಮತ್ತಮಾ ನಗದ ಮೂಡಣ ದೆಸೆಯ ವಿಮಳಾದಿಗಳಪ್ಪೀ ನಾಲ್ಕು ಕೂಟಂಗಳೊಳಿರ್ಪ ಚಿತ್ರಾದಿಗಳಪ್ಪ ನಾಲ್ವರ್ ವಿದ್ಯುತ್ಕುಮಾರಿಯರುಮಂ ಮತ್ತಮಾ ಶೈಲದ ಪಶ್ಚಿಮ ದಿಗ್ಭಾಗದ ವಿಕಟ ಕೂಟಂಗಳೊಳಿರ್ಪ ರುಚಕಾದಿಗಳಪ್ಪೆಣ್ಬರುಂ ಕುಮಾರಿಕಾ ಮಹತ್ತರಿಕೆಯರುಮಂ ಆ ಗಿರೀಂದ್ರ ಕೃತಕ ಕೂಟಂಗಳೊಳಿರ್ಪ ವಿದ್ಯುತ್ಕುಮಾರಿಕಾ ಪುರಂಧ್ರಿಯರುಮಂ ಮತ್ತಮಿತರ ನಿವಾಸಿಯರಪ್ಪ ಪೆಱಪೆಱರುಮೆನಿಬರಾನುಂ ದೇವಿಯರುಮಂ ದೇವರಾಜಂ ವಿಜಯಸೇನಾದೇವಿಯ ಸಂಶೋಧನಾ ವಿಧಿವಧೂರಹಸ್ಯವ್ಯಾಪಾರಪರಾಯಣರುಂ ಪರಿಚಾರಿಕೆಯರುಮಾಗಿ ನೆಗೞ್ವಿಂತು ನಿಯಮಿಸೆ ನಿಯಮನಿಷ್ಠಿತೆಯರಾಗಿ

1 ಧಾ (ಗಜ) 2 ನರ (ಜ) 3 ವಾಸ (ಗಜ) 4 ಪ್ರಾ (ಕ)

ರಸಭಾವಂಗಳೊಳಾಡಿ ಪಾಡಿ ಮಧುರಪ್ರಧ್ವಾನದಿಂ ದಿವ್ಯವ
ಸ್ತ್ರ ಸುಗಂಧೇಂದ್ರತರುಪ್ರಸೂನ ಫಲಸಂತಾನಂಗಳಂ ತಂದು ಮೆ
ಚ್ಚಿಸಿ ಕೈಗೈಯೊಳೆ ಮಜ್ಜನಂಬುಗಿಸಿಯುಂ ಶ್ರೀಮುಂಪಿಂಚದೋರೋರ್ವರೊಳ್
ಬೆಸವೇೞ್ದಲ್ಲಿಗನಲ್ಲಿಗಂ ವಿಜಯಸೇನಾದೇವಿಗಾ ದೇವಿಯರ್ ೬

ಅಡಿಗಡಿಗೆ ಸತಿಗೆ ಸಿರಿಕ
ನ್ನಡಿದೋಱುವ ಚಂದ್ರಕವಳದಿಂದಂ ಮೊಗಮಂ
ತೊಡೆ[1][ವ ಅಲಕ್ತಕ][1]ರಸದಿಂ
ದಡಿಯೂಡುವ ಬೆಸನೆ ದಿವಿಜವನಿತೆಯರ್ಗೆ ಬೆಸಂ ೭

ಭರತಮನೋದುವ ಸಪ್ತ
ಸ್ವರಮಂ ಗುಣಿಯಿಸುವ [2]ಬೀ[2]ಣೆವಾಜಿಪ ವಿದ್ಧಂ
ಬರೆವ ಪರಚಕ್ರಮಿಕ್ಕುವ
ಪರಿಹಾಸದೊಳಿರ್ಪ ಬಿನದದಮರ್ವರ್ಗಳ ಬಿನದಂ ೮

ಲೀಳಾವನದೊಳೆ ವಿಹರಿಪ
ಲೀಳಾಸರದೊಳಗೆ ಮೂಡಿ ಮುೞುಂಕುವ ಲೀಲಾಂ
ದೋಳಮನೇಱುವ ಲೀಲಾ
ಕೇಳಿಗಳೆ ವಿಲಾಸಕೇಳಿಗಳ್ ನೃಪಸತಿಯಾ ೯

ಕರತಳಪಲ್ಲವೆ ಬಹುಲೋ
ತ್ಕರ ಮಧುಕರನಿಕರೆ ಪುಷ್ಪವತಿಯಾಗಿಯುಮೇಂ
ಪರಮಪವಿತ್ರಜನಕ್ಕನು
ಕರಿಸಿದಳಂದಾ ಲತಾಂಗಿ ಜಂಗಮಲತೆಯಂ ೧೦

ಬರೆ ಮನೆಗಭ್ಯಾಗತರಾ
ದರದಿಂ ಗೃಹಶುದ್ಧಿ ಮಾಡುವಂತಜಿತಜಿನಂ
ಬರಲಿರೆ ಮಾಡಿದರಮರೇ
ಶ್ವರಸತಿಯರ್ ನೆರೆದು ಗರ್ಭಸಂಶೋಧನಮಂ ೧೧

1 ವ ನವಲಕ್ತ (ಕಚಜಟತ) ದ ನವಲಕ್ತ (ಗ) 2 ವೀ (ಗಚಜ)

ಅಂತಮ[1]ರಾಂಗನೆ[1]ಯರ್ ತಮತಮಗೆ ಗರ್ಭಶೋಧನಾವಿಧಿಯಂ ಮಾಡಿ ವಿವಿಧ ವಿನೋದಂಗಳಿಂ ಮೆಱೆಯುತಿರ್ಪನ್ನೆಗಂ ಜ್ಯೇಷ್ಠಮಾಸದಮಾವಾಸ್ಯೆಯೊಳ್ ರೋಹಿಣೀ ನಕ್ಷತ್ರದೊಳ್ ಬೆಳಗಪ್ಪ ಜಾವದಾಗಳ್ ಗೋಮೇಧಿಕಾಧಿಷ್ಠಾನದಿಂ ಶುದ್ಧಸ್ಫಟಿಕ ಭಿತ್ತಿಯಿಂ ಶಾತಕುಂಭಸ್ತಂಬದಿಂ ಪದ್ಮರಾಗಮಯದ್ವಾರದಿಂ ಮಾಣಿಕ್ಯದ ಕಳಶದಿಂ ಮರಕತದ ತೋರಣದಿಂ ಚಂದ್ರಕಾಂತದ ಮತ್ತವಾರಣದಿಂ ಹರಿನೀಲ ಗವಾಕ್ಷಜಾಲದಿಂ ವಿಚಿತ್ರವಸ್ತ್ರವಿತಾನದಿಂ ಯಕ್ಷಕರ್ದಮದ ಸಾರವಣೆಯಿಂ ಬಿಡು ಮುತ್ತಿನ ರಂಗವಲಿಯಿಂ ಸುರತರುಕುಸುಮದ ಪೂವಲಿಯಿಂ ಱೊಬ್ಬಿನ ಸೊಡರ್ಗುಡಿಯಿಂ *ಕಾಳಾಗರುವಿನ ಧೂಪದ ಕರ್ಬೊಗೆಯಿನೆಸೆವ ದಿವ್ಯ ಶಯನಗೃಹದ ವೈಡೂರ್ಯ ಪರ್ಯಂಕದೊಳ್ ಪವಡಿಸಿರ್ದು ಬೆಳಗಪ್ಪ ಜಾವದಃಗಳ್

ಕರಿ ವೃಷಭ ಮೃಗೇಂದ್ರ ಶ್ರೀವಧೂಪುಷ್ಪಮಾಲಾ
ಹರಿಣಧರ ವಿವಸ್ವನ್ಮೀನಕುಂಭದ್ವಯಾಬ್ಜಾ
ಕರ ಜಲಧಿಗಜದ್ವಿಟ್ಪೀಠ ಚಕ್ರಾಹಿಗೇಹ
ಸ್ಫುರಿತ ಮಣಿಸಮೂಹಜ್ವಾಳೆಯಂ ಕಾಂತೆ ಕಂಡಳ್ ೧೩

ಅಂತು ಷೋಡಶ ಶುಭಸ್ವಪ್ನ*ದರ್ಶನಾನಂತರಂ ತನ್ನ ವದನಾರವಿಂದಮಂ ಗಜರಾಜಂ ಬಂದು ಪುಗುವುದುಮಂ ಕನಸುಗಂಡು ಮಂಗಳಪಾಠಕರ ಪುಣ್ಯಾರವಂಗಳೊಳಮಂತಃಪುರ ಪುರಂಧ್ರಿಯರ ಧವಳ ಮಂಗಳ ಗೇಯಂಗಳೊಳಮುನ್ನಿದ್ರೆಯಾಗಿ ಮಜ್ಜನ ಮಂಡನಾದಿ ನಿತ್ಯನಿಯಮ ವ್ಯಾಪಾರಮಂ ನಿರ್ವರ್ತಿಸಿ ತನ್ನ ಕಂಡ ಕನಸುಗಳಂ ನಿಜಮನೋವಲ್ಲಭಂಗಱಿಪಲೆಂದು

ಮಸೆದ ಮದನಬಾಣಾಟೋಪಮಂ ಕಣ್ಣ ಬೆಳ್ಪೇ
ಱಿಸಿದ ಮದನಚಾಪಾಟೋಪಮಂ ಪುರ್ಬುಗಳ್ ಪೋ
ಲ್ತೆಸೆಯೆ ವಿಜಯ[1]ಚಿಹ್ನಂ[2] ಚಿತ್ತಜಂಗೆಂಬಿನಂ ರಂ
ಜಿಸುವ ವಿಜಯಸೇನಾದೇವಿ ಕಣ್ಗೊಪ್ಪೆ ಬಂದಳ್ ೧೪

---

1 ರನಾರಿ (ಚ)   2 ಸಿಂಹಂ (ಗಜಜ)

* ಇಲ್ಲಿಂದ ಮುಂದಣ ವಚನದ 'ಶುಭಸ್ವಪ್ನ' ಎಂಬುದರವರೆಗೂ 'ಚ' ಪ್ರತಿಯಲ್ಲಿಲ್ಲ.

ಅಂತಾ ಮಹಾದೇವಿ ಧವಳಮಂಗಳಪ್ರಸಾಧನಾಲಂಕೃತಶರೀರೆಯುಮಮರಾಂಗನಾ ಜನ[1]ವೀಜ್ಯ[1]ಮಾನ ಧವಳ ಚಾಮರಕಳಾಪೆಯುಂ ಧವಳ ಕಂಚುಕಾವಚ್ಛನ್ನ ವೃದ್ಧ ಕಂಚುಕೀಜನ ಪರಿವೃತೆಯುಮಾಗಿ ಬಂದವನತೋತ್ತಮಾಂಗೆಯಾಗಿ ಸಿಂಹಾಸನಾರ್ಧೈಕ ದೇಶಮನಲಂಕರಿಸಿ ಸೋಂಕೆ ಕುಳ್ಳಿರ್ದು ತನ್ನ ಕಂಡ ಕನಸುಗಳೆಲ್ಲಮನನು ಕ್ರಮದಿಂದಱಿಪೆ ದೇಶಾವಧಿಬೋಧಸಂಪತ್ಸಂಪನ್ನನಪ್ಪ ಜಿತಶತ್ರುಮಹಾರಾಜಂ ತದೀಯ ಶುಭಸ್ವಪ್ನಫಲಮನಱಿದು ತನ್ನಂ ಸಫಲೀಕೃತ ಜನ್ಮನಾಗೆ ಬಗೆದು

ಕುಳತಿಳಕಂ ಜಗತೀತಳ
ತಿಳಕಂ ತಾಂ ನಮಗೆ ತನಯನಾಗಲ್ ಬಗೆದಂ
ಬೆಳಗುಗುಮಾತಂ ನಮ್ಮಯ
ಕುಳಮಂ ಶ್ರೀಜೈನಧರ್ಮಮಂ ಪ್ರಿಯದಯಿತೇ ೧೪

ಅದೆಂತೆಂದೊಡೆ ಭದ್ರಗಜದಿಂ ಭದ್ರಾಕಾರನುಂ ಗಜಲಾಂಛನನುಂ ಧವಳವೃಷಭದಿಂ ನಿಜಕುಲಧವಳನುಂ ಧರ್ಮಧುರಂಧರನುಂ ಸಿಂಹದಿಂ ದುರಿತ ಗಜಘಟಾವಿಘಟನನುಂ ಸ್ಯಾದ್ವಾದಾಚಲಶಿಖರಿಶೇಖರನುಂ ಲಕ್ಷ್ಮೀಕಾಂತೆಯಿಂ ಸಾಮ್ರಾಜ್ಯಲಕ್ಷ್ಮೀಕಾಂತನುಂ ಮೋಕ್ಷಲಕ್ಷ್ಮೀವಲ್ಲಭನುಂ ಕುಸುಮದಾಮದಿನುದ್ದಾಮಕೀರ್ತಿಯುಂ ಭವ್ಯಮಧುಕರ ನಿಷೇವ್ಯನುಂ ಚಂದ್ರನಿನಿಕ್ವಾಕುಕುಲವಿಯತ್ತಳ ಚಂದ್ರನುಂ ಕುಮುದಾನಂದ ಕರನುಂ ಮಾರ್ತಂಡನಿಂ ಸಕಲ ಭವ್ಯ ಪುಂಡರೀಕ ಪ್ರಬೋಧಕರನುಮುದ್ಭಾಸಿ ವಿಮಳಕೇವಳಜ್ಞಾನನುಂ [2]ಮೀ[2]ನಯುಗ್ಮದಿಂ ವಿನಿರ್ಜಿತ [2]ಮೀ[2]ನಕೇತನನುಮನಿ ಮಿಷಾಭ್ಯರ್ಚಿತನುಂ ಪೂರ್ಣಕುಂಭದಿಂ ಸಂಪೂರ್ಣ ಪುಣ್ಯೋದಯನುಂ ಕನಕ ಕಳಶ ಶಾಲಿಲೀಲಾಭಿಷೇಕಯೋಗ್ಯನುಂ ಕಮಳಾಕರದಿಂ ಕಮಳಾಕಾರನುಮತಿಸ್ವಚ್ಛಸ್ವಭಾ ವನುಂ ಅಂಭೋಧಿಯಿಂ ಚತುರಶೀತಿ ಲಕ್ಷ ಲಕ್ಷಣ ಗುಣ ರತ್ನಾಂಭೋಧಿಯುಂ ಸಮುದ್ರಸಮಗಾಂಭೀರ್ಯನುಂ ಸಿಂಹಪೀಠದಿಂ ಸ್ನಾನಪೀಠೀಕೃತ ಮಂದರಾಚಲನುಂ ಸಿಂಹಾಸನಾರೋಹಣೋಚಿತಾಷ್ಟೋತ್ತರಶತ ಶುಭಲಕ್ಷಣೋಪಲಕ್ಷಿತಾಂ ಗೋಪಾಂ ಗನುಂ ಸುರವಿಮಾನದಿಂ ವಿಜಯವಿಮಾನಾವತೀರ್ಣನುಂ ವೈಮಾನಿಕವೃಂದವಂದ್ಯ ಮಾನ ಚಾರುಚರಣಾರವಿಂದನುಂ ನಾಗಭವನದಿನುದಾತ್ತಭೋಗಿಯುಂ ತ್ರಿಭುವನೈಕ ಚೂಡಾಮಣಿಯುಂ ರತ್ನರಾಶಿಯಿಂದಷ್ಟಾದಶಸಹಸ್ರ ಶೀಲರತ್ನರಾಶಿಯುಂ ಪರಾರ್ಧ್ಯ ಗುಣಮಣಿವಿಭೂಷಣನುಂ ಅಗ್ನಿಯಿಂ ದುರಿತವನ ದಾವಾಗ್ನಿಯುಂ ವಿಶುದ್ಧಧ್ಯಾನಾ

1 ವಿಜಯ (ಕ) ವಿದ್ಯಾ (ಜ) 2 ಮಾ (ಜ)

ನಲನಿರ್ವಗ್ಧಕರ್ಮೇಂಧನನುಮೆನಿಸಿ ನಿಜವದನಾಬ್ಜ ಪ್ರವೇಶಿ ಗಜರಾಜನಂ ಕಂಡು ದಱಿಂ ರಾಜಕುಂಜರಂ ನಿನಗೆ ತನಯನಾದಪನೆಂದು ಷೋಡಶ ಶುಭಸ್ವಪ್ನಫಲವು ನಱು[1]ಪೆ[1]

ಧರಣೀಶ್ವರವಚನಾಮೃತ
ಪರಿಷೇಕದೆ ಗರ್ಭಭೂಮಿಯೊಳ್ ತೀರ್ಥಕರಾಂ
ಕುರವುುದಯಿಸಿದಂತಾಗಿರೆ
ಪರಮೇಶ್ವರಿ ಮಗನನಂದು ಪೆತ್ತಂತೊಸೆದಳ್ ೧೫

ಅನ್ನೆಗಂ ಸಮಯಾವಳಿಕ್ರಮಸಮಾಗತಸಂಖ್ಯೆಗಳಿಂ ವ್ಯವಹಾರಪಲ್ಯಾ[2]ಧಾರಪಲ್ಯ ಮು[2]ದ್ಧಾರಪಲ್ಯಮೆಂದು ಪಲ್ಯಂಗಳ್ ಮೂಱು ತೆಱನಕ್ಕುಮಾ ಪೇೞ್ದ ಪಲ್ಯಂಗಳಂ ಪತ್ತು ಕೋಟಿ ಕೋಟಿಗೊಂ[3]ಡೊಡವು[3] ವ್ಯವಹಾರೋದ್ಧಾರಾಧಾರ ಸಾಗರೋಪ ಮಂಗಳೆಂಬುವುವುವಱ[3]ೊಳುದ್ಧಾರ ಸಾಗರೋಪಮಂಗಳ್ ಪತ್ತು ಕೋಟಿಕೋಟಿ ಗೊಂಡೊಡವಸರ್ಪಿಣಿಕಾಲಮಕ್ಕುಮುತ್ಸರ್ಪಿಣಿಕಾಲಮುಂ ತತ್ಪ್ರಮಾಣದೇಹೋ ತ್ಸೇಧಾಯುರ್ಭೋಗಂಗಳ ಹಾನಿವೃದ್ಧಿಗಳೀ ಭರತಕ್ಷೇತ್ರದೊಳ್ ಮಾರ್ಗಮಪ್ಪುದಱಿಂ ದಮವರ್ಕುತ್ಸರ್ಪಿಣಿಯುಮವಸರ್ಪಿಣಿಯುಮೆಂಬ ಪೆಸರ್ಗಳಾದುವವೆರಡುಂ ಕೂಡಿ ದೊಡೆ ಕಲ್ಪಮೆಂಬುದಕ್ಕುಮವಱ[3]ೊಳವಸರ್ಪಿಣಿಯಕಾಲಂ ಸುಷ[4]ಮ[4] ಸುಷಮೆಯುಂ ಸುಷ[4]ಮ[4]ದುಷ್ಷಮೆಯುಂ ದುಷ್ಷ[4]ಮ[4] ಸುಷಮೆ[5]ಯುಂ ದುಷ್ಷಮ ದುಷ್ಷಮೆಯುಂ[5] ದುಷ್ಷಮೆಯುಮತಿದುಷ್ಷಮೆಯುಮೆಂದು ಷಡ್ವಿಧಮಕ್ಕುಮುತ್ಸರ್ಪಿಣಿಯ ಕಾಲ ಮುಮತಿದುಷ್ಷಮೆಯುಂ ದುಷ್ಷಮೆಯುಂ ದುಷ್ಷ[6]ಮ[6] ಸುಷಮೆಯುಂ ಸುಷಮ ದುಷ್ಷಮೆಯುಂ ಸುಷಮೆಯುಂ ಸುಷ[6]ಮ[6] ಸುಷಮೆಯುಮೆಂದು ಷಟ್ಪ್ರಕಾರಮಕ್ಕು ಮಲ್ಲಿ ಸುಷಮ ದುಷ್ಷಮೆಯೆಂಬ ಮೂಱನೆಯ ಕಾಲಂ ಮೂಱು ವರ್ಷಮುಮೆಂಟು ತಿಂಗಳುಂ ಪದಿನೈದು ದಿವಸಮುಂ ಪೋದಿಂಬೞಿಯಂ ನಾಲ್ವತ್ತಿಚ್ಛಾಸಿರ ವರ್ಷಂಗುಂದಿ ದೊಂದು ಕೋಟಿ ಕೋಟಿ ಸಾಗರೋಪಮಸ್ಥಿತಿಯನುಳ್ಳ ದುಷ್ಷ[6]ಮ[6] ಸುಷಮೆ ಯೆಂಬ ನಾಲ್ಕನೆಯ ಕಾಲದೊಳ್ ಶ್ರುತತೀರ್ಥ ಪ್ರಭಾವನೆಯಿಂ ಪ್ರಥಮ ತೀರ್ಥೇಶ್ವರ ನತೀರ್ಥ ಸಂತಾನಕಾಲಂ ಪಂಚಾಶಲ್ಲಕ್ಷ ಕೋಟಿ ಸಾಗರೋಪಮಿತಮತಿಕ್ರಾಂತಮಾಗೆ ತತ್ಕಾಲದೊಳ್ ಜ್ಯೇಷ್ಠಮಾಸದಮಾವಾಸ್ಯೆಯೊಳ್ ರೋಹಿಣೀನಕ್ಷತ್ರಮಾಗೆ ಬೆಳಗಪ್ಪ

1 ಪಿ (ಚಜ) 2 ಮ (ಕಗಚಜ)...ಮು (ಟ) 3 ಡವಂ (ಕಗಚಜ) 4 ಮೆ (ಗಜ) 5 ಯುಂ (ಕಚಜ) 6 ಮೆ (ಗಜ)

ಜಾವದೊಳ್ ವಿಜಯವಿಮಾನದಿಂ ವಿಜಯಸೇನಾದೇವಿಯ ಗರ್ಭಕ್ಕೆ ವಿಮಲವಾಹನ ಚರಾಹಮಿಂದ್ರಂ ಸೌಧರ್ಮೇಂದ್ರ ಸಂಪಾದಿತ ಸ್ವರ್ಗಾವತರಣ ಮಹಾಕಲ್ಯಾಣ ಪೂಜಾಪೂರ್ವಕಮವತರಿಸಿ ಗರ್ಭಾಂಬುಜಾಕರದೊಳಮೃತಕಿರಣಂ ನೆಲಸುವಂತೆ ಗರ್ಭಸರೋರುಹದೊಳ್ ಷಟ್ಚರಣಂ ನೆಲಸುವಂತೆ ನೆಲಸಿ ಮಹೋತ್ಸವದಿಂ ಪ್ರತಿದಿನಂ ಪ್ರವರ್ಧಮಾನಮಾಗೆ

ಲಲಿತ ವಳಿತ್ರಯಂ ಕಿಡದೆ ಬೆಳ್ಪು[1]ಮುಖಾಂಬುಜ[1]ದೊಳ್ ಪೊದಟ್ದಿ ಪ
ಜ್ವಳಿಸದೆ ತೆಳ್ವಸಿಱ್ ಬಳೆದು ಬೀಗದೆ ಕರ್ಪು ಕುಚಾಗ್ರದೊಳ್ ಮನಂ
ಗೊಳಿಸದೆ ಮುನ್ನಿನಂತೆಸೆಯೆ ಭಾವಿಸಿ ನೋಟ್ಪಿ ಜನಕ್ಕೆ ವಿಸ್ಮಯಂ
ಬಳೆದಿರೆ ಗರ್ಭದೊಳ್ ಬಳೆದನರ್ಭಕನುತ್ಪಲಪತ್ರನೇತ್ರೆಯಾ ೧೬

ವದನಸರೋಜಸೌರಭದೆ ಸುಂದರರೂಪದೆ ಮಂಜುಕಂಠನಾ
ದದೆ ದಶನಚ್ಛದಾಮೃತದೆ ಪುಟ್ಟುವಿನಂ ಚತುರಿಂದ್ರಿಯಕ್ಕೆ ಸ
ಮ್ಮದಮುಱಿದಂತೆ ಮಾಣ್ದು ಜಿತಶತ್ರು[2]ನೃಪಂ[2] ನಿಜಕಾಂತೆಗುಂಟುಮಾ
ಡದೆ ಗುರುಗರ್ಭಪೀಡೆಯನದೇನವಱಿಂದಮೆ ತೃಪ್ತನಾದನೋ ೧೭

ಅಂತಾ ನರೇಂದ್ರನಹಮಿಂದ್ರನಂತಪಗತಸಪ್ರವಿಚಾರಸುಖನಾಗೆ

ಪರಮೇಶ್ವರನಂ ತ್ರಿಜಗ
ದ್ಗುರುವಂ ನೆಗಟ್ದಜಿತನಾಥನಂ ತನ್ನ ತನೂ
ದರದೊಳ್ ತಾಳ್ದಿದ ಪೆಂಪ
ಚ್ಚರಿಯೆನಿಸಿದುದಾ ಸುರಾಂಗನಾಭ್ಯರ್ಚಿತೆಯಾ ೧೮

ಆ ಸತಿಯ ಶುದ್ಧಗರ್ಭಾ
ವಾಸದೊಳುತ್ತಪ್ತಕನಕರುಚಿ ಸೊಗಯಿಸಿದಂ
ಭಾಸುರಶುದ್ಧಸ್ಫಟಿಕಾ
ಭಾಸದೊಳುಜ್ವಲಿಸಿ ಬೆಳೆವ ಮಣಿದೀಪದವೋಲ್ ೧೯

---

1 ಸುಖಾಂಬುಜ (ಅ) ಮುಖಾಬ್ಜ (ಬ) 2 [illegible] (ಅ) [illegible] (ಬ)

ಉದರದೊಳಿರ್ದ ತನೂಜನ
ವದನೇಂದುದ್ಯುತಿಯೆ ಮಾಡೆ ಲಾವಣ್ಯಸಮು
ದ್ರದ ಪೆರ್ಚಿನರಸಿ ಲಾವ
ಣ್ಯದ ಪುಣ್ಯದ ಪರಮುಪದಮನೇನೆಯ್ದಿದಳೋ ೨೦

ಆ ಧವಳೇಕ್ಷಣೆಗೆನಸುಂ
ಬಾಧೆಯನಾಗಿ[1]ಸನೆ[1] ನೆಲಸಿ ಗರ್ಭದೊಳವ್ಯಾ
ಬಾಧಂ ಮತಿಶ್ರುತಾವಧಿ
ಬೋಧಂ ತನ್ನೊಡನೆ ಪುಟ್ಟೆ ಪುಟ್ಟಿದ ದೇವಂ ೨೧

ಆಗಳಾ ಪರಮೇಶ್ವರಿಗೆ ಜಿನಸ್ನಾನ ಪವಿತ್ರೀಕೃತೋತ್ತಮಾಂಗಿಗೆ ಜಿನೋತ್ತಮ ಸ್ತವನದೊಳಮಾ ಗುಣದಂಕಕಾರ್ತಿಗೆ ಗುಣವ್ರತ ಶಿಕ್ಷಾವ್ರತಂಗಳೊಳಮಾ ಮಹಾ ಪತಿವ್ರತೆಗೆ ಪಂಚಾಣುವ್ರತಂಗಳೊಳಮಾ ದಾನಚಿಂತಾಮಣಿಗಾಹಾರಾಭಯ ಭೈಷಜ್ಯಶಾಸ್ತ್ರದಾನದೊಳಮಾ ಶೀಲಾಲಂಕಾರೆಗೆ ವಿಶಾಲ ಶೀಲಲಕ್ಷಣದೊಳಮಾ [2]ಕವಿಚ[2]ಕ್ರವರ್ತಿಪೂಜಿತೆಗೈಂದ್ರಧ್ವಜಕಲ್ಪವೃಕ್ಷಾದಿ ಜಿನಮಹಾಪೂಜೆಗಳೊಳಮಾ ಭದ್ರ ಮನೋವೃ[3]ತ್ತಿ[3]ಗೆ ಸರ್ವತೋಭದ್ರಸಿಂಹವಿಕ್ರೀಡಿತಾದಿ ಮಹೋಪವಾಸಂಗಳೊಳಮಾ ಕವಿವರ ಕಾಮಧೇನುಗೆ ನಿರಂತರ ದ್ರವ್ಯವಿತರಣದೊಳಮಾ ಭವ್ಯಮನೋರಥ ಜನ್ಮ ಭೂಮಿಗೆ ಸರ್ವ ಭವ್ಯಜನವಾತ್ಸಲ್ಯದೊಳಮಾ ಬುಧಜನಾಧಾರಭೂತೆಗಸಿಧಾರಾವ್ರತ ದೊಳಮಾ ದರ್ಶನವಿಶುದ್ಧೆಗೆ ಪರಮ ಮುನಿಜನ ಶ್ರೀಪಾದದರ್ಶನದೊಳಮಾ ಮಹಾಸತಿಗೆ ಮಹಾಭಿಷೇಕದೊಳಮಾ ಜಿನಧರ್ಮಧ್ವಜ ನೀಳಾಯಮಾನಿಗೆ ಮಹಾಧ್ವಜೋದ್ಧರಣದೊಳಮಾ ಸತ್ಯಶೌಚಾಚಾರಕುಲವಸತಿಗೆ ಜಿನವಸತಿಕರಣ ದೊಳಮಾ ರತ್ನತ್ರಯಾಲಂಕೃತೆಗೆ ಅಪ್ರತಿಮ ರತ್ನ ಪ್ರತಿಮಾನಿರ್ಮಾಪಣದೊಳಮಾ ಮಹಾನುಭಾವೆಗೆ [4]ದಶ[4]ಗುಣ ಧರ್ಮಪ್ರಭಾವನೆಯೊಳಮಾ ಧರ್ಮನಂದನ ಕಲ್ಪಲತಿ ಕೆಗೆ ಧರ್ಮಕಥಾಶ್ರವಣದೊಳಮಾ ಚಂಚಚ್ಚಂಪಕದಾಮಾಭಿರಾಮವರ್ಣೆಗೆ ಚಾತು ರ್ವರ್ಣ ವೈಯಾವೃತ್ಯಕರಣದೊಳಮಾ ಸಮ್ಯಕ್ತ್ವಧವಳೇಕ್ಷಣೆಗೆ ಜಿನಧವಳ ಮಂಗಳ ಗೇಯಂಗಳೊಳಮಾ ಜಗತ್ಪವಿತ್ರ ಚಾರಿತ್ರ ಭೂಷಣೆಗಭಯಘೋಷಣೆಯೊಳಮಾ ತೀರ್ಥಕರಜನನಿಗೆ ತೀರ್ಥಾವಲೋಕನ ಕುತೂಹಲದೊಳಂ ಗರ್ಭದೋಹಳಂ ನೆಗೞ್ತ

1 ಸದೆ (ಗಚಜ) 2 ಚ (ಕ) 3 ತಿ (ಗಚಜ) 4 ದಶಕುಶಲ (ಕಟ)

ಕೃತಭವ್ಯೋತ್ಸವ ಮಾಘ ಶುದ್ಧ ದಶಮಿಾ ಪುಣ್ಯಾಹಯುಕ್ತಂ [1]ಪ್ರಜಾ[1]
ಪತಿಯೋಗಂ [2]ಬೆ[2]ರೆದಂದು ರೋಹಿಣಿಯೊಳಿಂದ್ರಾನಂದತೂರ್ಯಂ ಸರಿ
ತ್ಪ್ರತಿ ಘೋಷಕ್ಕೆಣೆಯಾಗೆ ಘೋರ್ಗರೆಯೆ ಸಂದಿಕ್ಷ್ವಾಕುವಂಶೋದಯೋ
ನ್ನತ ಶೈಲಾಗ್ರದೊಳಾದುದಂದಜಿತತೀರ್ಥೇಶಾಬ್ಜ ಮಿತ್ರೋದಯಂ ೨೨

ಇದು ಸಕಲ ಮುನೀಂದ್ರ ವೃಂದ ವೃಂದಾರಕ ಶ್ರೀಮದಜಿತಸೇನಭಟ್ಟಾರಕ ಶ್ರೀಪಾದಪದ್ಮಪ್ರಸಾದಾಸಾದಿತ ರತ್ನತ್ರಯಾಲಂಕೃತ ಶ್ರೀಮ[3]ದಭಿನವ[3] ಚಕ್ರವರ್ತಿ ಕವಿರತ್ನನಿರ್ಮಿತ ಶ್ರೀದಾನಚಿಂತಾಮಣಿನಿರ್ಮಾಪಿತ ಶ್ರೀಮದಜಿತತೀರ್ಥ[4]ಕರ ಪುರಾಣ ತಿಲಕದೊಳ್[4]

## ಕುಮಾರೋದಯ ವರ್ಣನಂ

## ತೃತೀಯಾಶ್ವಾಸಂ

1 ಪ್ರತಿ (ಗಜ) 2 ಬ (ಕಗಚಜ) 3 ದುಭಯ (ಕಟ) 4 ಕರ (ಕ)

## ಚತುರ್ಥಾಶ್ವಾಸಂ

ಶ್ರೀಕಾಂತೆಗಮುಪವರ್ಗ
ಶ್ರೀಕಾಂತೆಗಮಧಿಪನಾಗಲುದಯಿಸಿದಂ ಭ
ದ್ರಾಕಾರಂ ಜಿನಧರ್ಮ
ಪ್ರಾಕಾರಂ ಪುಣ್ಯಚರಿತನಪಗತ ದುರಿತಂ ೧

ಭಾಸುರ ಸುವರ್ಣವರ್ಣಂ
ದ್ವಾಸಪ್ತತಿ ಲಕ್ಷವರ್ಷ ಪರಮಾಯುವಘ
ತ್ರಾಸಪಟು ನವಶತಾರ್ಧಶ
ರಾಸನಮಿತದೇಹನಜಿತನಪಗತ [1]ಮೋಹಂ[1] ೨

ಪುಟ್ಟೆ ಭಯಮಘವಿರೋಧಿಗೆ
ಪುಟ್ಟೆ ಜನಾನಂದಮಜಿತನಾಥಂ ದೇವಂ
ಪುಟ್ಟಲೊಡಮೊಡನೆ ಬಂದೊಡ
ವುಟ್ಟಿದವು ಮತಿಶ್ರುತಾವಧಿಜ್ಞಾನಂಗಳ್ ೩

ಅಂಬುಜ[2]ಸಖ[2] ವರ [3]ಕರಕ[3]ನ
ಕಾಂಬುಜಮುಂ ಪ್ರಥಮ ದಿಕ್ಸಮಿಾಪಾಹಿಮುಕ್ಕ
ದ್ಬಿಂಬಮುನಂದನುಕರಿಸಿ ನಿ
ಜಾಂಬಿಕೆಯಭ್ಯರ್ಣದೊಳ್ ಜಿನಾರ್ಭಕನೆಸೆದಂ ೪

ಪರಮೇಶ್ವರಿ [4]ನಿಜ[4]ಸುತಮುಖ
ನಿರೀಕ್ಷಣದೊಳೊಡನೊಗೆದಗೆ ಪುಳಕಂಗಳಿನೇಂ
ಕರಮೆಸೆದಳೊ ಸುಗ್ಗಿಯೊಳಂ
ಕುರಿಸಿದುದೊಂದಭಿನವಾಮ್ರಲತಿಕಾಕೃತಿವೋಲ್ ೫

---

1 ದುರಿತಂ (ಗಚಜ)   2 ಸಖ ಸಖ (ಗ)   3 ತಾ (ಕ)   4 ಜಿನ (ಗಜ)

ಬಡವನಡೊಂದಕ್ಷಯನಿಧಿ
ವಡೆದಂತಾನಂದಹೇತುವಂ ನಂದನನಂ
ಪಡೆದು ನೃಪಂ ನೊಸಲೊಳ್ ಕ
ಣ್ಬಡೆದಂತಮರೇಂದ್ರಪದವಿವಡೆದಂತಿರ್ದಂ ೬

ಲಲಿತರಗಳೆ ॥ ಆ ಕುಮಾರೋದಯದೊಳಾಗಳಾನಂದದಿಂ
ಲೋಕಮೋದಿ[1]ದುದು[1] ನಾನಾ ವಿಧಚ್ಛಂದದಿಂ
ಪಱಿ ಪಲವುಮೊಸೆದುವೆಂಟುಂ ದಿಗಂತಂಬರಂ
ತುಱುಗಿ ಕಟ್ಟಿದ ಗುಡಿಗಳಿಂದೆಸೆದುದಂಬರಂ
ರಾಜಭವನದೊಳೆಸೆವ ಮಣಿತೋರಣಂಗಳಿಂ
ರಾಜಿಸುವುವೆತ್ತಿದಾತಪ ವಾರಣಂಗಳಿಂ
ಬೀದಿಬೀದಿಯೊಳೆಲ್ಲಮೋಕುಳಿ[?]ಯ ಗಿಂಡಿಯುಂ
[2]ಆದ[2]ಮೊಪ್ಪಿದುದು ಪಲತೆಱದ ಪಾಷಂಡಿಯುಂ
ವಾರನಾರೀಜನದ ಸೊಗಯಿಸುವ ನೃತ್ಯದಿಂ
ಚಾರಣಗಣಂಗಳೋದುವ ಕಂದವೃತ್ತದಿಂ
ರಂಗವಲ್ಲಿಗಳೆ ಬಿಡುಮುತ್ತುಗಳನಿಂಬಾಗೆ
ಮಂಗಳರವಂ ಪರೆದು ದಿಗ್ವಳಯಮಂ ತಾಗೆ
ಶುದ್ಧಾಂತಕಾಂತೆಯರ್ ನೆರೆದೊಸಗೆಯಂ ಮಾಡೆ
ವೃದ್ಧಕಂಚುಕಿಗಳಂದವರೊಡನೆ ನಲಿದಾಡೆ
ಸಂತಸದೆ ನೈಮಱಿ[3]ದು ಕೂಡೆ ಕುಣಿವಜ್ಜರಿಂ
ಅಂತವರ ಕಾಲೆಡೆಗಳೊಳ್ ನುಗುಳ್ವ ಗುಜ್ಜರಿಂ
ಆನೆಯುಂ ಕುದುರೆಯುಂ ಕುಡೆ ಪಡೆವ ಮಂದಿಯಿಂ
ಭೂನಾಯಕಂ ಬಿಡಿಸೆ ಬಿಟ್ಟ ಬಹುಬಂದಿಯಿಂ
ಪಲವಗ್ರಹಾರಮಂ ಕುಡೆ ಪಡೆವ ಪಾರ್ವರಿಂ
ಪಲತೆಱದ ವಸ್ತುವಂ ನೃಪನೀಯೆ ಪಾರ್ವರಿಂ
ಬೀಸೆ ಚಂಚತ್ ಕನಕ ಚಾಮರಶ್ರೇಣಿಗಳ್
ಸೂಸೆ ಸೇಸೆಗಳನಬಲೆಯರಮ್ಮೃತಪಾಣಿಗಳ್
ಕಳ[3]ಸದಿಂ ಕನ್ನಡಿಯಿನೆಸೆವ[3] ಭೃಂಗಾರದಿಂ

1 ದು ([illegible]) 2 ನಾ ([illegible]) ಆದ ([illegible]) 3 ಸ ([illegible])

ಫಲಕುಸುಮಹಸ್ತೆಯರ ಮಿಗುವ ಶೃಂಗಾರದಿಂ
ಕಿಱುದೊಡೆಯ ಕಡು[1]ನು[1]ಣ್ಪು ಕಣ್ಗಳೊಳ್ ನೆರೆಪೊಳೆಯೆ
ಕಿಱುಮೊಲೆಯ ಚೆಲ್ವು ಪೊಂಗೊಡದ ಚೆಲ್ವಂ ತಳೆಯೆ
ನಡುನಡುಗೆ ಬಿಗಿದೊಗೆದ ಪೆರ್ಮೊಲೆಯ ಬಿಣ್ಪಿನಿಂ
[2]ಕಡೆದು[2] ಮಾಡಿದುವೆನಿಪ [3]ಪೊಱವಾಱದಿಣ್ಪಿನಿಂ[3]
ಕಟ್ಟುಱುಪೆಯೋಳಿಯಂತೆಸೆವಸಿಯ ಬಾಸೆಯಿಂ
ದಿಟ್ಟಿಗೆ ನಯಂಬಡೆದ ಪೊಚ್ಚ ಪೊಸದೇಸೆಯಿಂ
ನಳಿತೋಳ ನಗೆಮೊಗದ ಬೆಳರ್ವಾಯ ಸುಲಿಪಲ್ಲ
ಪೊಳೆವ ಕಣ್ಗಳ ಮಿಳಿರ್ವ ಕುರುಳ ಕರ್ಬಿನ ಬಿಲ್ಲ
ದೊರೆಯೆನಿಪ ಪುರ್ವಿನಿಂ [4]ನಗೆಮೊಗದ ಚೆ[4]ಲ್ವೆಸೆಯೆ
ಕರಮೆಸೆದರಬಲೆಯರ್ ನೋಟಕರ ಮನಮೊಸೆಯೆ
ಮುಡಿಬಿಟ್ಟು ಸೋಗೆನವಿಲಂತೆ ಸೊಗಯಿಸಿ ತೋಱಿ
ಕಡೆಗಣ್ಣ ಬೆಳ್ಪು ನೋಟಕರ್ಗೆ ಚೆಲ್ವಂ ಬೀಱಿ
ತೆಲ್ಲಂಟಿದರ್ಪ ಸಾಮಂತಸಂದೋಹದಿಂ
ದಲ್ಲಿಗಲ್ಲಿಗೆ ನೆಗೞುತಿರ್ಪ ಪುಣ್ಯಾಹದಿಂ
ಪರಸುವ ಧರಾಮರರ ಪರಕೆಯ ರವಂಗಳಿಂ
ನೆರೆದ ಬೂತುಗಳ ಕೋಳಾಹಳರವಂಗಳಿಂ
ನೆರೆದೊಡನೆ ಮಂಗಳಂಬಾಡೆ ಗಾಯಕಗಣಂ
ಕರಮೆ ಕಣ್ಗೆಸೆದುದು ನರೇಂದ್ರ ಭವನಾಂಗಣಂ ೭

ಅನ್ನೆಗಂ ದ್ವಿತೀಯ ತೀರ್ಥಕರ ದಿನಕರೋದಯನಿವೇದಕಮಪ್ಪ ನಿಜಾಸನಕಂಪದಿಂ ಸಮುತ್ಪನ್ನಾವಧಿಬೋಧವಿಲೋಚನಂ ಸಹಸ್ರಲೋಚನನಱಿದು ಶಂಖನಾದದಿಂ ಭವನವಾಸಿಗರುಂ ಭೇರೀರವದಿಂ ವಾನವ್ಯಂತರಿಗರುಂ [5]ಸಿಂಹನಿಸ್ವ[5]ನದಿಂ ಜ್ಯೋತಿಷ್ಕರುಂ ಘಂಟಾಟಂಕಾರದಿಂ ಕಲ್ಪಾಮರರುಮಱಿದು ತಂತಮ್ಮಾಸನಂಗಳಿಂದಿೞಿದು ತೀರ್ಥಕರಂಗೆ ಕರಂಗಳಂ ಮುಗಿ[6]ಯೆ[6] ಸೌಧರ್ಮೇಂದ್ರನೀಶಾ[7]ನೇಂದ್ರ[7] ಸನತ್ಕುಮಾರ ಮಾಹೇಂದ್ರ ಬ್ರಹ್ಮಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಆರಣಾಚ್ಯುತರೆಂಬ ಕಲ್ಪೇಂದ್ರರುಂ ಸಾಮಾನಿಕತ್ರಾಯಸ್ತ್ರಿಂಶ ಪಾರಿಷದಾತ್ಮರಕ್ಷ ಲೋಕಪಾಲಾನೀಕ ಪ್ರಕೀರ್ಣಕಾಭಿಯೋಗ್ಯ ಕಿಲ್ಬಿಷಿಕ ಪರಿವಾರ

1 ನ (ಗಜ) 2 ಕಡಿಪು (ಗಜ) 3 ಪೊಱ (ಕ) ಪೊಱವಾಱದಿಣ್ಪಣಂ (ತ) 4 ಚೆ (ಕ) 5 ಸಿಂಹಾಸ (ಗ) 6 ಧು (ಗಚಜ) 7 ನ (ಕ)

ವೃತ್ತ್ರರುಂ ಗಜ ವೃಷಭಾಶ್ವ ರಥ ಗಂಧರ್ವ ನರ್ತಕಿ ಪದಾತಿಲಕ್ಷಣ ಸಪ್ತಾನೀಕ ಸಮನ್ವಿತನುಮಾಗಿ [1]ಚ[1]ಮರ ವೈರೋಚನರೆಂಬರಸುಕುಮಾರರುಂ ಧರಣೇಂದ್ರನುಂ ಭೂತಾನಂದನುಮೆಂಬ ನಾಗಕುಮಾರರುಂ ವೇಣುದೇವನುಂ ವೇಣುಧಾರಿಯುಮೆಂಬ ಸುಪರ್ಣಕುಮಾರರುಂ ಪೂರ್ಣನುಂ ವಶಿಷ್ಠನುಮೆಂಬ ದ್ವೀಪಕುಮಾರರುಂ ಜಲ ಪ್ರಭಂಜನನುಂ ಜಲಕಾಂತನುಮೆಂಬುದಧಿಕುಮಾರರುಂ ಘೋಷನುಂ ಮಹಾ ಘೋಷನುಮೆಂಬ ಸ್ತನಿತಕುಮಾರರುಂ ಹರಿಷೇಣನುಂ ಹರಿ[2]ತಕುಮಾರ[2]ನುಮೆಂಬ ವಿದ್ಯುತ್ಕುಮಾರರುಮಮಿತಗತಿಯುಮಮಿತವಾಹನುಮೆಂಬ ದಿಕ್ಕುಮಾರರುಂ ಅಗ್ನಿ ಶಿಖನುಮಗ್ನಿವಾಹನನುಮೆಂಬಗ್ನಿ ಕುಮಾರರುಂ ವೈಳಂಬನುಂ ಪ್ರಭಂಜನನು ಮೆಂಬ ವಾತಕುಮಾರರುಂ ಕಿನ್ನರನುಂ ಕಿಂಪುರುಷನುಮೆಂಬ ಕಿನ್ನರರಾಜನುಂ ಸತ್ಪುರುಷನುಂ ಮಹಾಪುರುಷನುಮೆಂಬ ಕಿಂಪುರುಷಪತಿಗಳುಂ ಕಾಳನುಂ ಮಹಾ ಕಾಳನುಮೆಂಬ ಗರುಡಪರಿವೃಢರುಂ ಗೀತರತಿಯುಂ ಗೀತಯಶನುಮೆಂಬ ಗಂಧರ್ವಾ ಧೀಶರುಂ ಮಣಿಭದ್ರನುಂ ಪೂರ್ಣಭದ್ರನುಮೆಂಬ ಯಕ್ಷಾಗ್ರಣಿಗಳುಂ ಭೀಮನುಂ ಮಹಾಭೀಮನುಮೆಂಬ ರಾಕ್ಷಸನಾಯಕರುಂ [3]ಸು[3]ರೂಪನುಂ ಪ್ರತಿರೂಪನುಮೆಂಬ ಭೂತನಾಥರುಂ ಕಾಳನುಂ ಮಹಾಕಾಳನುಮೆಂಬ ಪಿಶಾಚಪ್ರಭುಗಳುಂ ಚಂದ್ರಾದಿತ್ಯ ಗ್ರಹನಕ್ಷತ್ರ ಪ್ರಕೀರ್ಣಕ ತಾರಕೆಗಳೆಂಬ ಬಹುವಿಧ ಜ್ಯೋತಿರ್ವಾಸಿಗಳುಂ ವಿಜಯಾರ್ಧ ಪರ್ವತದ ದಕ್ಷಿಣೋತ್ತರ ಶ್ರೇಣಿಗಳನಾಳ್ವುಭಯ ವಿದ್ಯಾಧರೇಂದ್ರರುಂ ಬೆರಸು ಭಗವದಜಿತಜಿನಜನ್ಮಾಭಿಷೇಕ ಕಲ್ಯಾಣಪೂಜೆಯಂ ಮಾಡಲೆಂದಿಂದ್ರಾಣೀಸಮೇತಂ ಐರಾವಣ ಮಹಾವಾರಣಂ ಸ್ಕಂಧಾರೂಢನಂದು ಚತುರ್ನಿಕಾಯಾಮರ ಪ್ರಮುಖ ನಯೋ[4]ಧ್ಯಾ[4]ಭಿಮುಖನಾಗಿ

ದಿವಿಜೇಂದ್ರಾನಲ ಕಾಲ ನೈಋತಿ ಸರಿನ್ನಾಥಾನಿಲಾರ್ಥೇಶ್ವರೇ
ಶ ವಿರಿಂಚರ್ ನಿಜವಾಹನಾಯುಧ ವಧೂ ನಾನಾ ಪ್ರಪಂಚಾಶರೀ
ರ ವಿಳಾಸೋಜ್ವಲಮೂರ್ತಿಗಳ್ ತಳರ್ವುದುಂ ತಂತಮ್ಮ ದಿಗ್ಭಾಗದಿಂ
ನವಖಂಡಂ ಬರೆದಂತುಟಾದುದು ವಿಯಚ್ಚಕ್ರಂ ಮರುಚ್ಚಕ್ರದಿಂ ೮

ಆ ತ್ರಿದಶಪತಿಯ ದಶ ಶತ
ನೇತ್ರಂಗಳೊಳೆಸೆವ ಧವಳ ನೀಳಾರುಣವ
ರ್ಣತ್ರಯರುಚಿಗಳ್ ಪಸರಿಸಿ
ಚಿತ್ರಿಸಿದಂತಾಯ್ತು ಗಗನಮಂಡಲಮೆಲ್ಲಂ ೯

---

1 ಸ (ಗಚಜ) 2 ಕಾಂತ (ಕಟ) 3 ಸ (ಗಜ) 4 [illegible] (ಜ)

ಅಂತು ಗಗನಮಂಡಲಮನಾಖಂಡಲನಲಂಕರಿಸೆ

ಸ್ಫುರಿತ ಧವಳಾತಪತ್ರೋ
ತ್ಕರ ಸಿತ ಚಮರೀರುಹೋತ್ಕರಂಗಳ ಪೊಳೆಪಿಂ
ಕರಮೆಸೆದುದು [1]ಸುರವಾಹಿನಿ[1]
ಸುರವಾಹಿನಿಯಂತೆ ಬರುತುಮಂಬರತಲದೊಳ್ ೧೦

ಸುರಲೋಕಮುಮಹಿಲೋಕಮು
ಮೆರಡುಂ ಪಾಟಿಯಾಗಿ ಬಂದುವೆನೆ ದಿವಿಜಘಣಾ
ಧರಲೋಕದೆ ತೊಟ್ಟನೆ ಕೊಳೆ
ನರಲೋಕಂ [2]ಶೀಪ[2] ಬಂದನಂದಮರೇಂದ್ರಂ ೧೧

ತ್ರಿದಶಸ್ತ್ರೀಜನನೃತ್ಯಮುಂ ದಿವಿಜತೂರ್ಯಾರಾವಮುಂ ಕಿನ್ನರೀ
ಮೃದುಗೀತಧ್ವನಿಯುಂ ಮನಂಗೊಳಿಸೆ ಬಂದಾನಮ್ರನಾಗಿರ್ದುದುಂ
ಪದಪದ್ಮಕ್ಕೆ ಜಿತಂಗುಪಾದ್ಯ ಜಿನತೀರ್ಥೇಶಂಗೆ ಪಾದ್ಯಂಬೊಲೊ
ಪ್ಪಿದುದಾದ್ಯಾಮರರಾಜಮೌಳಿಮಣಿಗುಚ್ಛಾಚ್ಛೋಚ್ಚರೋಚಿ[3]ರ್ಜಲಂ[3] ೧೨

ಅಂತೆಱಗಿ ಪೊಡೆವಟ್ಟನೇಕ ಭವದುರು [4]ಭಗವದರ್ಹ[4]ದವಲೋಕನ ಸಮಯ ಸಮುದಂಚದ್ರೋಮಾಂಚ ಕಂಚುಕಿತ ಗಾತ್ರನುಮನವರತ ವಿಗಳದಾನಂದಾಶ್ರುಜಲ ಧಾರಾಪೂರ ಪರಿಪ್ಲಾವಿತನೇತ್ರನುಮಾಗಿ ಸಹಸ್ರನೇತ್ರಂ ತೀರ್ಥಕರ ಗುರುಗಳಂ ತ್ರಿಃಪ್ರದಕ್ಷಿಣಂಗೈದು ಪೊಡೆವಟ್ಟವರ್ಗೆ ಮಾಯಾನಿದ್ರೆಯಂ ಮಾಡಿ ಮಾಯಾಶಿಶುವಂ ಜಿನಜನನಿಯ ಮುಂದಿಕ್ಕಿ ದೇವನಂ ತರ್ಪುದೆನೆ ಶಚೀಮಹಾದೇವಿ ಸೂತಿಕಾಗೃಹಮಂ ಪೊಕ್ಕು ಮಾಯಾಶಿಶುವಂ ಮುಂದಿಕ್ಕಿ

ಸುರುಚಿರ ವಕ್ತ್ರಚಂದ್ರರುಚಿಯಿಂ ಶುಭಲಕ್ಷಣ ಲಕ್ಷಿತಾಂಗ ಸುಂ
ದರತೆಯಿನೊಪ್ಪೆ ಕಣ್ಣ [5]ಪಸ[5]ವೋಡುವಿನಂ ನಡೆನೋಡಿ ಪಲ್ಲವ
ಸ್ಫುರಿತ ಸಮುಲ್ಲಸತ್ಕರತಳಂಗಳಿನಟ್ಟಿಯೊಳೆತ್ತಿ ತಂದಳಾ
ದರದೆ ಪುಲೋಮಪುತ್ರಿ ಪರಮೇಶ್ವರನಂ ಜಿತಶತ್ರುಪುತ್ರನಂ ೧೩

---

1 ಬಿಗೆ ಚೆಲ್ವಿಂ (ಗಜ) 2 ಶೀಬಿ (ಗಜ) 3 ಜ್ವಲಂ (ಗಜ) 4 ರ್ಹ (ಚ) 5 ಕಸ (ಕ)

ಅಂತಷ್ಟಮಂಗಳಧಾರಿಣಿಯರಪ್ಪ ದೇವಾಂಗನೆಯರ್ಕಳ್ವೆರಸು [1]ತಂ[1]ದಿಂದ್ರಾಣಿ ಸೌಧರ್ಮೇಂದ್ರನ ಕೆಯ್ಯೊಳ್ ಸಕಲ ಜಗದಮೂಲ್ಯರತ್ನಮಂ ಕಯ್ಯೆಡೆಗುಡುವಂತೆ ಕುಡುವುದುಂ ಮತ್ತಮೆಱಗಿ ಪೊಡೆವಟ್ಟು ಪುನಃಪುನರಾಳೋಕನಂಗೆಯ್ದು

ಎತ್ತಿ ಜಿನಶಿಶುವನಾಗಳ್
ನೆತ್ತಿಯ ಮೇಲಿಟ್ಟು ನೊಸಲ ಮೇಲಿಟ್ಟು ಸುರೇಂ
ದ್ರೋತ್ತಮನಿದಿರೊಳ್ ತಂದಿ
ಟ್ಟಿತ್ತಂ ಮನದಿಂದಗಲ್ಚಲಾಱದೆ ಬೞಿಯಂ ೧೪

ಅನಿಮಿಷ ನಯನದೆ ನೋೞ್ಪುದು
ಮನಿಮಿಷಪತಿ ಲೀಲೆಯಿಂದರಲ್ಚಿದುದಾಗಳ್
ಜಿನಪತಿವಕ್ತ್ರೇಂದು ಸಹ
ಸ್ರನೇತ್ರಲೋಚನ ಸಹಸ್ರಕುವಲಯವನಮಂ ೧೫

ಅಂತು ಕಣ್ಣಾಱೆ ನೋಡಿ ಮನನಾಱೆ ಪೊಗ[2]ೞ[2]

ಸಂದಮರಲೋಕಸುಖಮುದ
ಱೊಂದು ಶತಾಂಶಕ್ಕೆ ವಾರದೆಂಬಿನೆಗಂ ಸಂ
ಕ್ರಂದನನ ಮನಕ್ಕಧಿಕಾ
ನಂದಮನಿತ್ತುದು ಜಿನಾಂಗ ಸಂಸ್ಪರ್ಶಸುಖಂ ೧೬

ಅಂತು ಸಹಸ್ರನಯನಂ ಸುಖರಸನಿಮೀಲಿತ ನಯನನಾಗೆ

ಪೌಲೋಮೀ ವಲ್ಲಭನ ವಿ
ಶಾಲೋರಸ್ಥಳ ಮಹೋದಯಾಚಲದೊಳ್ ತೇ
ಜೋಲಂಕೃತ ತನುಬಿಂಬಂ
ಬಾಲಾರ್ಕನ ಲೀಲೆಯಿಂದೆ ಮುಂದೆಸೆದಿರ್ದಂ ೧೭

1 ತ (ಗಜ) 2 ೞಿ (ಗಚಜ)

ಅಗಳ್

ಜಿನಮುಖ ಕಮಳವಿಲೋಕನ
ಜನಿತೋತ್ಸವ ದಿವಿಜಮುಖ ಗುಹಾಮುಖದಿಂ ಮಾ
ರ್ದನಿಯೆನೆ ಪೊಣ್ಮಿಮಟ್ಟುವು ನಂ
ದನಂದ ಜಯಜಯರವಂಗಳತಿಮಧುರಂಗಳ್ ೧೮

ಜಿನವೃಷಭಂ ಮಗಂ ವೃಷಭನಂತವರ್ಗಾದನೆನಿಪ್ಪ ಪುಣ್ಯಭಾ
ಜನರವರಲ್ತೆ ನಾಭಿನೃಪನುಂ ಮರುದೇವಿಯುಮಾನತಾಮರೇಂ
[1]ದ್ರನನಜಿತೇಂದ್ರನಂ[1] ತನಯನಂ ಪಡೆದಿರ್ದವರಲ್ತೆ ಸಂದ ಪೆಂ
ಪಿನ ಜಿತಶತ್ರುವುಂ ವಿಜಯಸೇನೆಯುಮಿರ್ವರೆ ಪುಣ್ಯಭಾಜನರ್ ೧೯

ಎಂದು ದಿವಿಜರೆಲ್ಲಂ ಪೊಗಟಿ ದಿವಿಜೇಂದ್ರನಜಿತೇಂದ್ರನಂ ನಿಜಗಜೇಂದ್ರ ಬಂಧುರ ಸ್ಕಂಧಾರೂಢಂ ಮಾಡಿಯಮರೇಂದ್ರಗಿರೀಂದ್ರಕ್ಕಭಿಮುಖನಾಗೆ

ನವಕನಕ ಮಂಡನಾಯೋ
ಗವಿರಾಜಿತಮಿಟಿಸೆ ಮಣಿಗಣಾಲಂಕೃತಮಾ
ದಿವಿಜಗಜಮಚಿರ ರುಚಿಯುತ
ಧವಳಾ[2]ಭ್ರಮು[2] ಮಧುಪರೀತ ರಶ್ಮಿದ್ಯುತಿಯಿಂ ೨೦

ಅಂತಪಹಸಿತ ಕೈಲಾಸಶೈಲ ಭಾಸುರ ಲೀಲಾವಿಲಾಸನನುಂ ಶೇಷೋರಗ ನಿರ್ವಿಶೇಷ ವೃತ್ತಾಯತಕರನುಂ ಪುಷ್ಕರಾನುಕಾರಿ ಪುಷ್ಕರನುಂ ಮೃದು ಮೃಣಾಲ ಕೋಮಲ ಪಾಟಳ ದೀರ್ಘಾಂಗುಳಿಯುಂ ಅತ್ಯಂತ ಕಾಂತ ಸುಜಾಯುತ ಸುದಂತನು ಮುನ್ನತಾವನತಕುಂಭನುಂ ರಕ್ತಾಪಾಂಗಮಧುಪಿಂಗಳವಿಲೋಚನನುಂ ಸ್ನಿಗ್ಧ ಬಹಳ ದೀರ್ಘಕೇಶ ಸಮುಸದ್ಗತವ್ಯೂಢ ಮಸ್ತಕಪಿಂಡನುಂ ಚಂಚಚ್ಚಂಪಕಮಾಲಾಸಿ [3]ತೋಳುವು[3] (?)ಮತ್ಯುಗ್ರನುಂ ಸಮಗ್ರೋಗ್ರಪಲ್ಲವನುಂ ಪೃಥುಬಾಹಸ್ತಸಸಗದ ಪೀನಮಾಂಸ ಸ್ಪಕ್ಕೋಪಾಲಂಕೃತನುಂ ವಿಸ್ತೀರ್ಣನುಂ ಪರಿಪೂರ್ಣಗ್ರೀವನುಮತಿ ವಿಶಾಲೋರಸ್ಥಳನುಂ ಧನುರ್ವಂಶನುಂ ವಿಪುಲೋಪಚಿತಾಂಸನುಂ ಸಮಪಾರ್ಶ್ವನುಂ

1 ಪ್ರನ (ಕ) 2 ಭ್ರ (ಕಗಚಜ) ಭ್ರಂ (ಟ) 3 ತೋ (ಗಜ)

ಮಾಂಸಕಲಾ ಭೋ ೯ ಗ ನು ಂ ಪೀನೋಪಚಿತಮಾಂಸವಿಕ್ಷೋಭನುಮಜಕುಕ್ಷಿಯುಂ ವರಾಹಜಘನನುಂ ಸುವಿಭಕ್ತ ಗಾತ್ರಾಪರನುಮಸಂಕ್ಷಿಪ್ತ ವಾಯುಪ್ರವೇಶನುಂ ಪರಿಪೂರ್ಣದಿಕ್ಕೋಶನುಂ ಸಹಕಾರಪಲ್ಲವಾನುಕಾರಿ ಪೀನ[1]ಮೋ[1]ಹನನುಮದೀರ್ಘ ಸ್ನಿಗ್ಧ ಕೃಷ್ಣವಾಳಾನುಪೂರ್ವಸಕುಳಿಕಾಪರ್ಯಂತವಾಲಧಿಯುಮರ್ಧಚಂದ್ರಾಕಾರವಿಂಶತಿ ನಖನುಂ ಸುಪ್ರತಿಷ್ಠಿತತಳನುಂ ಸುಚ್ಛಾಯನುಂ ಸುರೂಪನುಂ ಶುಭಲಕ್ಷಣನುಂ ತ್ರಿಪ್ರಮಾಣ ಸಮಕಾಯನುಮತಿವಿಶುದ್ಧ ಭದ್ರಜಾತಿಯುಂ ಜಾತ್ಯಮಣಿಕನಕ ಮಂಡನಾಯೋಗಮಂಡಿತನುಂ ವಿಚಿತ್ರ ನಕ್ಷತ್ರಮಾಲಾಲಂಕೃತನುಂ ಸಮುದ್ರ ಘೋಷಗಂಭೀರ ಜಲಚರಧ್ವಾನ ವೀರದುಂದುಭಿಧ್ವನಿ ಮಧುರ ಮಹೋರ್ಜಿತ ಕಂಠಗರ್ಜಿತನುಂ ಪ್ರಲಂಬ ಕರ್ಣಚಾಮರನುಂ ಘಂಟಾಟಂಕಾರ ಬಧಿರಿತ ಭುವನಾಂತ ರಾಳನುಂ ಕರಕರಟ ಕರ್ಣಚೂ[2]ಚು[2]ಕ ವಿಲೋಚನ ತಾಲುರೋಮಕೂಪ ಕೋಪ ಪ್ರದೇಶ ಗಳಿತ ಬಹಳ ಸಪ್ತಚ್ಛದೈಳಾ ಸಹಕಾರ ಕರ್ಪೂರ ಮಳಯಜ ಸುರಭಿ ಪರಿಮಳ ಮದಜಳ ಪರಿಮಳ ವಿಳಿತಾಂಗಮಂಗಂ ಮಾಯಾಮಾನಸ ಮದಮಧುಕರ ನಿಕರ ಝುಂಕಾರರವ ಮುಖರಿತಾಖಿಲದಿಜ್ಮುಖನುಮೆನಿಸಿ

ಸುರಕರಿಗೆ ಮೊಗಂ ಮೂವ
ತ್ತಿರಡಾದುವೆ ಬೇಱಬೇಱ ಮೊಗದೊಳವೆಂಟೆಂ
ಟು ರದನಮೊಪ್ಪುಗುಮೊಂದೊಂ
ದು ರದನದೊಳದೊಂದೆ ವಿಮಲ ಕಮಲವನಂಗಳ್ ೨೧

ಸರಸಿಜದಲರ್ಗಳ್ ಮೂವ
ತ್ತಿರಡೆಸೆವುವು ಬೇಱಬೇಱ ಕೊಳದೊಳ್ ಮೂವ
ತ್ತಿರಡಲರ್ಗಳೊಳಂ ಮೂವ
ತ್ತಿರಡಲರ್ಗಳ್ ಬೇಱಬೇಱ ಸೊಗಯಿಸಿ ತೋರ್ಕುಂ ೨೨

ಒಂದೊಂದೆಸಟ್ಟಿಳ ಮೇಲೆ ಪು
ರಂದರ ಸೌಂದರಿಯರಲ್ಲಿ ಮೂವತ್ತಿರ್ವರ್
ಬಂದಾಡುವರೆಂದೊಡದೇ
ನೆಂಬು ಸುರದ್ವಿಪದ ಲೀಲೆಯಂ ಬಣ್ಣಿಪುದೋ ೨೩

1 ಮೋ (ಕಟ) 2 ಚ (ಕಗಜ)

ಅಂತು ವಿಕ್ರಿಯಾಬಲದೆ ಗೀರ್ವಾಣವಾರಣಂ ವಿಗುರ್ವಿಸೆ

ಎರಡನೆಯ ಕಲ್ಪದಮರೇ
ಶ್ವರನಜಿತಜಿನೇಶ್ವರಂಗೆ ಕೊಡೆವಿಡಿದಂ ಚಾ
ಮರಮಂ ತೃತೀಯ ಕಲ್ಪೇ
ಶ್ವರಮಾಹೇಂದ್ರೇಶ್ವರರ್ಕಳಿಕ್ಕಿದರಾಗಳ್ ೨೪

ಅಜಿತೇಂದ್ರನನಿತರರ್ ಕ
ಲ್ಪಜೇಂದ್ರರಿಕ್ಕೆಲದೊಳೆಸೆದು ವೇಷ್ಟಿಸಿ ಬರೆ ಕ
ಲ್ಪಜರೋಳಿಯೆ ಪಾಟಿ ಮಹಾ
ಧ್ವಜಂಗಳಂ ಪಿಡಿದು ಮುಂದಮುಂದನೆ ನಡೆದರ್. ೨೫

ಅಂತು ನಡೆಯೆ

ನೆಗ[1]ಬ್ದಿಮರನಗೇಂ[1]ದ್ರಮನಾ
ದಿಗಿಭೇಂದ್ರಂ ಪೊರ್ದಿದಲ್ಲಿ ಸುರತೂರ್ಯರವಂ
ನೆಗಟ್ಟಿನೆಗಂ ಕನಕಾದ್ರಿಗೆ
ಖಗಾದ್ರಿ ಸಂತಸದೆ ಬಿರ್ದುಪಂದಂತಿರ್ಕುಂ ೨೬

ಬಗೆಗೊಳ್ವ ಭದ್ರಶಾಲಂ
ಸೊಗಯಿಪ ನಂದನದ ಮಿಸುಪ ಸೌಮನಸದ ಮೇ
ಗೊಗೆದುಜ್ವಲ ಪಾಂಡುಕವನ
ದ ಗಾಡಿಯಿಂ ಕನಕನಗಮದೇನೊಪ್ಪಿದುದೋ ೨೭

ಚಂದನ ನಂದನಾವಳಿಗಳೊಳ್ ಸಹಕಾರವನಂಗಳೊಳ್ ಕೃತಾ।
ನಂದನರಾಗಿ ಕಂದರದರೀಗೃಹದೊಳ್ ಸುಟಿದಚ್ಛವಾರಿ ನಿ
ಷ್ಯಂದನ ಪುಷ್ಪವಾರಿಕಚದೊಳ್ ಪೊರೆದಿರ್ದ ಸುರೇಂದ್ರ ಸುಂದರೀ
ವೃಂದಮನಾಗಳಾಟಿಸಿತು ಸುಂದರ ಮಂದರ ಮಂದಮಾರುತಂ ೨೮

---

1 ಬ್ದಿರ್ದಮರೇಂ (ಗಜ)

ವನದಂತಿಧ್ವನಿಯಿಂ ಕನನ್ಮಣಿ ಹಟತ್ಕೂಟಂಗಳಿಂದಗ್ರಭಾ
ಗನದೀನಿ[1]ರ್ಝುರ[1]ರಪೂರದಿಂದೆ ಸಮುದಪ್ರಧ್ವಾನಲೀಲಂ ಸವಂ
ದನವಾಲಂ ಸಪತಾಕವೆಂಬಿನಮದೇಂ ಚೆಲ್ವಾಯ್ತೊ ತೀರ್ಥಾಧಿನಾ
[2]ಥನ[2] ಬರ್ಪಲ್ಲಿಯೆ ಮಾಡುವಂತೊಸಗೆಯಂ ಕಾರ್ತಸ್ವರಾದ್ರೀಶ್ವರಂ ೨೯

ಎಂದುಂ ನಕ್ಷತ್ರಗಣಂ
ಕುಂದದೆ ಬಲವರ್ಪ ಮೇರುಗಿರಿಯಂ ಪರಮಾ
ನಂದದೊಳೆ ಮೂಱು ಸೂಟಿಲ್ ಬಲ
ವಂದುದು ಜಿನಸವನಪೀಠಮೆಂದಮರಗಣಂ ೩೦

ತ್ರಿಗುಣಿಸಿ ಬಲವ[3]ರ್ಪ[3] ನಿಳಿಂ
ಪಗಣಂ ಮಂದರಕುಭೃನ್ನಿತಂಬಸ್ಥಲದೊಳ್
ಸೊಗಯಿಸಿತು ಕನಕರುಚಿಯಿಂ
ತ್ರಿಗುಣ ಕನತ್ಕನಕ ಘಟಿತ ಕಟಿಸೂತ್ರದವೋಲ್ ೩೧

ಅಂತು ಬಲವಂದು ಬಲಾಂತಕನಘಬಲಾಂತಕಂಬೆರಸು ಬಳಾಹಕ ನಿರ್ಮಿತ ತ್ರಿವಿಧ ಸೋಪಾನದಿಕ್ಕೆಲದೊಳಂ ದೇವನಿಕಾಯಂ ಬರೆ ಬಂದು ಸೋಪಾನಮನೇಱುವಲ್ಲಿ

ಉದಿರ್ದ ಸುರದ್ರುಮಕುಸುಮಂ
ಪುದಿದಿರೆ ಸೋಪಾನಮಾರ್ಗದೊಳೆ ಮಿಡುಕಲ್ಕಾ
ಱದೆ ಕಸುಮುದೆಸಬ್ಗಿಳಿಂದೇ
ಱಿದುದೈರಾವತಗಜಂ ತ್ರಿವೇಣೀಕ್ರಮಮಂ ೩೨

ವಿಪುಳೇಂದ್ರ ನೀಳ ಸೋಪಾ
ನಪಜ್ತಿಯೊಳ್ ನಿಜಗಜಾಧಿರೂಢ ನಿಳಿಂಪಾ
ಧಿಪತನುರುಚಿ ಪೋಲ್ತುದು ವಿಯ
ದುಪ[4]ಪುರ[4] ಧವಳಾಭ್ರಶಿಖರವಿದ್ಯುದ್ರುಚಿಯಂ ೩೩

1 ರ್ಭ (ಕಗಚಜ) 2 ಘನು (ಗಜ) 3 ಪ್ರ (ಕಗಚಜ) 4 ಪರ (ಕ)

ಅಂತು ಬರೆ ಪಾಂಡುಕವನದ ಪೂರ್ವ ದಕ್ಷಿಣ ದಿಗ್ಭಾಗದ ರಜತವರ್ಣದ ಪಾಂಡುಕವಮುಂ ಪಶ್ಚಿಮೋತ್ತರ ದಿಗ್ಭಾಗದ ವಿದ್ರುಮವರ್ಣದ [1]ಪಾಂಡುಕವುಂ [ಪಶ್ಚಿಮ ದಕ್ಷಿಣ ದಿಗ್ಭಾಗದ] ರತ್ನ[1]ಕಂಬಳ[2]ವರ್ಣದ[2] [3]ಪಾಂಡುಕಮುಂ ಪೂ[3]ರ್ವೋತ್ತರ ದಿಗ್ಭಾಗದ ಜಾಂಬೂನದವರ್ಣದತಿರಕ್ತಕಂಬಳಮುಮೆಂಬ ನಾಲ್ಕುಂ ಶಿಲಾತಲಂಗಳೊಳರ್ಧ ಚಂದ್ರಾಕಾರಂಗಳಾಗಿ ಭರತದಪರವಿದೇಹದೈರಾವತದ ಪೂರ್ವ ವಿದೇಹದ ತೀರ್ಥಕರ ಜನ್ಮಾಭಿಷೇಕಕ್ಕೆ ಯೋಗ್ಯಂಗಳಾಗಿರ್ದುವವಱೊಳ್ ಪೂರ್ವದಕ್ಷಿಣ ದಿಗ್ವಳಯಮನಲಂಕರಿಸಿ

ಶತಯೋಜನ ವಿಷ್ಕಂಭಂ
ಶತಾರ್ಧಯೋಜನ ಸಮಸ್ತ ವಿಸ್ತಾರ ಸಮ
ನ್ವಿತಮಷ್ಟಯೋಜನಪ್ರೋ
ಚ್ಛ್ರಿತಮೆನೆ ಪಾಂಡುಕಶಿಲಾತಳಂ ಸೊಗಯಿಸುಗುಂ ೩೪

ಬಳ್ವಳನೆ ಬಳೆದ ನಿಜರುಚಿ
ಗಳ್ವೆರಸುಜ್ವಲ ಶಿಲಾತಳಂ ಮನಮಂ ಬೆಂ
ಕೊಳ್ವಘಮನರ್ಧಚಂದ್ರಂ
ಗೊಳ್ವಂತೆಸೆದಿರ್ದುವರ್ಧಚಂದ್ರಾಕೃತಿಯಿಂ ೩೫

ಪಾಂಡುಕಮಪ್ಪ ಪಾಂಡುಕಶಿಲಾತಲದೊಳ್ ಕನಕಾಭಭಾಸಿಗಳ್
ದಂಡಿಗೆಗಳ್ ಮನಂಗೊಳಿಸೆ ಮುತ್ತಿನ ಲಂಬಣಮೊಪ್ಪೆ ಚೆಲ್ವ[4]ನೀ
ಱ್ಕೊಂ[4]ಡು ಮಣಿಪ್ರತಾನದ ವಿತಾನಮೊಡಂಬಡೆ ತೀರ್ಥಕರ್ತುಗಾ
ಖಂಡಲನಿಂ ಜಗತ್ತ್ರಯಮುಂಡನಮಾಯ್ತಭಿಷೇಕಮಂ[5]ಡ[5]ಪಂ ೩೬

[6]ಅ[6] ಮಂ[7]ಡ[7]ಪದ ನಡುವಣ ಮಹೋತ್ತುಂಗ ಸಿಂಹಾಸನದಮೇಲೆ ಜಿನಾರ್ಭಕನಂ ಪೂರ್ವಾಭಿಮುಖನಾಗಿರಿಸಿ

ನೆಲಸಿರೆ ಸಿಂಹಾಸನದಿ
ಕೆಲದೊಳ್ ಪ್ರಥಮ ದ್ವಿತೀಯ ಕಲ್ಪೇಶ್ವರರಾ

---

1 ರತ್ನ (ಕ) 2 ಮುಂ (ಗ) 3 ಪೂ (ಕ) 4 ನಿಱ್ಕೊಂ (ಕ) 5 ಟ (ಗಚಜ)
6 ಅಂತು (ಚ) 7 ಟ (ಗಚಜ)

ಲಲಿತ ಮಹೀ[1]ಧ್ರದ[1] ಪೀಠದ
ಕೆಲದೊಳ್ ಬಂದಿರ್ದರೆಣ್ಬರುಂ ದಿಕ್ಪಾಲರ್ ೩೭

ಉಚಿತ ಸ್ಥಾನಕದೊಳ್ ತ
ಮ್ಮುಚಿತ ಸ್ಥಾನಕದೊಳಿತ್ತರದೆ ದೇವರ್ಕಳ್
ರುಚಿಮತ್ಕಿರೀಟಮಣಿಗಣ
ರುಚಿಗಳ್ ಬಂದಿರ್ದರಜಿತಸೇವ[2]ನ[2]ರುಚಿಗಳ್ ೩೮

ಆವುವು ಕುಚಕಳಶಂ ಪೇ
ೞಾವುವು ಕಳಧೌತಕಳಶಮೆನೆ ಸಂದ ಶಚೀ
ದೇವಿಯುಮಲಂಕ್ರಿಯೋಚಿತೆ
ದೇವನನೋಲಗಿಸಲೆಂದು ಬಂದೊಸೆದಿರ್ದಳ್ ೩೯

ನೆಲೆವಡಲಿಗೆಗಳ [3]ಜಾ[3]ಗದ
ಕೆಲದೊಳ್ ಮೊಸಱಣ್ಮೆ ಪತ್ತಿ ಸಂಗಡಮೆಸೆಗುಂ
ಫಲಮಕ್ಷತ [4]ಕಮಲಾಕ್ಷತ[4]
ಮಲರಚ್ಚಂಗಱಿಕೆ ಮಂಗಳದ್ರವ್ಯಂಗಳ್ ೪೦

ಧ್ವಜದರ್ಪಣ ಚಂಚಚ್ಚಮ
ರಜಮಣಿಭೃಂಗಾರ ಸುಪ್ರತಿಷ್ಠಿತ ತಾಳ
ವ್ಯಜನ ಕಳಶಾತಪತ್ರಂ
ತ್ರಿಜಗತ್ಪತಿಗಷ್ಟಮಂಗಳಂ ಸೊಗಯಿಸುಗುಂ ೪೧

ಜಲಗಂಧಾಕ್ಷತೆ ಕುಸುಮೋ
ದ್ವಿಲಸಿತ ಚರು ದೀಪ ಧೂಪ ಫಲನಿವಹಂಗಳ್
ಪಲವೆಡೆಯೊಳಮತ್ಯುತ್ತಮ
ಫಲದಾಯಿಗಳೆಸೆದುವಷ್ಟವಿಧದರ್ಚನೆಗಳ್ ೪೨

---

1 ಭದ್ರದ (ಕಗಚಜ) 2 ಕ (ಚ) 3 ಜಾ (ಗಚಜ) 4 ಸಿತತಿಲಕಂ (ಗಜ)

[1]ಆಗಳ್[1]

ಸ್ಫುರಿತ ಕನಕಪ್ರಭಂ ಪಾಂ
ಡುರದೊಳ್ ಪಾಂಡುಕಶಿಲಾತಳಾಪಟ್ಟಕದೊಳ್
ಪರಮನತಿಸ್ವಚ್ಛಸರೋ
ವರದೊಳಗಣ ಕನಕಕಮಳಮಿರ್ಪಂತಿರ್ದಂ ೪೩

ಆಗಳ್ ಶಚೀಪ್ರೇಯಸಂ ಜನ್ಮಾಭಿಷೇಕ ಮಂಗಳೋಪಕರಣನಾಗಿ

ಪರಮಜಿನನೆಂಬ ಧರ್ಮಾಂ
ಕುರಕ್ಕೆ ನೀರ್ವೊಯ್ದು ಪುಣ್ಯಫಲಮಂ ಪಡೆಯಲ್
[2]ಸು[2]ರಪತಿ ವನಪಾಲಕನೊಳ್
ದೊರೆಯೆನೆ ಜನ್ಮಾಭಿಷೇಕವಿಧಿಗೊಡರಿಸಿದಂ ೪೪

ಅಂತೊಡರಿಸಿ

ಪರಮ ಜಿನಾಭಿಷೇಕವಿಧಿ ತೀರದು ಕೂಪಜಲಂಗಳಿಂ ಸರೋ
ವರಜಲದಿಂ ಸರಿಜ್ಜಲದಿನಿಲ್ಲಿಗೆವೇಟ್ಟುದಗಾಧ ದುಗ್ಧಸಾ
ಗರಜಲಮೆಂದು ನಾಕಪತಿ ಪೇೞೆ ಸುರಾಚಲದಿಂ ಸು[3]ರಾ[3]ರ್ಣವಂ
ಬರಮಮರಾದ್ರಿ ನೀಳ್ದು ಗೆಲೆವಂದುದು ಜಂಗಮಸೇತುಬಂಧಮಂ ೪೫

ಕನಕಾಚಲದಿಂದಮರರ್
ಕನಕಾಂಗರ್ ಕನಕಕಲಶಹಸ್ತರ್ ದುಗ್ಧಾಂ
ಬುನಿಧಿವರಮೋಳಗಟ್ಟಿ
ರ್ದನುಕರಿಸಿದರಮರಪತಿಯ ನೀಡಿದ ತೋಳಂ ೪೬

ಕನಕಮಯ ರತ್ನಮಯ ಭಾ
ಜನಂಗಳೆಸೆದಿರೆ ಭುಜಂಗಳೊಳ್ ಕಳಶ ಮರು
[4]ಜ್ಜ[4]ನಮೆಸೆದಿರ್ದುದು [5][ಸಲೆ] ಭಾ[5]
ಜನಾಂಗ ತರುತತಿಯಿನಬ್ಧಿಯಿಂದದ್ರಿವರಂ ೪೭

---

1 ಇಲ್ಲ (ಗಚಜ) 2 ಪು (ಚ) 3 ಛಾ (ಕಟ) 4 ಮಜ್ಜ (ಕ) 5 ಭಾ (ಕಗಚಜ)

ಅಮರೇಂದ್ರಾಚಳದಿಂ ಸಂ
ಚಮಾಬ್ಧಿವರಮೋಳಗಟ್ಟಿ ದಿವಿಜರ್ ಮೊಗೆದೀ
ವಮೃತಜಲಭರಿತ ಕಾಂಚನ
ಸಮುದಗ್ರ ಘಟಾಳಿಯೆಸೆದುವಿಂದ್ರನ ತೋಳೊಳ್ ೪೮

ತುಂಗತೆಯಿಂ ಕನಕಾಂಶುಪಿ
ಶಂಗತೆಯಿಂದಱಿಯಲಾದುದಿ[1]ಲ್ಲಖಿಳ[1] ಮರು
ತ್ಸ್ರಂಗವನ ನೆಗೆದ ಭುಜಶಿಖ
ರಂಗಳುಮಂ ಮೇರುಶಿಖರಿ ಶಿಖರಂಗಳುಮಂ ೪೯

[2]ಪರಿಕಲಿಸಿ[2] ತೋಳೆ ಕೊಂಬಂ
ಕರಜಂಗಳೆ ಪೂಗಳಂ ತಳಂ ತಳಿರಂ ಪೋ
ಲ್ತಿರೆ ಪಿಡಿದ ಕನಕಕಲಶಂ
ಬೆರಸಿಂದ್ರನುದಾತ್ತ ಕಲ್ಪತರುವನೆ ಪೋಲ್ತಂ ೫೦

ಆಗಳ್ ಸಕಲ ಜಗನ್ಮಂಗಳ ಗಂಗಾದಿ ಪುಣ್ಯಸರಿತ್ಸರೋವರಾನ್ವಿತ ಪೂತ ಶೀತಜಲಂಗಳಿಂ ಭೂಮಿಶೋಧನಂಗೆಯ್ದು ಪವಿತ್ರ ದರ್ಭಾಂಕುರಂಗಳಿಂದಗ್ನಿಪ್ರಜ್ವಲನಂಗೆಯ್ದಮೃತಾಂಜುಳಿಯಿಂ ಸಕಲ ಸರ್ಷಪಗಣತರ್ಪಣಂಗೆಯ್ದುಂ ಪೂರ್ವ ದಿಗ್ಭಾ[3]ಗದೊಳ್[3] ದರ್ಭನಿಕ್ಷೇಪಂ ಸಫಲಿ ಶುಚಿಭೂತಗಾತ್ರನುಂ ಧೌತ ಧವಳಾಂಬರ ಪರಿಧಾನನುಂ ಪೂತ ಯಜ್ಞೋಪವೀತಪವಿತ್ರನುಂ ಮುದ್ರಾಕಂಕಣ ಶೇಖರಾಲಂಕೃತನುಮಾಗಿ ಸುಂದರ ಚಂದನ ಚರ್ಚಿತಂಗಳುಂ ನವಪಲ್ಲವೋಲ್ಲಸಿತಂಗಳುಂ ಪವಿತ್ರ ಧವಳ ಸೂತ್ರಪರಿವೇಷ್ಟಿತಂಗಳುಮಗಣ್ಯ ಪುಣ್ಯಾಂಬುಪೂರ್ಣಂಗಳುಮಪ್ಪ ಚತುಃಕೋಣ ಕಳಶಂಗಳನಿಟ್ಟು ಪುಷ್ಪಾಕ್ಷತ ವಿಕ್ಷೇಪಣಂಗೆಯ್ದುಂ ವಿವಿಧಾರ್ಚನೆಗಳಿಂ ಪೀಠಮನರ್ಚಿಸಿ ಚಾತುರ್ವರ್ಣಾಶ್ರಮಗುರುಮಂ ಶ್ರೀವರ್ಣದೊಳಿರಿಸಿ ಗೋಮಯ ಪಿಂಡಾವತರಣದಿಂ ಭೂತನೀರಾಜನ ವಿಧಾನನಾಗಿ ಪರಿಜನವಧೂಜನ ಮಹತ್ತರ ವಾಹನಾಯುಧಾದಿಗಳ್ವೆರಸಪ್ಪ ದಿಕ್ಪಾಲರನಾಹ್ವಾನಂಗೆಯ್ದು ಮಂತ್ರಪೂರ್ವಕಮರ್ಘ್ಯಾಚರಣಂಗೆಯ್ದು ಪೂಜಿಸಿ

1 ಲ್ಲ (ಕಟ) 2 ಪರಕಲಿಸಿ (ಕಗಚಜ) ಪರಿಕಲಿಸಿರೆ (ತ) 3 ಗಂಗಳೊಳ್ (ಕಟ)

ಜಗದಾಹ್ಲಾದ ವಿನೋದಕಾರಿಗಳನತ್ಯಾಶ್ಚರ್ಯಸಂತಾಪಹಾ
ರಿಗಳಂ ವಾರಿಗಳಂ ಸುವರ್ಣಕಲಶಾನೀಕಂಗಳಿಂ ತೀವಿ ನಾ
ಕಗಣೈಕಾಗ್ರಣಿ ತೂರ್ಯಗೀತಮಧುರಧ್ವಾನಂ ದಿಗಂತಂಗಳೊಳ್
ನೆಗೞ್ವಿನ್ನಂ ಸುರಿದಂ ಜಿನೇಂದ್ರಶಿರದೊಳ್ [1]ಸೌಧರ್ಮ[1]ಕಲ್ಪೇಶ್ವರಂ ೫೧

ಸುರಿಯೆ ಸುರವೃಂದಮುತ್ಸವ
[2]ಪರವಶಮುಂ[2] ಮೊದಲೆ [3]ಪುಸಗಿ ಬೊಬ್ಬಿಱಿಯೆ[3] ದಿಗಂ
ತರಮಂ ತೀವಿದುವು ನಿರಂ
ತರ ನಿಸ್ಸೃತ ನಿಬಿಡ ಕುಸುಮಪರಮಾಣುಗಳಂ ೫೨

ಆಗಳ್ ತೀರ್ಥಕರ ಕಲ್ಯಾಣಾಭಿಷೇಕ[4]ಕ್ರಿಯೆಗೆ[4] ಕಲ್ಯಾಣಕಳಶಮನೆತ್ತಿ ಮೃದು ಮೃಣಾಳನಾಳ ಲೀಲಾಕೋಮಲಶರೀರಂಗೆ ನಾಳಿಕೇರರಸದೊಳಮಿಕ್ಷ್ವಾಕುವಂಶೋತ್ತಂಸಂಗಿಕ್ಷುರಸದೊಳಂ ಭವ್ಯಕೋಕಿಳಕುಳ ಸಹಕಾರಂಗೆ ಸಹಕಾರರಸದೊಳಂ ತೀರ್ಥಕರತಿಲಕಂಗೆ ತೀರ್ಥಜಳಂಗಳೊಳಮಭಿಷೇಕಂಗೆಯ್ದು ಘೃತದಧಿಮಹೋದಧಿಗಳ್ಗ ಮಟ್ಟೆತರಿಸಿ

ಮಾರಾರಿಗಭಿಷವಂ ಜಂ
ಭಾರಿಯಿನಾದತ್ತು ಘೃತಸಮುದ್ರದ ಘೃತದಿಂ
ಕ್ಷೀರಸಮುದ್ರದ ವಿಮಲ
ಕ್ಷೀರದಿನತಿಕಠಿನದಧಿಸಮುದ್ರದ ದಧಿ[5]ಯಿಂ[5] ೫೩

ಆಗಳ್ ಸಹಸ್ರಾಕ್ಷನಮೃತ ಜಲಧಿಯಿಂದಮರಸಹಸ್ರಂ ತೀವಿ ತಂದಷ್ಟ ಯೋಜನಾವಗಾಹಮುಮೇಕಯೋಜನಮುಖವಿಸ್ತಾರಮುಮಪ್ಪೋತ್ತರ ಸಹಸ್ರ ಶಾತಕುಂಭ ಕುಂಭಂಗಳಿನನಿತೆ ಭುಜಸಹಸ್ರಂಗಳಿಂ ವಿಕ್ರಿಯಾ ಗುಣದಿಂ ವಿಗುರ್ವಿಸಿ

ದಿವಿಜೇಂದ್ರಂ ಶಾತಕುಂಭೋಜ್ವಲ ವಿಗಳಿತಕುಂಭಂಗಳಂ ತಂದು ದುಗ್ಧಾ
ರ್ಣವಸಾರಕ್ಷೀರದಿಂದಂ ಮಿಸಿಸೆ ಭವದವಜ್ವಾಳನಂ ಬಾಳನಂ ಕೂ

---

1 ಸಧ್ವರ್ಮ (ಚ) 2 ಮುಂ (ಕ) 3 ಮುಂ...ಸಗಿಯೆ (ಕ) 4 ಕೃತಿಗೆ (ಚ)
5 ಯಂ (ಚ)

ಟವಿಟಂಕಸ್ಥಾನದೊಳ್‌ಸಿಲ್ಕಿರದೆ ಪರಿದು ಜಂಚಲ್ಲಸಚ್ಚಂದ್ರರೋಚಿ
ರ್ಥವಳಂ ಮಾಡಿತ್ತು ತನ್ಮಂದರ ಮಹಿಧರಮಂ ಕ್ಷೀರಧಾರಾಪ್ರವಾಹಂ ೫೪

ಸುರಿವುತ್ತುಂ ತೀವುತ್ತುಂ
ಪರಮಜಿನಸ್ನಾನ ಕನಕಕಲಶಂಗಳಿ[1]ನಂ
ದರಘಟ್ಟ[1]ಘಟೀಯಂತ್ರದ
ದೊರೆಯಾಯ್ತು ಸಹಸ್ರನೇತ್ರಬಾಹುಸಹಸ್ರಂ ೫೫

ಕಳಧೌತಕಳಶಮುಖನಿ
ರ್ಗಳದಮೃತಾಂಭಃಕಣೌಘಮಾಯತವಕ್ಷ
ಸ್ಥಳದಲ್ಲಿ ಕಂಠಿಕಾಶ್ರೀ
ವಿಳಾಸದಿಂದೆಸೆದುದಜಿತತೀರ್ಥೇಶ್ವರನಾ ೫೬

ಕವಿದ[2]ತ್ತೊ[2]ರ್ವೆಯೆ ಬಂ[3]ದ[3] ಪಾಲ ಪೊನಲೆಮ್ಮಾಲೋಕಮಂ ತಾರಕಾ
ನಿವಹಂ ತೇಂಕಿಪು[4]ದಿಂ[4]ದು ಮೂಡಿ ಮುಳುಗುತ್ತಿರ್ದಪ್ಪನರ್ದಿರ್ದಪ್ಪೊಂ
ರವಿಯೆಂಬಾಕುಳಚಿತ್ತದಿಂ ಗ್ರಹಕುಳಂ ಬೆಂಬಿರ್ದ ದೇವರ್ ನಿದಂ
ದಿವಿಜಾಧೀಶ್ವರನೆಂಬಿನಂ ಪ್ರಕಟಮಾಯ್ತಂಭಃಪ್ರವಾಹಪ್ಲವಂ ೫೭

ಜಿನಮಜ್ಜನಾವಸರದೊಳ್
[5]ವಿನ್[5]ಮಜ್ಜನ ಮಕುಟ ದುಗ್ಧಾಂಬುಕಣಂ
ಕನಕ ಮಕುಟಂಗಳಂ ಮು
ತ್ತಿನ ಮಕುಟಮಿದೆನಿಸಲಾರ್ತುದತಿಬಹಳತೆಯಿಂ ೫೮

ದೆಸೆಯಾನೆಗಳಾನನದೊಳ್
ಪಸರಿಸಿ ದುಗ್ಧೋದಬಿಂದು ಚಿಬ್ಬಂಬೊಯ್ದಂ
ತೆಸೆದಿರ್ದುವು [6]ಮೆಯ್ಯೊಳ್ ಬೆ[6]
ಳ್ಪಸದನದಂತಿರ್ದುವಜಿತಸವನೋತ್ಸವದೊಳ್ ೫೯

1 ನಚ್ಚರಿವಟ್ಟ (ಗಜ) ನಚ್ಚರಿವ (ಚ) 2 ರೊ (ಚ) 3 ದು (ಗಜ) 4 ದೆಂ (ಕಗಚಜ) 5 ವಿನಿ (ಕಗಚಜ) 6 ದೆಸೆಯೊಳ (ಕ) ದೇಸೆಯೊಳೊ (ಟ)

ಉರದೊಳ್ ಹಾರಶ್ರೀ[1]ಯಿಂ[1]
ಕೊರಲೊಳವೇಕಾವಳೀವಿಳಾಸದಿನಾಗಳ್
ಕರಮೆಸೆದಿರ್ದುವು ದಿಕ್ಸಂ
ದರೀಗಣಂಗಳ್ಗೆ ದುಗ್ಧವಾರಿಕಣಂಗಳ್ ೬೦

ಪ್ಲವಗಪ್ಲು[2]ತದಿಂ[2] ಚಾರಣ
[3]ನಿ[3]ವಹಂ ಚಾರ[4]ಣಗಣಂ[4]ಗಳಂತಾಗೆ ಪಯಃ
ಪ್ಲವದೊಳಗೆ ಮುೞ್ಕಿ ಪಾರಿ
ಪ್ಲವನೇತ್ರೆಯರಮರಕಾಂತೆಯರ್ ಸೊಗಯಿಸಿದರ್ ೬೧

ಜಿನಮಜ್ಜನಾಂಬು ಪಾಂಡುಕ
ವನದಿಂ ಸೌಮನಸವನಕೆ ತದ್ವನದಿಂ ನಂ
ದನವನಕೆ ಪರಿದುದಾ ನಂ
ದನವನದಿಂ ಭದ್ರಶಾಲವನಕೆ ವಿಶಾಲಂ ೬೨

ಪಾಲ ಪೊನಲ್ ಪೊದೞ್ದೞ್ದವಿ ಸೌಂದರಮಂದರಕಂದರಂಗಳಂ
ಶೈಲದರೀ ಗೃಹಂಗಳುಮನೊರ್ವೆಯೆ ತೆಕ್ಕನೆತೀವಿ ತತ್ಸ್ಥಳ
ಸ್ಥೂಲ ಭುಜಂಗ [5]ವಿ[5]ಶ್ವಸಿತಮಾ ನಗದಿಂ ಪೊಱಪೊಣ್ಮಲೋಲಕ
ಲ್ಲೋಲ ಪರಂಪರಾಪರಿಗತಂ ಪರಿದತ್ತು ನಗೋಪಕಂಠದೊಳ್ ೬೩

ಆ ಸುರಗಿರಿಯೊಳ್ ದುಗ್ಧಮ
ಹಾಸಿಂಧುಕ್ಷೀರವರ್ಷಮಂ ಮಾಡುತ್ತುಂ
ವಾಸವನೆ 'ಗಿರೌವರ್ಷತಿ
ವಾಸವ' ಎಂಬೊಂದು ವಾಕ್ಯಮಂ ಪ್ರಕಟಿಸಿದಂ ೬೪

ಬಾಳನ ನಾಸಾಪುಟದೊಳ್
ಮೇಳಿಸೆ ದುಗ್ಧೋದಬಿಂದು ಸಂದೋಹಂಗಳ್
ಲೀಳೆಯಿನಾಂತುಸಿರ್ದೊಡೆ ಕಡು
ಗಾಳಿಯ ತೞಗೆಲೆಗಳಂತೆ ಪಾಱಿದರಮರರ್ ೬೫

---

1 ಯಂ (ಗಚಜ) 2 ತ (ಗ) 3 ಗಣನಿ (ಕಗಚಜ) 4 ಣ (ಕ) 5 ನಿ (ಕಗಚಜ)

ಸ್ಫುರಿತ ಕಳಧೌತಕಳಶ
ಕ್ಷರದಮಲಕ್ಷೀರವಾರಿಧಾರೆಗಳಿಂ ಪಾಂ
ಡುರಿತಂಗಳಾಗಿ ಮಂದರ
ದರೀಗೃಹಂಗಳ್ ಸುಧಾಗೃಹಂಗಳವೆನಿಕುಂ ೬೬

ಕವಿತಂದು ಕೂಡೆ ದುಗ್ಧ
ಪ್ರವಾಹಮಾಶ್ಚರ್ಯಮಾಗೆ ಮಾಡಿದುದಾಗಳ್
ಲವಣಾರ್ಣವಮುಂ ಕ್ಷೀರಾ
ರ್ಣವದೊಳ್ ಸಮನಾಗೆ ಸವನದೊಳ್ ಜಿನಪತಿಯಾ ೬೭

ಅಂತು ಮಂದರಾಚಲದಕೃತ್ರಿಮ ಚೈತ್ಯಾಲಯಂಗಳೆಲ್ಲಂ ಸೌಧಾಲಯಂಗಳೆನಿ[1]ಸೆ[1]ಯುಂ ದರೀಗೃಹಂಗಳೆಲ್ಲಂ ಸೌಧಗೃಹಂಗಳೆನಿಸೆಯುಂ ಕನಕಕೂಟಂಗಳೆಲ್ಲಂ ರಜತ ಕೂಟಂಗಳೆನಿಸೆಯುಂ ಮರಂಗಳೆಲ್ಲಂ ಪಾಲ್ಮರಂಗಳೆನಿಸೆಯುಂ ಬಳ್ಳಿಗಳೆಲ್ಲಮಮೃತವಳ್ಳಿ ಗಳೆನಿಸೆಯುಂ ಮೃಗಂಗಳೆಲ್ಲಂ ಬೆಳ್ಮೃಗಂಗಳೆನಿಸೆಯುಂ *ಕರಿಗಳೆಲ್ಲಮಮರಕರಿಗಳೆನಿ ಸೆಯುಂ ಹರಿಗಳೆಲ್ಲಮಮರಹರಿಗಳೆನಿಸೆಯುಂ ಧೇನುಗಳೆಲ್ಲಂ ಸುರಧೇನುಗಳೆನಿಸೆಯುಂ ವೃಷಭಂಗಳೆಲ್ಲಂ ಹರವೃಷಭಂಗಳೆನಿಸೆಯುಂ ಮಾನಸರೆಲ್ಲಂ ನೀರ್ವಾನಸರೆನಿಸೆಯುಂ* ತೊಱೆಗಳೆಲ್ಲಂ [2]ಪಾಲ್ದೊ[2]ಱೆಯೆನಿಸೆಯುಂ ಶಿಲಾತಳಂಗಳೆಲ್ಲಂ †ಸ್ಫಟಿಕಶಿಲಾತಳಂಗಳೆ ನಿಸೆಯುಂ ಕೂಪಂಗಳೆಲ್ಲಮಮೃತಕೂಪಂಗಳೆನಿಸೆಯುಂ ಗಿರಿಗಳೆಲ್ಲಂ ರಜತಗಿರಿಗಳೆನಿ ಸೆಯುಂ ಇಕ್ಷುವಾಟಂಗಳೆಲ್ಲಂ† ಪುಂಡ್ರೇಕ್ಷುವಾಟಂಗಳೆನಿಸೆಯುಂ ಜಂಬೂದ್ವೀಪ ಮೆಲ್ಲಂ ಶ್ವೇತದ್ವೀಪಮೆನಿಸೆಯುಂ ಲವಣಾರ್ಣವಮೆಲ್ಲಂ ಕ್ಷೀರಾರ್ಣವಮೆನಿಸೆಯುಂ ದಿಗ್ದೇವಿಯರೆಲ್ಲಂ ಜಲದೇವಿಯರೆನಿಸೆಯುಂ ದುಗ್ಧಾರ್ಣವಮೇಕಾರ್ಣವಮಾಗೆ

ಕನಕಾದ್ರೀಂದ್ರಂ ಕನತ್ಕಾಂಚನರುಚಿರುಚಿರಂ ಮುನ್ನಮಾಗಳ್ ನಗಂ ತೊ
ಟ್ಟನೆ ಚಂಚಚ್ಚಂದ್ರರೋಚಿರ್ಧವಳಮೆನಿಸಿ ರೌಪ್ಯಾದ್ರಿಯಂತಿರ್ದುದಾ ಕಾಂ
ಚನಶೈಲಾಧೀಶನೋ ಹೈಮವತಮಹಿಧರಾಧೀಶನೋ ಪೇೞೆಮೆಂತೆಂ
ಬಿನೆಗಂ ಸಂದಿಗ್ಧಮಾಗಿರ್ದುದು ಜಿನಸವನ ಸ್ನಿಗ್ಧ ದುಗ್ಧೋಪದಿಗ್ಧಂ ೬೮

1 ಸಿ (ಗಜ) ಇದೇ ರೀತಿ ಎಲ್ಲ ಕಡೆಯೂ 'ಸೆ'ಗೆ ಬದಲಾಗಿ 'ಸಿ' ಬಂದಿದೆ (ಗಜ)
2 ಬಾಂದೊ (ಕ)
*—* ಈ ಭಾಗ 'ರಜತಗಿರಿಗಳೆನಿಸೆಯುಂ' ಎಂಬುದರ ಅನಂತರ ಬಂದಿದೆ (ಕಗ)
†—† ಈ ಭಾಗ 'ಚ' ಪ್ರತಿಯಲ್ಲಿಲ್ಲ.

ಅಂತು ಧರ್ಮತೀರ್ಥಪ್ರವರ್ಧನಂಗೆ ಸುಗಂಧ ಶುಷ್ಕ ಚೂರ್ಣ ಪಿಷ್ಟದಿನುದ್ವರ್ತನ ವಿಧಿಯಂ ನಿರ್ವರ್ತಿಸಿ ವರ್ಣಪೂರದಿನುತ್ತಪ್ತ ಸುವರ್ಣ ಜಿನರಾಜಕುಂಜರಂಗೆ ನೀರಾಜನವಿಧಿಯಂ ಮಾಡಿ

ನೆಗೞ್ದಿರ್ದು ಪಾಲ್ಮರಂಗಳ
ತಿಗುಳ್ಗಳಿಕ್ಕಿದ ಕಷಾಯ[1]ಜಳದಿಂ[1]ದಿಂದ್ರಂ
ವಿಗತಕಷಾಯಂಗಜಿತಂ
ಗಗಣ್ಯಪುಣ್ಯಂಗೆ ಮಾಡಿದಂ ಮಜ್ಜನಮಂ ೬೯

ಆಗಳ್

ಪರಮೇಶ್ವರನುಂ ಕಾರ್ತ
ಸ್ವರದ ಚತುಷ್ಕೋಣಕಲಶಮುಂ ಪೋಲ್ತುವೆ ಮಂ
ದರಶಿಖರ ಸಂಚಶಿಖಿಯುಂ
ಪರಿಮಳ ಮಿಳಿತಾಳಿಪಟಳರುಚಿಜಟಿಳತೆಯಿಂ ೭೦

ಅಂತು ಕಷಾಯಚತುಷ್ಟಯಮಂ ಕರ್ಚಿ ಕಳೆವಂತಾನುಮನಂತಚತುಷ್ಟಯ ಪ್ರಾಪ್ತಿಗೆ ರಾಜ್ಯಾಭಿಷೇಕಂಗೆಯ್ವಂತಾನುಂ ಚತುಃಕೋಣ ಕಳಶಭರಿತ ತೋಯದಿ ನಭಿಷೇಕಂಗೆಯ್ದು ಕಾಳಾಗರು ಕರ್ಕೋಳ ಜಾತೀಫಲ ಜಾತೀಪತ್ರ ಗೋಶೀರ್ಷ ಚಂದನ ಲವಂಗ ಕುಂದುರುಷ್ಕಾದಿ ಸುಗಂಧದ್ರವ್ಯಸಹಿತನಾಗಿ

ಮಳಯೋರ್ವೀರುಹ ಕುಂಕುಮದ್ರವಯುತಂ ಕರ್ಪೂರಮಿಶ್ರಂ ಮನಂ
ಗೊಳೆ ಮತ್ತಾಳಿಕುಳಪ್ರಣಾಳಿಮಧುರಂ ಗಂಧೋದಕಂ ಸ್ವರ್ಣಮಂ
ಗಳಕುಂಭಂಗಳೊಳೊಂದುಮಾಡಿ ಪಲವುಂ ತೀರ್ಥಾಂಬುಮಂ ತೀರ್ಥಕೃ
ತ್ತಿಳಕಂಗಿೞ್ತಿಯೆ ಮಾಡಿದಂ ಮಘವನಾ ಗಂಧೋದಕಸ್ನಾನಮಂ ೭೧

ಪವಿಯಂ ರಕ್ಷಿಸುವುದಱಿಂ
ಪವಿತ್ರನಾದನೆ ಸುರೇಂದ್ರನಜಿತನ ವಿನಮ

1 ದಿಂ (ಕ)

[1]ದ್ಬು[1]ವನನ ಗಂಧೋದಕದಿಂ
ಪವಿತ್ರನಾದಂ ಪವಿತ್ರಗಾತ್ರನುಮಾದಂ ೭೨

ಮೋದಕರಂ ಖಳಕರ್ಮ
ಚ್ಛೇದಕರಂ ಸುಖದ ಶುಭದಕರಮಮರಜನಾ
ಹ್ಲಾದಕರಮೆನಿಪ ಜಿನಗಂ
ಧೋದಕದಿಂ ಕುಲಿಶಿಗಾದುದವಭೃತಸವನಂ ೭೩

ಅನಿಮಿಷಪತಿ[2]ಯುಂ[2] ತ್ರಿಜಗ
ಜ್ಜನಸತಿ[2]ಯುಂ[2] ಪೊತ್ತು ಪಥಪರಿಶ್ರಮಮೊದವಿ
ತ್ತೆನೆ ಪಾಲ ಮೊಸಱ ತುಪ್ಪದ
ಪೊನಲೊಳಗವಗಾಹಮಿರ್ದುದಮರಗಜೇಂದ್ರಂ ೭೪

ದಿವಿಜಾಧೀಶ್ವರನೊರ್ವನೆ
ಪವಿತ್ರನಾದನೆ ಪವಿತ್ರಮಾಯ್ತು ಮರನಗಂ
ಭುವನಂ ಪವಿತ್ರಮಾದುದು
ಸವನೋದಕದಿಂ ದ್ವಿತೀಯ ತೀರ್ಥೇಶ್ವರನಾ ೭೫

ವೃಷಕೃತಜಿನೇಂದ್ರಜನ್ಮಾ
ಭಿಷವಂ ನಂದೀಶ್ವರತ್ರಯಂಗಳೊಳಮಮಾ
ನುಷಮಾಗಿರೆ ಮಾಳ್ಪ ಮಹಾ
ಭಿಷೇಕದಂತಾಯ್ತು ದಾನಚಿಂತಾಮಣಿಯಾ ೭೬

ಅಮೃತಜಲದಿಂದಮನಿಬರು
ಮಮರೇಂದ್ರರ್ ಮಿಸಿಸೆ ತನ್ನನಿಬರುಮಂ ತಾ
ನಮೃತಮಯ ದೃಷ್ಟಿಯಿಂ ನೋ
ಡೆ ಮಿಂದರಮರೇಂದ್ರರಜಿತನಯನಾಮೃತದಿಂ ೭೭

1 ಧ್ವ (ಗಜ) 2 ಯುಂ (ಕ)

ಅಂತು ಜನ್ಮಾರಾತಿಗಪುನರ್ಜನ್ಮಲಕ್ಷ್ಮೀವಲ್ಲಭಂಗೆ ಪುಣ್ಯಜನ್ಮನೆನಿಸಿದ ದಿವಿಜರಾಜಂ ಜನ್ಮಾಭಿಷೇಕಕ್ರಿಯೆಯಿಂ ನಿರ್ವರ್ತಿಸಿ

ಸುರಸಿಂಧೂದಕ ಯಕ್ಷಕರ್ದಮ ಲಸನ್ಮುಕ್ತಾಕ್ಷತಾಮೋದ ಬಂ
ಧುರ ಮಂದಾರ ಸುಧಾರಸಾನ್ನ ಮಣಿಮಾಲಾದೀಪ್ರದೀಪಾಸಿತಾ
ಗರುಧೂಪ ತ್ರಿದಶಾವನೀಜಫಲದಿಂ ಸೌಧರ್ಮಕಲ್ಪೇಂದ್ರನಾ
ದರದಿಂದರ್ಚಿಸಿದಂ ದ್ವಿತೀಯ ಜಿನತೀರ್ಥೇಶಾಂಘ್ರಿಪದ್ಮಂಗಳಂ ೭೮

ಮಂಗಳನಿಳಯನ ಪದಪ
ದ್ಮಂಗಳನರ್ಚಿಸಿದರಷ್ಟವಿಧದರ್ಚನೆಯಿಂ
ಮಂಗಳಧಾರಿಣಿಯರ್ ಶ
ಕ್ರಾಂಗನೆಯುಂ ನೆಗಬ್ದ ನಾಗದೇವಾಂಗನೆಯುಂ ೭೯

ಅಂತುತ್ಸ್ವಷ್ಟಾಷ್ಟವಿಧಾರ್ಚನೆಗಳಿಂ ಪೀಠಿಮನರ್ಚಿಸಿ ಸಿದ್ಧಭಕ್ತಿ [1]ಪುರಸ್ಸರಂ[1] ಪೂಜಾವಂದನೆ[2]ಗೆಯ್ದು[2]

ಓಂ ಜಯ ಜಯ ಜಗತ್ತ್ರಯಪತಿ [3]ಕಿ[3]ರೀಟಕೂಟಕೋಟಿ ಕಿರೀಟ ಮಣಿಮಸೃಣ ಚಾರುಚಂಚನ್ನಖ ಮಯೂಖೋದಂತಮಯೂಖಮಂಡಲ ಮಂಡಲೀಭೂತ ಸಕಲ ದಿಕ್ಪಾಲಮಾಲಾಮೌಳಿಮಣಿಕಿರಣಜಾಲ ಬಾಲಾತಪಚ್ಛಾಯಾರುಣಿತ ತರುಣ ಪಾರಿಜಾತಪಲ್ಲವಾಯಮಾನ ಪಾದಪಲ್ಲವ ಪಲ್ಲವಿತ ಕುಸುಮಿತಾನಲ್ಪಕಲ್ಪ ಲತಾಯಮಾನ ಕಲ್ಪೇಶ್ವರ ಪ್ರಾಣೇಶ್ವರೀ ಸಮುಲ್ಲಸಿತ ಕರತಳಪಲ್ಲವ ನಖಮಯೂಖ ರುಚಿರಪ್ರಚುರ ಕಾಶ್ಮೀರಾಂಗರಾಗ ದ್ವಿಗುಣೀಕೃತ ಕನಕಕಮನೀಯ ಕಾಯಕಾಂತಿ ಭ್ರಮದ್ಭ್ರಮರ ಕುಲವಿನೀಲ ಕುಟಿಲ ಸಂಚಲತ್ಕುಂತಳ ಕಳಾಪಲಗ್ನ ದುಗ್ಧೋದ ಬಿಂದು ಸಂದೋಹ ಸಂದಿಗ್ಧಮೂ[4]ರ್ಧ್ನ[4]ಭೂಷಣ ವ್ಯಕ್ತ ಮುಕ್ತಾಜಾಲ ಪ್ರಕರ ಕರಕಮಲ ಮುಕುಳಾಲಂಕೃತ ರುಂದ್ರ ಲಲಾಟಪಟ್ಟ ದ್ವಾತ್ರಿಂಶದಿಂದ್ರಮಣಿಮಯ [5]ಕಿ[5]ರೀಟ ಕೋಟಿಘಟಿ[6]ತ[6] ಪಾದಪೀಠ ಪೀಠೀಕೃತ ಮಂದರಾಚಲ ಶಿಖರ ಶಿಖರೀಭೂತ ತಿಲಕಾಯಮಾನ ಮಹನೀ[7]ಯ ಮಹಿಮೋದಯ[7] ಮಹಿಮೋದಯೋದ್ಭಾಸಿ ಭಗವಜ್ಜಿನೇಂದ್ರವೃಂದವೃಂದಾರಕ ಶ್ರೀಮದಜಿತಭಟ್ಟಾರಕ ಜಿನ ನಮಸ್ತೇ ನಮಸ್ತೇ ನಮಸ್ತೇ

---

1 ಪೂರ್ವಕಂ (ಗ) 2 ಯಂ ಮಾಡಿ (ಗ) 3 ತಿ (ಕಗ) 4 ರ್ಧ (ಕಟ) 5 ತಿ (ಕಗ)
6 ತ ಘಟ್ಟಿತ (ಕ) ತ ಸ್ಫುಟಿತ (ಙ) 7 ಯು (ಗ)

ಎಂದು ಸೌಧರ್ಮಕಲ್ಪಾಧಿಪತಿ ಜಿನಾಧಿಪತಿಯನನೇಕ ಸ್ತುತಿ ಸಹಸ್ರಂಗಳಿನಭಿ[1]ಷ್ಟುತಿಗೆಯ್ಯೆ[1]

ಉರಗಾಧೀಶ್ವರನಿರ್ಚ್ಛಾ
ಸಿರ ನಾಲಗೆಯಿಂದೆ ಪೊಗೞ್ದು ತಣಿಯನೆ ಪರಮೇ
ಶ್ವರನಂ ಸುರೇಶ್ವರಂ ಸಾ
ಸಿರ ಕಣ್ಗಳೊಳೆಯ್ದೆ ನೋಡಿ ತಣಿಯನೆ ಸಭೆಯೊಳ್ ೮೦

ದಿವಿಜೇಂದ್ರನುಮುರಗೇಂದ್ರನು
ಮವರಿರ್ವರುಮಾರ್ತರಿಲ್ಲ ಜಿನನಂ ಪೊಗೞಲ್
ಕವಿಚಕ್ರವರ್ತಿಯೆನಿಸಿದ
ಕವಿರತ್ನಂ ನೆಱೆಯನುೞಿದರೇಂ ನೆಱೆದಪರೇ ೮೧

ಪ್ರತ್ನಕವಿಪ್ರವರರ್ ಮೇಣ್
ನೂತ್ನಕವಿಪ್ರವರರಕ್ಕೆ ಜಿನನಭಿಷವಮಂ
ಯತ್ನದೆ [2]ಪೇೞೞ್ದುಡಮೇಂ ಕವಿ[2]
ರತ್ನನ ಜನ್ಮಾಭಿಷೇಕಮಂ ಪೋಲ್ತ[3]ಪುವೇ[3] ೮೨

ಕನಕೋರ್ವೀಧರಮೇಱ ಮಾವ ಮಣಿ ದುಗ್ಧೋದಂ ಜಲಂ ವಜ್ರಿ ಮ
ಜ್ಜನವಳ್ಳಂ ಪರಿಚಾರಕರ್ಕಳಮರರ್ ಗಂಧರ್ವರಂತಲ್ಲಿ ಗಾ
[4]ಯನ[4]ರಿಂದ್ರಾಂಗನೆಯರ್ಕಳಲ್ಲಿ ಕುಣಿವರ್ ತಾಮೆಂದೊಡೇನೆಂದು ಮ
ಜ್ಜನಮಂ ಬಣ್ಣಿಸುವೆಂ ದ್ವಿತೀಯ ಜಿನತೀರ್ಥೋದರ್ಕ ಬಾಲಾರ್ಕನಾ ೮೩

ಇದು ಸಕಲ ಮುನೀಂದ್ರ ವೃಂದ ವೃಂದಾರಕ ಶ್ರೀಮದಜಿತಸೇನ ಭಟ್ಟಾರಕ ಶ್ರೀಪಾದಪದ್ಮಪ್ರಸಾದಾಸಾದಿತ[5]ರತ್ನತ್ರಯಾಲಂಕೃತ ಶ್ರೀ[5]ಮದಭಿನವ ಕವಿಚಕ್ರವರ್ತಿ ಕವಿರತ್ನ ನಿರ್ಮಿತ ಶ್ರೀದಾನಚಿಂತಾಮಣಿ ನಿರ್ಮಾಪಿತ ಶ್ರೀಮದಜಿತತೀರ್ಥಕರ ಪುರಾಣತಿಲಕದೊಳ್ ಜನ್ಮಾಭಿಷೇಕ ಕಲ್ಯಾಣವರ್ಣನಂ ಚತುರ್ಥಾಶ್ವಾಸಂ

---

1 ಷ್ಟುತಂಗೆಯ್ಯೆ (ಗ) 2 ಪೇೞ್ದುಡಮೇಂ ಕವಿ (ಕ) ಪೇೞ್ವುಡಮೇಂ ಕವಿ (ಚ) ಕವಿ (ಜ)
3 ಪರೇ (ಗಚಜ) 4 ಯಕ (ಕಚ) 5 ಶ್ರೀ (ಕ)

## ಪಂಚಮಾಶ್ವಾಸಂ

ಶ್ರೀಮಜ್ಜಿನಮಜ್ಜನದ ಮ
ಹಾಮಹಿಮಾತಿಶಯಮುಮಸದಳಂ ಪೊಗೞಲ್ ಪೌ
ಲೋಮೀಪತಿಗಲ್ಲದೆ ಪೆಱ
ಗೇ ಮಾತದು ಪುಣ್ಯ[1]ಭ[1]ರಿತಮಪಗತದುರಿತಂ ೧

ಅಂತೆನಿಸಿದ ದ್ವಿತೀಯ ತೀರ್ಥಕರ ಪರಮದೇವ ದ್ವಿತೀಯ ಕಲ್ಯಾಣಾವಸರದೊಳ್

ಪರಮ ದ್ವಿತೀ[2]ಯ ಭಕ್ತಿಯ[2]
ಭರದಿಂ ಬಂದೆಱಗಿದಂ ಪದದ್ವಿತಯದೊಳಾ
ದರದಿಂ ದ್ವಿತೀಯ ಕಲ್ಪಾ
ಮರ ಪರಿವೃತನಾ ದ್ವಿತೀಯ ತೀರ್ಥೇಶ್ವರ[3]ನಾ[3] ೨

ಆಗಳಾ ದ್ವಿತೀಯ ತೀರ್ಥಕರ ಕುಮಾರಂಗೆ ಸನತ್ಕುಮಾರಾದಿಗಳಪ್ಪ ದೇವೇಂದ್ರರೆಲ್ಲಮೆಱಗೆ

ದ್ವೈತೀಯಕ ಜಿನಪಂಗ
ದ್ವೈತಂಗಜಿತಂಗೆ ಭುವನದಯಿತಂಗಾಗಳ್
ದ್ವೈತೇಂದ್ರರೆಲ್ಲಮೆಱಗಿದ
ರಾತತ ಪುಣ್ಯಂಗೆ ಜಗದೊಳೆಱಗದರೊಳರೇ ೩

ಎರಡನೆಯ ತೀರ್ಥಕರನಂ
ಪರಮೇಶ್ವರನಂ ತ್ರಿಲೋಕಚೂಡಾಮಣಿಯಂ
ಸುರರೆಲ್ಲಂ ಚೂಡಾಮಣಿ
ಕಿರಣದಿನವನತ[4]ಕಿ[4]ರೀಟರಭ್ಯರ್ಚಿಸಿದರ್ ೪

---

1 ಜ (ಗಜ) 2 ಯ (ಕ) 3 ನಂ (ಕಟ) 4 ತಿ (ಗ)

ಸಂಗತ ಮಣಿರುಚಿಯಂ ಜಿನ
ಪುಂಗವನಡಿಗೆಱಗುವೆಡೆಯೊಳಿನಿಸಿಸಿಸಱಿಯಲ್
ಸಾಂಗಾದುದು ಸುರಗಿರಿಕೂ
ಟಂಗಳುಮಂ ಪ್ರಣತ ಸುರ[1]ಕಿ[1]ರೀಟಂಗಳುಮಂ ೫

ಕುಳದೀಪಕನಂ ತ್ರಿಜಗ
ತ್ತಿಳಕನಿಕ್ಷ್ವಾಕುವಂಶಚೂಡಾಮಣಿಯಂ
ಕುಳಿಶಧರಂ ಪೊಗೞ್ದು ಮನಂ
ಗೊಳೆ ಮಾಡಿದನೈಂದ್ರವೆಂಬ ನಾಟಕವಿಧಿಯಂ ೬

ತ್ರಿದಶಾಚಲ ಶಿಖರದೊಳಜಿ
ತದೇವ [2]ಜನ್ಮಾ[2]ಭಿಷೇಕ ಮಂಗಳ ಸಮಯಾಂ
ಬುದ ಸಮಯಂ ಸಮನಿಸೆ ಮಾ
ಡಿದ್ದುದಾಖಂಡಲ ಶಿಖಂಡಿ ತಾಂಡವವಿಧಿಯಂ ೭

ಕರಚರಣ ಸಮಾಯೋಗದೆ
ಕರ[3]ಣಂ[3] ನೂರೆಂಟು ತದ್ಭವಂಗಳ್ ಮೂವ
[4]ತ್ತೆ[4]ರಡಂಗಹಾರವೆಸೆದುವು
ಸರೋಚಕಂಗಳ್ [5]ಸು[5]ಚಾರಿಗಳ್ ಸುರಪತಿಯಾ ೮

ಪ್ರಕಟಾಂಗಿಕ ವಾ[6]ಚಿ[6]ಕ ಸಾ
ತ್ವಿ[7]ಕಮಾ[7]ಹಾರ್ಯಂಗಳೆಂಬ ನಾಲ್ಕಭಿನಯಮುಂ
ಸಕಲ ಪರೀಷಹಮೆನೆ ರಂ
ಜಕಮಾದುವು ರಂಗಮಧ್ಯದೊಳ್ ಕೌಶಿಕನಾ ೯

ಸಾಮಾನಿಕ [8]ಜನತತಿ[8]ಚೇ
ತೋಮಂ ಪ್ರಾಸಾದಿಕಾಂತರಾ[9]ಕ್ಷೇ[9]ಪಕ ವಿನಿ

1 ತಿ (ಗ) 2 ಜಿನಾ (ಚ) 3 ವಂ (ಚ) 4 ತ್ತಾರಂ (ಜ) 5 ಸ (ಕಟ) 6 ಚ (ಜ) 7 ಕಂಗಳಾ (ಕಜ) 8 ಜನ (ಕಟ) 9 ಕ್ಷ (ಕಟ)

ಷ್ಕ್ರಮುಪ್ರವೇಶ ಗಾನರ
ಸಾಮ್ಯತಮೆಸೆಗುಂ ಧ್ರು[1]ವ[1]ಪ್ರಯೋಗಾನುಗತಂ ೧೦

[2]ಆ[2]ಕಬಳಮನನ್ಯವಸ್ಥಿತ
ಮುಕಾಕಿ ಸಂದಿಷ್ಟತುಂಬಕೀರಹಿತಂ ಗಾ
ಯಕ ಗಣಕಂಠರವಂ ಶ್ರಾ
ವಕ ಮಧುರ ಸ್ನಿಗ್ಧಮೆ[3]ಸೆದುದಾ[3]ಸ್ಥಾಯಿಕೆಯೊಳ್ ೧೧

ಯತಿಯೊಳ್ ಗೋಪುಚ್ಛೆ ತನ್ನೊಳ್ [4]ನೆಲಸಿ ನೆ[4]ಗಟ್ಬಿನಂ ಮಾರ್ಗದೊಳ್
[5]ಚತ್ರಕೀಯಂ[5]
ಕೃತಕೂಚಾಡಂಬರಂ ರಂಜಿಸುವಿನಮೆಸೆಗುಂ ದಕ್ಷಿಣಾವೃತ್ತವೃತ್ತ
ತ್ರಿತಯಾಂತರ್ವರ್ತಿ ತಾನೆಂಬಿನಮನುಗತ ತತ್ತ್ವಘದೊಳ್ ತತ್ತ್ವದಿಂದ
ನ್ವಿತಮುಂ ವಿಸ್ತಾರಮತ್ಯಪ್ರಕಟಿತ ಮನದಿಂ ಮೆಚ್ಚಿದಂ ದೇವರಾಜಂ ೧೨

ಜನಿಯಿಸೆ ವೀಣಾ[6]ಕ್ವಣ[6]ಮುರ
ಜನಿನದ ತಾಳಪ್ರಣಾದ ವಂಶಧ್ವನಿಗಳ್
ಜನಮನೊರಲ್ಚಿದುವು ತತಾ
ವನದ್ಧಘನ ಸುಷಿರ ವಾದ್ಯಭೇದತರಂಗಳ್ ೧೩

ಪದವಿನ್ಯಾಸಕ್ಕದೆ ನೆಲೆ
ಯದೆ [7]ಕರವಿನ್ಯಾಸ[7]ಮೆಸೆದುದೆಂಟುಂ ದೆಸೆಯೊಳ್
[8]ವದನ[8]ನ್ಯಾಸಂ ಸುರಲೋ
[9]ಕದಿನತ್ತ್ರನೆ[9] ನಾಟ್ಯಮುದ್ಭಟಂ ಶತಮುಖನಾ ೧೪

ವಾಸವನಪೂರ್ವ ನಾಟ್ಯವಿ
ಳಾಸದೆ ತಾಂ ಭ್ರಮರಿಗುಡುವುದುಂ ನೇತ್ರ ಸಹ

---

1 ವಾ (ಕಗಜ). 2 ಆ (ಚಜ) 3 ನೆದುಗಾ (ಚ) 4 ನೆ (ಜಟ) 5 ಚಕ್ರ ಚಕ್ರೀ (ಗಜ) 6 ಶ್ವಸ ಕ್ಷಣ (ಕಟ) ಕ್ಷಣ (ಜ) 7 ಕರ (ಚ) 8 ಪದವಿ (ಟ) 9 ಕದೆ ನರ್ತನೆ (ಗಜ)

ಸ್ವಾಸಿತ ರುಚಿ [1]ಕರ್ನೆಯಿಂ್ದಲ[1]
ಬಾಸಿಗವಮಂ ಬೀಸಿದಂತುಟಾದುದು ಸಭೆಯೊಳ್ ೧೫

ಈ ನಾಟ್ಯದ ಕೆಲದೊಳ್ ನಾ
ಮೇನಂ ರಂಜಿಸುವೆನೆಂದು ನೆಗಟ್ದೂರ್ವಶಿಯುಂ
ಮೇನಕೆಯುಂ ರಂಭೆಯುಮಿನಿ
ಸಾನತವಮುಖಿಯರ್ಕಳಾಗಿ ಬೆಱಗಾಗಿರ್ದರ್ ೧೬

ಪೊಳೆವಲರ್ಗಣ್ಣ ಬೆಳ್ಪುಗಳ ಪುರ್ವಿನ ಜರ್ವಿನ ಚೆಲ್ವುಗಳ್ ಮನಂ
ಗೊಳೆ ಸುರಕಾಂತೆಯರ್ ದಿವಿಜರಾಜನ ತೋಳ್ಗಳ ಮೇಲೆ ನಿಂದು ಗೊಂ
ದಳದೆ ವಿಚಿತ್ರ ನರ್ತನ ವಿಳಾಸಮನಾ[2]ಡೆ ಮರು[2]ದ್ವಿಲಾಸಿನೀ
ವಿಳಸಿತ ಲಾಸ್ಯಮುಂ ಮಘವ ತಾಂಡವಮೇಂ ರಮಣೀಯಮಾದುದೋ ೧೭

ಧರೆಯೊಳ್ ತೋರ್ಪಂತಾ ಕಕು
ಭ ರಂಗದೊಳ್ ತೋರ್ಪನನಿಲಪಥದೊಳ್ ತೋರ್ಪಂ
ಪರಿಣತಿವೃತ್ತಮನೆನೆ ಬಿ
ತ್ತರಿಸಿದನಂದಿಂದ್ರನಿಂದ್ರಜಾಲಿಗತನಮಂ ೧೮

ಅನಿಮೇಷಾಧಿಪತಿ ಸಹ
ಸ್ರನೇತ್ರನಾಗಳ್ ಸಹಸ್ರ[3]ಕರನಾದಂ[3]ನ
ರ್ತನ[4]ದೊಳ್[4] ಸಹಸ್ರ[5]ಪದ[5]ನಾ
ದನೆನೆ ವಿರಾಜಿಸಿತು ಹಸ್ತಪದವಿನ್ಯಾಸಂ ೧೯

ಕುಲಿಶಿಯ ತೋಳ್ಗಳೊ[6]ಳಮುರ[6]
ಸ್ಥಲದೊಳ್ ಕರತಲದೊಳೆಸೆವ ಮಣಿಬಂಧದೊಳಂ
ಗುಲಿಯೊಳ್ ನಖದೊಳ್ ನರ್ತನ
ವಿಲಾಸಮಂ ಮೆಱೆದರಿಂದ್ರ[7]ಸೌಂ[7]ದರಿಯರ್ಕಳ್ ೨೦

---

1 ಕನ್ನೈದಿಲ (ಗಚಜ) 2 ಡಿ ಸುರ (ಕಗಚಜ) 3 ನೇತ್ರನಾಗಳ್ (ಚ) 4 ದೊಳ್ ಹರ್ತನ (ಚ) 5 ಕರ (ಕಗಚಜ) 6 ಳಂ ಸಂ (ಕಟ) ಳುಮುರ (ಗಜ) 7 ಸುಂ (ಗಜ)

ಜನಮೆಲ್ಲಂ ನುಡಿವುದು ದಂ
ಡನೃತ್ಯಮುಂಟೆಂದು ಕಾಣಲಾ[1]ಟಂ[1]ದುದು ಶ
ಕ್ರನ ಬಾಹುದಂಡದೊಳ್ ಚಿ
ತ್ರನರ್ತನಂ ನೆಗೞ್ದು ನೆಗೞ್ದಿ ಸುರಕಾಂತೆಯರಿಂ ೨೧

ನಾಡಾಡಿಗಳಿದ ರೂ[2]ಪುಂ[2]
ಗಾಡಿಯುಮೆಸೆದೊಪ್ಪೆ ದೇಸೆ ಕಣ್ಗಂ ಮನಕಂ
ತೋಡೆನಿ[3]ಸಿ[3] ತೋಳಿೊಳಿರ್ದರ
ನಾಡಿಸಿ ನೋಡುತ್ತುಮಿರ್ಪುದೊಂದರಸಲ್ತೇ ೨೨

ಅಂತು ನಿಸ್ಸಂಗನಂ ಸಂಗೀತಪ್ರಸಂಗದೊಳಮರಪುಂಗವನೋಲಗಿಸಿ ಮುನ್ನ ಮಾದಿದೇವಂಗೆ ಮಾಡಿದಂದದೊಳೆ ಮಂದರಾಚಲದೊಳಜಿತದೇವಂಗೆ ಜನ್ಮಾಭಿಷೇಕ ಕಲ್ಯಾಣಮಂ ಮಾಡಿ ಬಾಹ್ಯಾಭ್ಯಂತರ ಶತ್ರುಗಳ್ಗೆ ಜಿತನಪ್ಪುದಱಿಂದಜಿತನಾಥನೆಂದು ಪೆಸರನಿಟ್ಟು ಸಹಜಚ್ಛಿದ್ರ ಕರ್ಣಂಗಳೊಳ್ ಕರ್ಣಕುಂಡಲಯುಗಳಂಗಳನಿಟ್ಟು ಮಣಿ ಮಯಾಲಂಕಾರಾಲಂಕೃತಂ ಮಾಡೆ

ಪರಮನ [4]ಚ[4]ರಮಔದಾರಿಕ
ಶರೀರಮುಜ್ವಳ ಸುವರ್ಣವರ್ಣಂ ರತ್ನಾ
ಭರಣದೆ ರಂಜಿಸಿದುದು ಮಂ
ದರಾದ್ರಿ ತಾರಾಗಣಂಗಳಿಂ ರಂಜಿ[5]ಪ[5]ವೋಲ್ ೨೩

*[6]ಸುರಶೈಲೋತ್ಸಂಗದೊಳಂ[6]
ಸುರೇಂದ್ರರದನೀಂದ್ರ ಸುಂದರೋತ್ಸಂಗದೊಳಂ
ಸುರಪೂಜಿತನೆನಿಸಿರ್ದನ
ಚ್ಚರಿವಿಗೆ ತಾನಜಿತ[7]ನಂ[7]ದು ಸಂಗತನಾದಂ ೨೪

*ಬಳೆದೊಗೆದ ಮೇರುಕೂಟ
ಸ್ಥಳಂಬರಂ ದ್ರೋಹಸ್ಪರ್ಶಿತದಿ ನೆರೆ ನಿರಾ

1 ಯ್ತಂ (ಗಜ) 2 ಪಂ (ಗಜ) 3 ಸ (ಕಗಚಜ) 4 ಪ (ಗಜ) 5 ಸು (ಗಚಜ)
6 ಸುರ (ಚ) 7 ನೆಂ (ಚ) * 'ಚ' ಪ್ರತಿಯಲ್ಲಿಲ್ಲ

ಕುಳತೆಯಿನಿಳಿವಲ್ಲಿ ಮನಂ
ಗೊಳಿಸಿದುದಷ್ಟಿವೆಸರ್ಪಿತಂ ಸುರಗಜ[1]ದಿಂ[1] ೨೫

ಕನಕಾದ್ರಿಯ ಸಪ್ತಚ್ಛದ
ವನದೇಲಾವನದ ಚೂತವನದೆಡೆಗಳೊಳಂ
ದನಿತಱ ಗಂಧಂಗಳುಮಂ
ತನುಮದಗಂಧದೊಳೆ ಗೆಲ್ವುದಿಂದ್ರಗಜೇಂದ್ರಂ ೨೬

[2]ಜಂ[2]ಬೂನದ ಗಿರಿರಾಜನ
ನಿಂಬಿನೊಳಿೞಿವಲ್ಲಿ ನೆರೆದು ನೋಡಿದರಮರ
ಸ್ತಂಬೇರಮಮಂ ಮುತ್ತಿನ
ಲಂಬಣಮೆಂದಮರರಮರನಾಯಕಯುತಮಂ ೨೭

[3]ಆಗಳ್[3]

ಸುರತೂರ್ಯಾರಾವಮೆಂಟುಂ ದೆಸೆಯೊಳಮೆಸೆಯುತ್ತಿರ್ಪಿನಂ ಧರ್ಮತೀರ್ಥೇ
ಶ್ವರನಂ ಸೌಧರ್ಮಕಲ್ಪೇಶ್ವರನಮರನಗೇಂದ್ರಾಗ್ರದಿಂ ತಂದಯೋಧ್ಯಾ
ಪುರಿಗಾನಮ್ರೋತ್ತಮಾಂಗಂ ಜಿನಜನನಿಯ ಮುಂದಿಟ್ಟು ದಿವ್ಯಾಂಬರಾಲಂ
ಕರಣ ಸ್ರಗ್ರಾಜಿಯಿಂ ಪೂಜಿಸಿ ಗುರುಜನಮಂ ರಾಗದಿಂ ದೇವರಾಜಂ ೨೮

ಆಗಳಾ ತೀರ್ಥಂಕರ ಗುರುಗಳ್ಗೆ ಜನ್ಮಾಭಿಷೇಕಕಲ್ಯಾಣಮುಮಂ ಶ್ರೀಮದಜಿತ ನಾಮಕರಣಮುಮನಱಿಪಿ ಜಿತಶತ್ರುಮಹಾರಾಜನಾ ರಾಜಮಂದಿರದ ಮುಂದಣ ಲಕ್ಷ್ಮೀಮಂಟಪದ ನಡುವಣ ಮಣಿಮಯೋತ್ತುಂಗ ಸಿಂಹಾಸನದ ಮೇಲೆ ಬಾಲಾರ್ಕನುದಯಂಗೆಯ್ದಂತಿರ್ದ ಬಾಲಾರ್ಕಸನ್ನಿಭನಂ ಪೂರ್ವಾಭಿಮುಖನಾಗಿ[4]ರಿಸಿ ಪರಮೋತ್ಸವಂ ಮಾಡಿ[4]

ದಿವಿಜಮನುಜವಾದ್ಯಂ ದೇವಮಾನುಷ್ಯ ಗೀತಾ
ರವಮಮರ ಮನುಷ್ಯ ಪ್ರೇಯಸೀನೃತ್ಯಮೆತ್ತಂ
ಸವನಿಸೆ ಜಿತಶತ್ರುಕ್ಷತ್ರಿಯಾವಾಸದೊಳ್ ವಾ
ಸವನಿನೆಸೆದುದಾಗಳ್ ಮತ್ತಮಾನಂದನೃತ್ಯಂ ೨೯

1 ದೊಳ್ (ಗಜ) 2 ಜಾಂ (ಗಚಜ) 3 ಇಲ್ಲ (ಗಚಜ) 4 ಸಿ (ಗಚಜ)

ಅಮರೇಂದ್ರಂ ಸಂತಾನಕ
ನಮೇರು ಮಂದಾರ ಪಾರಿಜಾತಾದಿ ಸುರ
ದ್ರುಮಪುಷ್ಪಪ್ರಕರದೆ ರಂ
ಗಮಧ್ಯದೊಳ್ ಮಾ[1]ಡಿ[1] ಮುಂದೆ ಪುಷ್ಪಾಂಜಳಿಯಂ ೩೦

ಆಗಳ್ ನಾಟ್ಯವಿಧಿಯಂ ನಿರ್ವರ್ತಿಸಿ ಶೃಂಗಾರಾದಿಗಳಪ್ಪೊಂಬತ್ತುಂ ರಸಂಗಳು ಮನೆಂಟುಂ ಸ್ಥಾಯಿಭಾವಕಂಗಳುಮಂ ಮೂಱವತ್ತುಮೂಱು ಸಂಚಾ[2]ರಿಕೆ[2]ಗಳು ಮನೆಂಟು ಸಾತ್ವಿಕಭಾವಂಗಳುಮನಾಂಗಿಕ ಸಾತ್ವಿಕ ವಾಚಿಕಾಹಾರ್ಯಕಮೆಂಬ ನಾಲ್ಕುಭಿನಯಮುಮಂ ಲೋಕಧರ್ಮಿ ನಾಟ್ಯಧರ್ಮಿಯೆಂಬೆರಡುಂ ಧರ್ಮಿಯುಮಂ ಭಾರತಿಯುಂ ಸಾ[3]ತ್ವತಿ[3]ಯುಂ ಕೈ[4]ಶಿ[4]ಕಿಯುಮಾರಭಟಿಯುಮೆಂಬ ನಾಲ್ಕುಂ ವೃತ್ತಿಯುಮಂ [5]ಮ[5]ನಾವತಿಯುಂ ದಾಕ್ಷಿಣಾತ್ಯೆಯುಂ ಪಾಂಚಾಲಿಯುಂ [6]ಮಾ[6]ದ್ರ ಮಾಗಧಿಯುಮೆಂಬ ನಾಲ್ಕುಂ ವೃತ್ತಿಯುಮಂ ದೇವಸಿದ್ಧಿ ಮಾನುಷಸಿದ್ಧಿಯೆಂಬೆರಡುಂ ಸಿದ್ಧಿಯುಮಂ ಷಡ್ಜ ವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಂಗಳೆಂಬ ಸಪ್ತಸ್ವರಮುಮನಂತು ಸಂಗ್ರಹವಾಕ್ಯದೊಳ್ ಪೇೞ್ದು ಪನ್ನೊಂದಧಿಕಾರದೊಳ್ ನೆಱೆದ ನಾಟಕಮುಂ ಪ್ರಕರಣಮುಂ ಚಾರಣ[7]ಮುಂ ಬಾಣಮುಂ[7] ಸಮವತಾರಣ[8]ಮುಂಡಿಮ[8]ಮುಂ [9]ಈ[9]ಹಾಮೃಗಮುಂ ವ್ಯಾಯೋಗಮುಂ [10]ಸಪಹ[10]ಸನಮುಂ [11]ವೀಧಿ[11]ಯುಮೆಂಬ ದಶರೂಪ ಲಕ್ಷಣಮುಮಂ ಪಾತ್ರಸಂಕ್ರಮಣದೊಳ್ ನೆಱೆಯೆ ತೋಱಿ ಭರ[12]ತದ[12] ಸಾರಸರ್ವಸ್ವಮುಮಂ ನಾಟ್ಯಧರ್ಮದೊಳ್ ಸೌಧರ್ಮ ಕಲ್ಪೇಶ್ವರಂ ಪ್ರತ್ಯಕ್ಷಂ ಮಾಡಿದಾಗಳ್

[13]ಸ್ವರತತ್ರಿ[13]ವಾದ್ಯದೊಳ್ ನೆಗೞ್ದ ಸನ್ನಿ[14]ನಿವಂ[14]ತತಿ [15]ಘೇರಿ ಘೇರಿ[15]ಮಾ
ಯ್ಗ್ರಿಗಮುಮಂ ಮಘೂರುಗಮ[16]ಕ್ರೆಂ[16]ಕಟಕ್ರೆಂಪಮಪತ್ರಕುತ್ರರುಃ
ಸರಿಪಮತಂಬಿತಂತತಿವಿಕುದ್ರಕ ಕುದ್ರಕಮೆಂಬ ಭೇದದೊಳ್
ಪರಿಣತಿ ರಂಜಿಸುತ್ತುಮಿರೆ [17]ನರ್ತಿ[17]ಸಿದರ್ ಪೊಸ ದೇಸೆಕಾರ್ತಿಯರ್ ೩೧

---

1 ಡೆ (ಗಜ) 2 ರಿ (ಕಟ) 3 ತ್ವಿಕೆ (ಕ) ತ್ವಿಕಿ (ಗಚಜ) 4 ತ (ಜ) 5 ಅ (ಗಜ) 6 ಮೋ (ಕಗಜ) 7 ಮುಂ (ಕಗಚಜ) 8 ಮುಮುಮುಂಡಿಕ (ಕಗ) ಮುಮ ಮುಂಡಿಮ (ಚಜ) 9 ಬಾ (ಕಗಜ) 10 ಸಪ್ರಹಾ (ಕಗಚಜ) 11 ಬಿಡಿ (ಕಗಜ) ಬಿಗಿ (ಚ) 12 ತ (ಕಗಜ) 13 ಸರಸ (ಕ) ಸರಸದ (ಟ) 14 ವಂ ರಃ (ಕ) 15 ಘೇಃರಿಗೆ (ಕ) ಘೇರಿತಿಗೆ (ಗ) ಘೇರಿತೀಃಗೆ (ಜ) 16 ತ್ರೆಂ (ಕ) 17 ರಂಜಿ (ಟ)

[1]ಪಳವದ[1]ತಿವಳಯ ಜುಂಕದ
ಮೊಳಸಿನ [2]ಜೇಕಿ[2]ರದ ಸಿವಿಜ ಸಿಪ್ಪಿನ ಲಯದಿಂ
ದೆಳಲದೆ ಕುಣಿದರ್ ಕೆಲಬರ್
ಕಳರು[3]ತ್ರಿಗಳ್[3] ತಾಳವಾಗೆ ಕುಣಿದರ್ ಕೆಲಬರ್ ೩೬

ಅಂತು ವಾದಕನುಪವಾದನಿನೆಸೆವ ಹೃದ್ಯವಾದ್ಯವಿಶೇಷಂಗಳೊಳ್ ನೆಗಟ್ಟ ಸಮಪಾಣಿಯುಮಧಃಪಾಣಿಯುಮುಪರಿಪಾಣಿಯುಮೆಂಬ ಪಾಣಿತ್ರಯದೊಳಂ ದ್ರುತ ವಿಲಂಬಿತ ಮಧ್ಯಮಮೆಂಬ ಲಯತ್ರಯದೊಳಂ ಸಮಯ ಶ್ರೋತಾವಹೆಯುಂ ಗೋಪುಚ್ಛೆಯುಮೆಂಬ ಶ್ರಿತಯದೊಳಂ ಚಿತ್ರೆ ದಕ್ಷಿಣೆ ಕಾರ್ತಿಕೆಯೆಂಬ ವೃತ್ತಿತ್ರಯ ದೊಳಂ ಗುರುಸಂಚಯ ಲಘುಸಂಚಯ ಗುರುಲಘುಸಂಚಯಮೆಂಬ ಸಂಚ ಯತ್ರಯದೊಳಂ ಸಮಪ್ರಹಾರ ವಿಷಮಪ್ರಹಾರ ಸಮವಿಷಮಪ್ರಹಾರಮೆಂಬ ಪ್ರಹಾ ರತ್ರಯದೊಳಂ ಮತ್ತಂ

ಅಕ್ಷರಸಮಮಂಗಸಮಂ ತಾಳಸಮಂ ಯತಿಸ[4]ಮಂ[4] ಲಯಸಮಂ ಚ
ನ್ಯಾಸಸಮಂ ಪಾದಸ[5]ಮಂ ಪಾಣಿಸಮಂ[5] ವಾದ್ಯಮಷ್ಟವಿಧಂ

ಎಂಬ ವಾದ್ಯಕ್ಕುಪಗತವಾಗೆ ಮೂವತ್ತಾಱು ದೃಷ್ಟಿವಿಕಲ್ಪದೊಳಂ ಪದಿಮೂಱು ಶಿರೋವಿನ್ಯಾಸದೊಳಂ ಏೞು ಭ್ರೂರೇಚಿತದೊಳಂ ಮೂಱುಂ ಗುಣಾಸಿಯೊಳಂ ಮೂಱುಂ ನಾಸಿಕಾಸ್ಫುರಿತದೊಳಂ ಮೂಱುಮಧರಸ್ಪಂದದೊಳಂ ಮೂಱು [6]ಚು[6]ಬುಕವಿಕಾರನೊಳಮೊಂಬತ್ತು ಗ್ರೀವಾಭಂಗಿಯೊಳಮಱುವತ್ತುನಾಲ್ಕು ಮಸ್ತಕ ಕ್ರಿಯೆಯೊಳಮೈದು ಪಾರ್ಶ್ವವಿಧಿಯೊಳಂ ಮೂಱುಮುದರ ಕರ್ಮದೊಳಮೈದು ಕಟೀವಿಧಾನದೊಳಮೈದು ಮೂಱು ವಿಲಸಿತದೊಳಮೈದುಂ ಪದಸಂಚಾರದೊಳ್ ನೆಱೆದು

ಪೊಸತೆನಿಪ ಸು[7]ರ[7]ಗೆವೆಕ್ಕಣ
ಮೆಸೆದಿರೆ ಕಡುಪೊಸತು ಬಣ್ಣರಸಮೆಸೆದಿರೆ ನಿ
ಪ್ಪೊಸತೆನಿಪ ದೇಸೆ ಮಾಸಱ
ಮೆಸೆದಿರೆ ಸಭೆ ಮೆಚ್ಚೆ ಪೊಚ್ಚಪೊಸತಾಯ್ತು ರಸಂ ೩೭

1 ಪವಳದ (ಗಚಜ) 2 ಜೀಕ (ಗಜ) 3 ತಿಗೆಳೆ (ಕ) ತಿ (ಚ) 4 ಮಂ ಯತಿಸಮ ಯತಿಸಮಂ (ಗಚಜ) 5 ಮಂ (ಕ) 6 ಚಿ (ಕಟ) 7 ರಿ (ಕಗಜ)

ನೋಡುವನಜಿತಜಿನೇಶ್ವರ
ನಾಡುವನಮರೇಂದ್ರನಮರವಾದ್ಯಂ ಲಯಮಂ
ಕೂಡುವುದಮರರ ಗಾಣರ್
ಪಾಡುವರೆನೆ ಸುಪಥಮಕ್ಕುಮಕ್ಕುಮೆ ಕುಪಥಂ ೩೪

ಕಡುಚೆಲ್ವೆಯರೆರ್ದಾಡಿದ
ರೊಡನಾಡುವರ ಕೇರಿಯಾದುದುವೆಂಬೀ
ನುಡಿ ದಿಟಕೆ ನಾಟ್ಯದೋಜೆಗೆ
ಬಿಡೌಜನಾಡಿದೊಡೆ ದಿವಿಜೆಯರ್ ಮಾಣ್ದಪರೇ ೩೫

ವಿವಿಧ ಮಣಿಕಿಂಕಿಣೀಗಣ
ರವಮೆಸೆವಿನಮಮರರಾಜನೊಡನೊಡನೆ ಮಹೋ
ತ್ಸವದಿಂ ತಾಳಲಯಕ್ರಮ
ಕೆ ವಿಚಿತ್ರಂ ಮೆಟ್ಟಿಸುತ್ತುಮಮರಗಜೇಂದ್ರಂ ೩೬

ಎಮೆಯಿಕ್ಕದ ಸುರವಧುವರ
ನೆಮೆಯಿಕ್ಕದೆ ನೋಡಿ ತಮಗಮನಿತುಂ ಭಾವಂ
ಸಮನಿಸಿದಂತಿರ್ದುದು ನೃಪ
ಸಮಿತಿ ಜಗತ್ರಿತಯ ತಿಲಕನಾಸ್ಥಾಯಿಕೆಯೊಳ್ ೩೭

ಅವನಿಪರುಂ ಕೌತುಕದಿಂ
ದವನೀಶಾನೇಂದ್ರನೆನಿಸಿ ಸೌಧರ್ಮೇಂದ್ರಂ
ದಿವಿಜೇಂದ್ರರವರ್ಗಳಿಂದೆಂ
ದವಲೋಕಿಸುವರ್ ಸುರೇಂದ್ರವೃಂದಾರಕರಂ ೩೮

ಚಂದ್ರ[1]ನವನಿ[1]ನನವಂ ಧರ
ಣೇಂದ್ರನವಂ ಸಕಲ ಲೋಕಪಾ[2]ಲ[2]ರವರ್ ದೈ
ತ್ಯೇಂದ್ರರವರೆಂದು [3]ಸಭೆಗೆ[3] ನ
ರೇಂದ್ರರ್ಕಳ್ [4]ಸುಟ್ಟಿ[4] ತೋಱಿದರ್ ಪೆಸರ್ವೆಸರೊಳ್ ೩೯

---

1 ನಿ (ಕ) 2 ಲಕ (ಗಚಜ) 3 ಜೆಸಗೆ (ಚ) 4 ಮುಟ್ಟಿ (ಗಚಜ)

ರಸಮೊಸರ್ವರ್ಣನ್ನಿಗಂ ಮಿಱುಗು ಕಿತ್ತು ಪೊಗರ್ ಗಮಕಂ [1]ಕೊ[1]ದಳ್ ಪೊದ
ಱ್ದುಸೆವ ನಯಂ ಬೆಡಂಗು ಬಿಗಿಪೊಟ್ಟಜೆ ಕೂಂಕು ಪವಣ್ ಪ್ರಯೋಗಮೇ
ನೆಸೆದುವೊ ಪೇಱಿ[2]ಮೆಂಬಿನೆಗ[2]ಮಿಂ[2]ಗೊರಲೊಳ್ಕೊಳೆ ಪಾಡಿಯಾಡಿ ರಂ
ಜಿಸಿತೊ ಸಭಾಜನಂಗಳ ಮನಂಗಳನಾ ದಿವಿಜಾಂಗನಾಜನಂ ೪೦

ತಡದಡವಾರದೆ ಗತಿಯೊಳ್
ತೊಡರದೆ ರಂಜಿಸಿದರಮರ ಲಂಜಿಕೆಯರ್ ಜಾ
ಣ್ಗಡದಾಡಿ ಮೊದಲ ತಾಣದೊ
ಳೆಡೆಯೊತ್ತಿನೊಳೆಸೆವ ಕಡೆಯ ತಾಳದ ಯತಿಯೊಳ್ ೪೧

ರಂಜಿಸುವ ಹಂಸರವಮುಂ
ರಂಜಿಸದಿನ್ನಿದಱ ಕೆಲದೊಳೆಂಬಿನೆಗಮದೇಂ
ಲಂಜಿಕೆಯರ ಗುಂಜನ್ಮಣಿ
ಪುಂಜೀರಕ ಮಂಜುಸಿಂಜಿತಂ ರಂಜಿಸಿತೋ ೪೨

ಲುಳಿತವಳಿತ ಮುಗ್ಧಸ್ನಿಗ್ಧಲೋಲಾಕ್ಷಿನೀಲೋ
ತ್ಪಳದ ಪೊಳೆಪು ಗೆಲ್ದತ್ತೆಂಬಿನಂ ಪುಷ್ಪಬಾಣಾ
ವಳಿಯು ಪೊಳೆಪನಿಂದ್ರಸ್ತ್ರೀಯರಾನಂದದಿಂ ಗೊಂ
ದಳದೆ ಕುಣಿದು ಲೀಲಾನೃತ್ಯದಿಂ ಕಣ್ಗೆವಂದರ್ ೪೩

ಆಟಂ ಮನಸಿಜನಂಬೆ
[3]ದಾ[3]ಟಂ ನಡೆನೋಟ್ಪ ಜನದ ಮನದ[4]ಳ್ಕಾಟಂ[4]
ಪಾಟಂ ಕಾಮುಕ[5]ಗಣಮೃಗ[5]
ಕೋಟಿಗೆ ಮನಸಿಜನ ಗೋಱಿಗಾಡುವ ಪಾಟಂ ೪೪

ಕಡುಚೆಲ್ವು ಗಡಂ ಜವ್ವನೆ
ಗಡಮಾಡಲ್ ಪಾಡಲ್[6]ವಳ್[6] ಬಲ್ಲಳ್ ಗಡಮಾ

---

1 ತೊ (ಚ) 2 ಮೀಂ (ಕಗ) ಮಾಂ (ಜ) 3 ದೋ (ಗಜ) 4 ಳ್ಯ (ಗಜ) ಳ್ದ (ಚ) 5 ಮೃಗಗಣ (ಗಜ) ಜನಮೃಗ (ಟ) 6 ಳವೆ (ಗಚಜ)

ರ್ಪಡೆವರೊ ಕಣ್ಣಿಂ ಗತಿಯುಂ
ಬಡೆದವಳಂ ಸ್ತ್ರೀಯರೊಳಗವಳ್ ಸ್ತ್ರೀರತ್ನಂ ೪೫

ನೇತ್ರೋನ್ಮೀಲನಿಮೀಲನ
ಮಾತ್ರದೆ ನರಸುರವಿಭೇದಮಾಯ್ತಲ್ಲದೊಡಾ
ಪಾತ್ರಂಗಳಱಿಯಲಾಗೆನೆ
ಸುತ್ರಾಮನೆ ಸೂತ್ರಧಾರನಾಗಾಡಿಸಿದಂ ೪೬

ಅಂತು ಮಾರ್ಗದೇಸೆಯೆಂಬಿರ್ತೆಱದೊಳಂ ತಾಂಡವಲಾಸ್ಯಮೆಂಬೆರಡುಂ ವಿಕಲ್ಪದೊಳಂ ತಾನಾಡುತ್ತುಮಾಡಿಸುತ್ತುಂ ರಂಜಿಸೆ

ಮನಮೊಸೆದು ಗೀತವಾದಿತ
ಮನಂತ ಫಲಮೆಂದುಮಾಡಿ ಸಂಗೀತಕಮಂ
ಜಿನಪತಿಯ ಮುಂದೆ ಮೆಱೆದಂ
ಜನಕ್ಕೆ ಧರ್ಮಾನುರಾಗಮಂ ಸೌಧರ್ಮಂ ೪೭

ಅಮರಪತಿ ಪಂಚಕಲ್ಯಾ
ಣಮಹಿಮೆಯಂ ಚಿತ್ತಶುದ್ಧಿ[1]ಯಿಂ[1] ಮಾಡಿ ಜಿನೋ
ತ್ತಮರ್ಗೆ ಲಘುಕರ್ಮನಾದವೊ
ನಮಳಿನ ಧರ್ಮಾನುರಾಗಿಗಾಗದುದುಂಟೇ ೪೮

[2]ಅದುಕಾರಣಂ[2]

ಹರಿ ತನ್ನ ದಕ್ಷಿಣೇಂದ್ರ
ರ್ವೆರಸು ಶಚೀದೇವಿವೆರಸು ಲೋಕೇಶಜನಂ
ಬೆರಸು ದಿವದಿಂದವಿಲ್ಲಿಗೆ
ವರಲೊಡಮಾ ಭವದೊ[3]ಳಂತೆ[3] ಮುಕ್ತಿಗೆ ಸಲ್ವರ್ ೪೯

1 ಯಂ (ಕಜ) 2 ಇಲ್ಲ (ಜ) 3 ಳಂದು (ಜ) ಳತ್ತೆ (ಟ)

ಎರಡೆವಲಂ ಮುನ್ನಂ ಸಾ
ಸಿರ ಕಣ್ಗಳ್ ಬೞಿಕಮಾದುದಿಂದ್ರಂಗಾ ಕ
ಣ್ಣೆರಡಱೊಳೆ ನೋಡಿ ತಣಿಯದೆ
ಪರಮನ ರೂಪಂ ಸಹಸ್ರಲೋಚನನಾದಂ ೫೦

ನೆಱೆಯೆ ಪೊಗೞಲ್ಕೆ ವಾಕ್ಪತಿ
ನೆಱೆಯಂ ಸುರಪತಿಯ ನೃತ್ಯಮಂ ಪೆಱನಾವಂ
ನೆಱೆವನೆನೆ ರಂಗಮಧ್ಯದೊ
ಳೞಿಪಿದನಾ ನಾಟ್ಯಧರ್ಮಮಂ ಸೌಧರ್ಮಂ ೫೧

ಸುರಪತಿಯಾಟಮನೆಱಗುವ
ಸುರಕೋಟಿಯನೆಯ್ದೆ ನೋಡಿ ನೋಡಿದನಾತ
ನ್ನೆರಡುಂ [1]ಮುಯ್ವಂ[1]ಗಳನೀ
ದೊರೆಯ ಮಗಂಬಡೆದನೆಂದು ಜಿತಶತ್ರುನೃಪಂ ೫೨

ಜಾತಪ್ರಿಯನಾತಂ ತನು
ಜಾತನೆ ತಾನಾಗೆ ತನ್ನ ಕಣ್ಗಂ ಮನಕಂ
ಜಾತಕುತೂಹಲ ನಾನಾ
ದ್ಯೋತಿಶಯಮನರಸನಚಲದಂತಿರ ನೋೞ್ಪಂ ೫೩

ಎವೆ ಮಱೆಯಾದಪುದಿಕ್ಕುವ
ಚಮರರುಹಂ ತನ್ನ ಕಣ್ಗೆ ಮಱೆಯಾದಪು[2]ದೆಂ[2]
ದೆವೆಯಿಕ್ಕದೆ ಚಾಮರಮಿ
ಕ್ಕೆ ಮಾಣ್ಬುದಂ ಪಾರ್ದುಪಾರ್ದುಮಗನನೆ ನೋೞ್ಪಂ ೫೪

ಉಂಗುಟಮನೆಳವಿ ಕರಚರ
ಣಂಗಳನಿನಿಸೆಳವಿ ಮೆಲ್ಲಮೆಲ್ಲನೆ ಲೀಲಾ
ಪಾಂಗದೊಳೆ ನೋಡಿದಳ್ರಾ
ಜಾಂಗನೆ ನೃಪಸುತನ ವದನಚಂದ್ರಾಕೃತಿಯಂ ೫೫

---

1 ಮುಯ್ದಂ (ಕ) ಮುಯ್ವಂ (ಜ) ಮುಂಗೈ (ಟ)   2 ವೆಂ. (ಕ)

ಸುತ್ತಣ ಸಭೆ ಕಣ್ಣೞಕವೆ
ಗೆತ್ತುಪಲರ್ ನೆಱೆದು ನೋಡೆ ನೃಪಸತಿ ಮನದೊಳ್
[1]ಕೂರ್ತು: [ಪಿರಿಯಲ್][1] ಬಗೆದು ಜಿ
ನೋತ್ತಮನೆಂದಂಜಿ ಮಾಣ್ದಳಾಸ್ಥಾಯಿಕೆಯೊಳ್ ೫೬

ತೊಱೆದ ಕುಚಕಲಶದಿಂದಂ
ಬಿಱವಿಟ್ಟೊಗೆತಪ್ಪ ಪಾಲಧಾರೆಯಿನಾಗಳ್
ಪರಮೇಶ್ವರಂಗೆ ಮತ್ತಂ
ಪರಮೇಶ್ವರಿ ಮಾಡುವಂತುಟಾಯ್ತಭಿಷವಮಂ ೫೭

ಆಗಳ್ ಸೌಧರ್ಮನುಪಸಂಹೃತನಾಟ್ಯಾವಸರನಾಗಿ

ಬಗೆಯಂ ಪೊಗೞಲ್ ಪರಮನ
ನಗಲ್ದು ಪೋಗಲ್ಕಮಾಱನಂತನಂತೆ ಮನ
ಕ್ಕುಗಿಬಗಿಯಾಗಿರೆ ಪೊಗೞಲ್
ಬಗೆದು ಮನಂ ಮಗುಳ್ದು ಮಗುಳೆ ನೋಡಿದನಿಂದ್ರಂ ೫೮

ಅಂತು ನೋಡಿ

ಪರಮನ ಸೇವಾಸುಖದೊಳ್
ದೊರೆಗೆ ವರಲ್ ನೆಱೆಯದಮರಲೋಕದ ಸುಖಮಿ
ನ್ನಿರುಳುಂ ಪಗಲುಂ ದೇವನ
ಚರಣಮನೋಲಗಿಸುತಿರ್ಪೆನೆನಗಿದುವೆ ಸುಖಂ ೫೯

ಎಂಬಿನೆಗಂ

ಸುರಮಂತ್ರಿಗಳದನಱಿದೀ
ಪರಮನ ಕಲ್ಯಾಣಮಿನ್ನುಮಿರ್ದುವು ಮತ್ತಂ

1 ತೂಪತ್ಕರಿಸಲ್ಕೆ (ಕ) ಕೂರ್ತು: ತೂಪಕ್ಕರಿಸಲ್ಕೆ (ಗಜಜ) ಸತ್ಕರಿಸಲ್ಕೆ...(ಟ) ವಂ2 (ಕಟ)

ಬರವೇೞ್ಪುದು ನಡೆಯೆನೆ ಹೃ
ತ್ಸರೋಜದೊಳ್ ತಾಳ್ದಿನಿಂದನಜಿತನನಿಂದ್ರಂ ೬೦

ಅಂತು ಚತುರ್ನಿಕಾಯಾಮರಜನಂ ಬೆರ[1]ಸುಮ[1]ಮರ ರಾಜನಮರನಗರಿಗೆ ಪೋದನಿತ್ತಲ್

ಕುಳಿಶಿ ಜಿನಮಧ್ಯಮಾಂಗುಲಿ
ಯೊಳಮೃತಸಂಕ್ರಮಣಮಾಗೆ ಮಾಡಿದೊಡೆ ನಿಜಾಂ
ಗುಳಿಯನೆ ಸೇವಿಸಬಗೆದಂ
[2]ಗಳ[ಮಾ][2]ಜಿತಶತ್ರುಭವನದೊಳ್ ನತಭುವನಂ ೬೧

[3][ಅಳರೆಲೆ][3] ಪೊಂಗುನೂಲ್ ಪುಲಿಯುಗುರ್ ಮಣಿಕಿಂಕಿಣಿಗೆಜ್ಜೆ ರಕ್ಕೆಕುಂ
ಡಲಯುಗ ಮುತ್ತು ಕಾಲ್ಗಡಗಮುಂದುಗೆ ಕಂಕಣ ಕಿಂಕಿಣೀಗಣಂ
ಕಲಮಣಿ ನೂಪುರಂ ತನಗೊಡಂಬಡೆ ಗಾಡಿಗೆ ಲೋಳೆವಾಯ್ ಮನಂ
ಗೊಳೆ ಭುವನೈಕಮಂಡನನೊಳೇನೆಸೆದಿರ್ದುದೊ ಬಾಲಮಂಡನಂ ೬೨

[4]ಜಿನತನು[4]ಶೋಭೆ ಗಡ ನಿರಂ
ಜನನೊಳ್ ತಾ ರಕ್ಕೆ ಗಡ ಜಗದ್ರಕ್ಷಕನೊಳ್
[5]ಘನತರ ಕೆಂಜೆ[5]ಡೆ ಗಡ [6]ಜೀ
ವ[6]ನೊಳ್ ಮಣಿ[7]ರುಚಿ[7]ಗಡ ತೀರ್ಥಚಿಂತಾಮಣಿಯೊಳ್ ೬೩

ಇದು ಧರ್ಮಾಂಕುರಮೆಂಬಿನಂ ವದನಪದ್ಮಾವಾಸ[8]ವಾ[8]ದೇವಿಗಿಂ
ತಿದು ಪುಣ್ಯಾಂಕುರಮೆಂಬಿನಂ ವದನದೊಳ್ ದಂತಾಂಕುರಂ ರೂಪುದೋ
ಱಿದುವವ್ಯಕ್ತವದಸ್ವಭಾವಮಧುರಂ ಮೇಣ್ ತೋರ್ಪುದುಂ ತನ್ನ ದೋ
ಷದೊಳಂ ತೋಱಿವೆ ತನ್ನ ದೋಷಮನದೇಂ ದೇವಂ ವಿಶುದ್ಧಾತ್ಮನೋ ೬೪

1 ಸ (ಕ) 2 ಗಳ (ಕಗಚಜ)...(ಟ) 3 ಅರಳಲೆ (ಕಗಚಜಟತ) 4 ಜನನುತ (ಕಟ) 5 ಕೆಂ (ಕಟ) 6 ಜಿನ (ಕಟ) 7 ಮಂಜೀರಕ ರುಚಿ (ಕಟ) 8 ದಾ (ಕಚ)

ನೆಗೞ್ದಿರ್ಧಮಾಗಧೀಯಂ
ನೆಗೞ್ದ ಜಿ[1]ತಾ[1]ನನದೊಳಾಗಳಸ್ಫುಟವಚನಂ
ನೆಗೞ್ದಿತ್ತ್ರ್ಯಕ್ಷಾತ್ಕ್ಷರ
ನಿಗೂಢ ಪರಿಜಪನವಿಧಿಗದೇಂ ಚೆಲ್ವಾಯ್ತೋ ೬೫

ಲಲಿತಾಂಗು[2]ಲಿ ಭಾ[2]ಸುರ [3]ಭ[3]
ದ್ರ ಲಕ್ಷಣಾಲಂಕೃತಂ ಚತುರ್ದಂತಮದೇಂ
ಗೆಲೆವಂದುದೊ ವಾಸವಗಜ
ವಿಲಾಸಮಂ ಬಾಲಕಾಲದಜಿತವಿಲಾಸಂ ೬೬

ಇದು ಚೋದ್ಯಮೆನಗೆ ಪೇೞ್ದಪೆ
ನದೆಂತು ಪೇೞ[2]ಂಬ ಸಕಲ ವಿದ್ಯೆಗಳುಮನೋ
ದದೆ ಕಲ್ತಂ ಜಗಮಂ ನೋ
ಡದೆ ಕಾಣ್ಬಂ ಬಗೆಯುದಱ[2]ವನೆಲ್ಲಮನಜಿತಂ ೬೭

ದಿನಕರನುದಯಿಸಲೊಡಮೇಂ
ದಿನದೀಪ್ತಿಗಳೊಡನೆ ಬಂದು ನೆಲಸುವವೊಲ್ ಪ್ರಾ
ಕ್ತನ ಜನ್ಮವಿದ್ಯೆಗಳ್ ಬಂ
ದನಿತುಂ ನೆಲಸಿದವು [4]ಸಕಲ[4] ವಿದ್ಯಾನಿಧಿಯೊಳ್ ೬೮

ಅವಧಿಮತಿಶ್ರುತಬೋಧಂ
ಗವಗತತತ್ವಂಗೆ ಗುರುಗೆ ವಿದ್ಯಾಗುರು ಸಂ
ಭವಿಸಂ ದೀಕ್ಷಾಗುರು ಸಂ
ಭವಿಸನುಮೆನೆ ತನಗೆ ತಾನೆ ಗುರುವಾಗಿರ್ದಂ ೬೯

ಜೀವಾದಿ ಪದಾರ್ಥಂಗಳೊ
ಳಾವುದು ಸಂದಿಗ್ಧಮಾದೊಡಂ ಬಲಗೊಳೆ ಭ
ವ್ಯಾವಳಿಗೆ ವಿದಳಮುಕ್ಕುಂ
ದೇವನನೀ ತೀರ್ಥಕರನ ಪುಣ್ಯಮಗಣ್ಯಂ ೭೦

1 ನಾ (ಗಜ) 2 ಲಿ (ಕ) ಲಿಯಿಂ (ಟ) 3 ಚಂ (ಜ) 4 ಕಳೆಸು (ಗಜ)

ಜಿನವೃಂದಾರಕನಿಂದ್ರವಂದಿತ ಪದಾಂಭೋಜದ್ವಯೋದ್ಭಾಸಿ ಮ
ಜ್ಜನಪೀಠೀಕೃತ ಮಂದರಾಚಲನಯೋಧ್ಯಾಮಂಡನಂ ಧರ್ಮನಂ
ದನ ಕಲ್ಪದ್ರುಮನಂಗಜನ್ಮಮದವನ್ಮಾತಂಗಸಿಂಹಂ ಜಗ
ಜ್ಜನಕಂ ಬಂಧುಜನಕ್ಕಮಾದನಜಿತಂ ಸಂಪೂರ್ಣ ಪುಣ್ಯಾನಹಂ ೭೧

ದಾರಕ[1]ರೂಪದ[1] ಜಿನವೃಂ
ದಾರಕನೊಡನೊಡನೆ ಬಾಲಕೇಳಿಗಳಂ ವೃಂ
ದಾರಕರೆ ಮಾಡಿ ದುರಿತವಿ
ದಾರಕನ ಮನಕ್ಕೆ ಮಾಡಿದರ್ ಸಂತಸಮಂ ೭೨

ಮಣಿನೂಪುರಯುಗಮಣಿಕಿಂ
ಕಿಣೀರವಂ ನೆಗಟಿ[3] ಸಕಲ ಲೋಕೈಕಶಿಖಾ
ಮಣಿಯೆನಿಸಿದಜಿತನಾಥಂ
ಮಣಿಕುಟ್ಟಿಮಭೂಮಿಯೊಳ್ ಮನಂಗೊಳೆ ನಡೆ[2]ದಂ[2] ೭೩

ಕೊಡೆವಿಡಿದಿರ್ಪದಿರೊಳೆ ಕ
ನ್ನಡಿವಿಡಿದಿರ್ಪಜಿತತೀರ್ಥಕ[3]ರ್ತೃ[3]ಗೆ ಕುಂಚಂ
ಬಿಡಿದಿರ್ಪ ಕೆಲದೊಳಡಪಂ
ಬಿಡಿದರ್ಪ ಸುರೇಂದ್ರದಾರಕರ್ ಸೊಗಯಿಸಿದರ್ ೭೪

ಆ ದಿವದಿಂದಮನಾರತ
ಮಾ ದಿವಿಜಾಧಿಪನೆ ಬೆಸಸೆ ಪೂವಂ ದೇವಂ
ಗಾದರದಿನಡಕಿ ತಲೆ ತರ
ಟಾದುವು ಶತಧಾರಿಯಾಗೆ ಬರೆ ಸುರವಟುಕರ್ ೭೫

[4]ಉಸುರೆ[4] ದಿವಿಜೇಶ್ವರಂ ಪರಿ
ವೆಸದಮರರ್ ದಾದಿಕಾಱಿವೆಸದಮರರದೇಂ

---

1 ಪೊರದೆ (ಕಟ) 2 ವಂ (ಗಜ) 3 ತರ್ಪ (ಟತ) 4 ಅಸುರ (ಕಟ) ಅ ಸುರರೆ (ಚ)

ಬೆಸ[1]ಗಲಿಗಳ್[1] ಬರ್ಪರೊ ಮಾ
ನಸವೇಗರ್ ಪವನವೇಗರಿರುಳುಂ ಪಗಲುಂ ೭೬

ಸುರಪತಿಯೆಱ[2]ವೆಸನರ್ಹ
ತ್ಪರಮೇಶ್ವರಪಾದಸೇವೆ ಪಾಲಾ [2]ಅಮು[2]ರ್ದಾ
ಪಿರಿದು ಗಡಿದೆನಿಸಿ ತಂದರ್
ಸುರವಟುಕರ್ ಪುಲ್ಲವಟುಕರಂತಿರೆ ಪೂವಂ ೭೭

ಇವು ಜಿತಶತ್ರುಗೆ ಜಿನಗುರು
ಗಿವು ಜಿನಜನನಿಗೆ ಜಿನಂಗಿವೆಂದಂದತ್ಯು
ತ್ಸವದಿಂ ಕಲ್ಪೇಂದ್ರರ್ ಕ
ಲ್ಪವೃಕ್ಷ ಸಂಭವ ಫಲಪ್ರಸೂನಾಂಬರಮಂ ೭೮

ಠರವೇಱಿ ಮಂದಾರಸಂತಾನಕ ಸುರತರುದಾಮಂಗಳಂ ಪಣ್ಗಳಂ ಪೋ
ತರವೇಱಿ ದಿವ್ಯಾಂಬರಾಲೇಪನ ಮೃಗಮದಗಂಧಂಗಳಂ ಧೂಪಮಂ ನೀಂ
ತರವೇಱಿ ಕೇಯೂರಹಾರ ಪ್ರಗುಣಮಣಿವಿಭೂಷಾವಿಶೇಷಂಗಳಂ ಜೆ
ಚ್ಚರವೆಂದಟ್ಟುತ್ತುಮಿರ್ಪರ್ಳ್ ತರಿಸಿ ಶಚಿಮಹಾದೇವಿ ದೇವಂಗೆ ನಿಚ್ಚಂ ೭೯

ತ್ರಿದಶಕುಮಾರರ್ ನೆತ್ತದ
ಚದುರಂಗದ ಮುಟ್ಟನಱ್ತಿಯಿಂ ಮ[3]ರವಟ್ಟಂ[3]
ಪದಪೊದವೆ ಸಗ್ಗದಿಂ ತಂ
[4]ದದ[4] ಕೆಲಗೆಲ[5]ದಲ್ಲಿಯಾ[5]ಡುವರ್ ಜಿನಪತಿಯಾ ೮೦

ಕರಿ ಮಹಿಷ ಮೇಷಮಲ್ಲ
ಸ್ವರೂಪದಿಂ ತಮಗೆ ತಾಮೆ ಪೋಱ[3] ಸುರರ್ಕಳ್
ಪರಮನ ಮನಕ್ಕವೊಂದುಂ
ಬರಲಾಱವೆ ವೀತರಾಗನಪ್ಪುದಱಿಂದಂ ೮೧

---

1 ಸಲೀ (ಗಜ) 2 ಮ (ಕ) ಗಮ (ಗಟಜ) 3 ದವಟ್ಟಿಲ್ (ಗಜ) 4 ದು ತಂದು (ಕಚಟತ) 5 ದೊಳಾ (ಕಚಟತ)

ಆಱಿ[5]ಯೆಂ ಸೌಧರ್ಮೇಂದ್ರನ
ತೆಱನನದೇನೆನ್ನ ದಾನಚಿಂತಾಮಣಿಯಂ
ಮಱಿಸಿದಸೋಲಗಿಪುದೆ ತನ
ಗಱದೊಳ್ ನೆಗಟ್ಟಿದೆ ವಿನೋದಮಿದನೇವೊಗಟಿಪ್ಪೆಂ ೮೨

ಬವಣಿಗೆ ಜಿನೇಂದ್ರಪೂಜೋ
ತ್ಸವದೊಳವೊಡ್ಡೋಲಗಂ ಜಿನಾಸ್ಥಾನದೊಳಾ
ದಿವಿಜೇಂದ್ರಂಗಾದುದು ಗೀ
ತ ವಾದ್ಯ ನೃತ್ಯಪ್ರಸಂಗಮಜಿತನ ಕೆಲದೊಳ್ ೮೩

ಎಂತೆಂಬ ದೇವಭಕ್ತಿಯು
ದೆಂತೆಂಬಧಿಗಮದ ತೇಜಮೆಂತೆಂಬ ವಿನೋ
ದಾಂತರ[1]ಮೆನೆ ದೇವನನೆ ನಿ
ರಂತರಮು[1]ಮರಾಧಿರಾಜನಾರಾಧಿಸುವಂ ೮೪

ಏನೆಂಬ ಜಿನನ ಸೇವನ
ಮೇನೆಂಬನುರಾಗ[2]ಮೇನದೇನೇ[2]ನೆಂಬ ಜಿ
ನಾನುಷ್ಠಾನುಕ್ರ[3]ಮಮುಮು[3]
ಮೇನೇನಂ ಬಣ್ಣಿಪೆಂ ಸುಧರ್ಮಾಧಿಪನಂ ೮೫

ನಿನಗಿಂದ್ರಾದಿಗಳಟ್ಟಿದರ್ ತುಡಲುಡಲ್ ಪೂಸಲ್ ಪುಗಲ್ವೇಡ ಮ
ಜ್ಜನಮಾರೋಗಿಸವೇಡ ಕಂದ ಪಸಿದೈ ಬಾಯೆಂದು ತಾಯ್ತಂದೆ ಬಂ
[4]ದನಿ[4]ವಂ ಗೆಯ್ಯೆ ಗುರೂಪರೋಧವಶದಿಂ ಸ್ನಾನಾನ್ನಪಾನಂ ವಿಲೇ
ಪನಮಾಲ್ಯಾದಿಗೆ ತಾನೊಡಂಬಡುವನೇಂ ದೇವಂ ನಿರಾಪೇಕ್ಷನೋ ೮೬

ಪೆಱರಂ ಪೆಱರ್ಗೆ[5]ಯೊಲಿದಾ
ನೆಱಗುವೆನಾ[5]ನೆನ್ನನಣಮೆ ಮುನಿಯಂ ದ್ರವ್ಯ

1 ದೊಳೊಯ್ಯನೊಲಿದೋರಂತಿರದ (ಗಚಜ) 2 ಮೇ (ಕ) 3 ಮು (ಕ)...(ಟ)
4 ಧನ (ಟ) 5 ಱಗುವೆನಾ (ಕ) ಱಗುವೆನಾ (ಟ)

ಕ್ಕೈಱಗನೆಡೆಗುಡನೆ ನಾಲ್ಕುಂ
ತೆಱದ ಕಷಾಯಕ್ಕೆ ಮಂದಮಂದಕಷಾಯಂ ೮೭

ಆ ರಾಜಸುತಂ ಪಸಿದಂ
ನೀರಡಸಿದೆನೆನಗಿವಲ್ತುದ[1]ಲ್ತ್ರೆನ್ನಂ[1]
[2]ಪಾರ್ರೈಸಂ ಪಲವಂ ಮಿಗೆ[2]
[3]ಕೊಱರ್ರೈಸಂ[3] ಕೊಱಗನಬಿಲನೆಬಿಲಂ ಬಬಿಲಂ ೮೮

[4]ಜಂ[4]ಕರಿಸಂ ಕಾತರಿಸಂ
ಮಾಂಕರಿಸಂ ಬೆಕ್ಕಸಂಬಡಂ ಬೆಕ್ಕರಿಸಂ
ಹೂಂಕರಿಸಂ ನಿರ್ವಿನಿಸಂ
ಜೀಂಕರಿಸಂ ಜಿನುಗನವನಿಸಂ ಕೊಕ್ಕರಿಸಂ ೮೯

ಅಳವಳಿಸಂ ಬೆಬ್ಬಳಿಸಂ
ಕಳವಳಿಸಂ ಕನಲನೊನಲನಟ್ಕಿಂ ಬಳ್ಕಂ
ಚಳವಳಿಸಂ ಚಪ್ಪರಿಸಂ
ತಳವಳಿಸಂ ಬೇಸಱಿಅಯ್ದೆ ಬೆಳ್ಮೊಗದಿನಿರಂ ೯೦

ಒಸೆಯಂ ಮುನಿ[5]ಯಂ ಕಿನಿಯಂ[5]
ಕಿಸುಗಣ್ಣಂ ಮಿಳ್ಕಿಗೊಳ್ಳನಾಯುಸದಿಂ ಚಿಂ
ತಿಸನಲಸನಜನಿಸಂ ಭ್ರಾಂ
ತಿಸನಂತಹಮಿಂದ್ರನಿರ್ಪ ತೆಱದಿಂದಿರ್ಪಂ ೯೧

ನಗಿಸಲ್ ನುಡಿಸಲುಮಜಿತನ
ನಗೆಗಣ್ಗಳ ಚೆಲ್ವನೊಸೆದು ನೋಡಲ್ ಪಡೆಯಲ್
ನಗೆಮೊಗದ ನೀರೆ[6]ಯರ್ [ನಗು][6]
ಮೊಗದಿಂದ ಪಕ್ಕುಗಾಣದಗಲಗಲಿರ್ಪರ್ ೯೨

---

1 ಲ್ತ್ರೆನ್ನಂ (ಕ) ಲ್ಕತ್ರೀನಂ (ಚ) 2 ಪಾರಯ್ವಂತೆ (ಕ) ಪಾರಯಂತೆ ರಯ್ಯಫಲವಂ ಮಿನಗೆ (ಚ) ಪಾರ್ರೈಪಂತೆ ಪಲವಂ ಮಿಗೆ (ಟ) 3 ಕೈಸಿಂ (ಕ) ತೋೞರಯ್ಯಂ (ಚ) 4 ಪೋಂ (ಕಟ) 5 ಸಂ ಕಿನಿಸಂ (ಕಟ) 6 ಯರ್...(ಕಗಚಜಟ)

ಎಡೆವಡಗಡೆ ಸಂದಿಸಿ ವಿಾ
ವ್ರಡುವ ತುಱುಂಬುವ ಜಲಾಂಬರಸ್ರಕ್ಸ್ರತಿಯಿಂ
ನಡೆದರ್ ಮಜ್ಜನವಳ್ಳರ
[1]ಮಡಿವಳ್ಳರ ಮಾ[1]ಲೆಗಾಱಂದಡೆ ದಿವಿಜರ್ ೯೩

ಅಂತು ನಿಸ್ವೇದತ್ವಮುಂ ನಿರ್ಮಲತ್ವಮುಂ ಕ್ಷೀರಗೌರತ್ವಮುಂ ವಜ್ರ ವೃಷಭ ನಾರಾಚ ಸಂಹನನ[2]ಮುಂ[2] ಸಮಚತುರಸ್ರ ಸಂಸ್ಥಾನಮುಂ ಸುರೂಪತೆಯುಂ ಸುರಭಿಗಂಧತ್ವಮುಂ ಸ್ವಸ್ತಿಕಾಂಕುಶ ಧ್ವಜತೋರಣಾದ್ಯಷ್ಟೋತ್ತರ ಲಕ್ಷಣ ಸಹಸ್ರ ಮುಮಪ್ರತಿಮ ವೀರ್ಯತ್ವಮುಂ ಪ್ರಿಯಹಿತವಾದಿತ್ವಮುಮೆಂಬ ದಶವಿಧ ಸ್ವಭಾವಾತಿ ಶಯಸಂಪನ್ನನುಂ ಶಸ್ತ್ರಪಾಷಾಣಾಯುಧಾದಿ ವರ್ಷವಿಷಾಗ್ನಿ ಕಾಳಕಾದಿಪರ ಘಾತ[3]ಮುಂ ವಾತಪಿತ್ತಶ್ಲೇಷ್ಮಸನ್ನಿಪಾತ ಸಂಭವಾಮಯನೋಪಕರ್ಮೋಪದಯೋಪ ಘಾತಮುಂ[3] ಪ್ರಿಯಹಿತವಾದಿತ್ವಮುಮಲ್ಲದೆ ಜರಾವಿಭೇದಂ ದಂತಮಳಾದಿವಿರ ಹಿತನುಂ [4]ಸನಿ[4]ರತಿಶಯೇಂದ್ರಿಯಾರ್ಥಸಮನುಗತಾಭ್ಯುದಯ ನಿಶ್ರೇಯಸ ಪರಮ ಸುಖಸಾಧನಮುಮಪ್ಪ ಪರಮೌದಾರಿಕ ಚರಮದೇಹಮುಂ ತಾಳ್ದಿ ಸುರಕುಮಾರ ರಾಜಕುಮಾರ ಪರಿವೃತನುಮಾಗಿ ಬಳೆವ ತೀರ್ಥಕರಕುಮಾರಂಗೆ ಅಷ್ಟಾದಶ ಲಕ್ಷ ಪೂರ್ವಂ ಕುಮಾರಕಾಲಂ ಪೋಗೆ

ವನಿತಾನೇತ್ರೋತ್ಪಲಾನಂದನ ವಿಶದ ಶರಚ್ಚಂದ್ರಬಿಂಬೋಪಮಾನಾ
ನನನುರ್ವೀ ರಾಜ್ಯಭಾರಕ್ಷಮದಿ[5]ವಿಭ[5]ಕರಾಕಾರ ಶುಂಭತ್ಕರಂ ಯೌ
ವನಲಕ್ಷ್ಮೀ ಕೇಳಿಶೈಲೋಪಮಭುಜಶಿಖರಂ ಶ್ರೀವಧೂ[6]ಚಂಚನತ್ಕಾಂ[6]
ಚನಲೀಲಾಮಂದಿರ ಶ್ರೀನಿಲಯಪೃಥುಲವಕ್ಷಸ್ಥಲಂ ತೀರ್ಥನಾಥಂ ೯೪

ಅಂತೆನಿಸಿದಾ ಧರ್ಮನಂದನಕಲ್ಪಪಾದಪ ಬಾಲಾಶೋಕ ಪಾದಪಲ್ಲವಮೆನಿಪ ಮೃದುಮಧುರ ಪದಪಲ್ಲವಮುಮಾ ಮಣಿಗಣ ವಿಭೂಷಣ ಪದ್ಮರಾಗಮಣಿ ರುಚಿರ ನಖಮಣಿರುಚಿಯುಮಾ ಕನತ್ಕನಕ ದಂಡಮೆನಿಪಮಸೃಣಜಂಘಾಕಾಂಡಮುಮಾ ಭುವ[7]ನ ಭವನ[7] ವಿಜಯಲಕ್ಷ್ಮೀಕರೇಣುಕಾಲಾನ ಮಾನಸ್ತಂಭವೃತ್ತೋರುಸ್ತಂಭ ಮುಮಾ ದುರಿತ ಗಜಘಟಾ ಸಿಂಹಾಸನಾರೋಹಣೋಚಿತಮೆನಿಪ ಸಿಂಹಕಟೀತಟ ಮುಮಾ ಧರ್ಮತೀರ್ಥಪ್ರವರ್ತನ [8]ಸಮುದ್ರಾವರ್ತಮೆ[8]ನಿಪ ದಕ್ಷಿಣಾವರ್ತ ಗಂಭೀರ

1 ಮಾ (ಜ) 2 ತ್ವಮುಂ (ಗಚಜ) 3 ಮುಂ (ಕ) 4 ನಿ (ಚಜಟ) 5 ವಿಜ (ಕಟ) 6 ಪಂಕಜಕಾಂ (ಗಚಜ) 7 ನ (ಟತ) 8 ಮೆ (ಕಟ)

ನಾಭಿಯುಮಾ ಕೃಶೀಕೃತ ಕರ್ಮಬಂಧನ ಮೃಗೇಂದ್ರಮಧ್ಯಮೆನಿಪ ಕೃಶಮಧ್ಯ ಮುಮಾ ಮಜ್ಜನ[1]ಪೀಠೀ[1]ಕೃತ ಮಂದರಾಚಳ ಶಿಲಾತಳವಿಶಾಲಮೆನಿಪ ವಿಪುಲವಕ್ಷ ಸ್ಥಳಮುಮಾ ಗಜಲಾಂಛನ ದಿಗ್ಗಜಕರಾನುಕಾರಿಯೆನಿಸುವ ಜಾನುವಿಲಂಬಮಾನ ಶುಂಭತ್ಕರಮುಮಾ ತ್ರಿಲೋಕ ಶಿಖರಿಶೇಖರ ನಮೇರು ಮೇರುಶಿಖರಮೆನಿಪ ಗುರುಭುಜಶಿಖರಮುಮಾ ರತ್ನತ್ರಯಾಲಂಕೃತನೆನಿಪ ಕಮನೀಯಕಂಬುಬಂಧುರ ಕಬ್ಜಕಂಧರಮುಮಾ ಸಕಲ ಸುರಾಸುರ ಸಭಾಸಮಭ್ಯರ್ಚಿತನ ಪಾದಪದ್ಮ ಪರಾಗರುಚಿಯೆನಿಪ ವೃತ್ತಾರುಣೋದಾರರುಚಿಯುಮಾ ಭುವನಸಂಕ್ರಂದನನ ವಿಮಲ ಮುಕ್ತಾಫಲ[2]ಪಙ್ತ್ಯನು[2]ಕಾರಿಯೆನಿಪ ಪರಿಸ್ಫುರದ್ದಶನಕಾಂತಿಯುಮಾ ಚಂಚಚ್ಚಂಪಕದಾಮಾಭಿರಾಮ ಹೇಮಪ್ರಭನ ಚಂಪಕ ಮುಕುಲಕಲಾಪಮೆನಿಪ ಸಮುತ್ತುಂಗ ನಾಸಿಕಾವಿಲಾಸಮುಮಾ ಮತಿಶ್ರುತಾವಧಿಜ್ಞಾನನೇತ್ರತ್ರಯನ ಶತಪತ್ರಸತ್ರಾನುಕಾರಿಯೆನಿಪ ಕರ್ಣಾಂತವಿಶ್ರಾಂತ ವಿಶಾಲ ನೇತ್ರದ್ವಯಮುಮಾ ಸಹಜಚ್ಛಿದ್ರ ಕರ್ಣನ ಕರ್ಣಾಭರಣ ಕಿರಣಮಣಿಯುಮೆನಿಪ ನಿಜಾಂಸಸ್ಥಲಪ್ರಲಂಬ ಕರ್ಣಯುಗಳಮುಮಾ ನಿರವದ್ಯ ವಿದ್ಯಾವಿಲಾಸಿನೀ ಮಣಿದರ್ಪ[3]ಣನ ದರ್ಪಣ[3]ತಳ ಮೆನಿಪ ವಿಮಲ ಕಪೋಲತಳಮುಮಾ ನಪಶತಾರ್ಥ ಚಾಪೋತ್ಸೇಧನ ಮದನಚಾಪ ಮೆನಿಪ ವಿಭ್ರಮಭ್ರೂಯುಗಳಮುಮಾ ವಿನೇಯ ವಿಲೋಚನೋತ್ಪಲಾನಂದಕರ ಚಂದ್ರನ ಸಕಲ ಚಂದ್ರಾಕಾರಮೆನಿಪ ಸಾಮ್ರಾಜ್ಯಪಟ್ಟಬಂಧೋಚಿತ ವಿಸ್ತೀರ್ಣ ಲಲಾಟಪಟ್ಟಮುಮಾ ಭವ್ಯ ಮಧುಕರ ನಿಷೇವ್ಯ ಚರಣಾರವಿಂದನ ಮಧುಕರಕಲಾಪ ಮೆನಿಪ ಸಮಪ್ರಸಿದ್ಧ ಮೃದುಕುಟಿಲ ಕುಂತಳಕಲಾಪಮುಮಾಶ್ಚರ್ಯ ಸೌಂದರ್ಯ ಮುದ್ರಾಂಕಿತ[4]ನುಮಾಗೆ[4]

ಪರಮೌದಾರಿಕ ದೇಹ[5]ಸೌಂ[5]ದರತೆ[6]ಯಿಂ[6] ಹೇಮಪ್ರಭಾಭಾರಭಾ
ಸುರ ತೇಜಃಪ್ರಭೆ[7]ಯಿಂ[7] ವಿಲೋಲ ಧವಳಾಪಾಂಗೇಕ್ಷಣಚ್ಛಾಯೆಯಿಂ
ದರಹಾಸಾಮೃತದಿಂ ಸಲೀಲ ಪದವಿನ್ಯಾಸಂಗಳಿಂ ಮಂಜುಳ
ಸ್ವರ ಗಾಂಭೀರ್ಯದಿ[8]ನೀಟ್ಟು[9]ಕೊಂಡನಜಿತಂ ಕಾಂತಾಜನಸ್ವಾಂತಮಂ ೯೫

ಅಂತನಂ[9]ಗಾ[9]ವತಾರಮೆನಿಸಿದ ತಾರುಣ್ಯಾವತಾರದೊಳಭಿನವ ಯೌವನಲಕ್ಷ್ಮೀ ಸಮಾಲಿಂಗಿತಾಂಗನುಂ ಸರ್ವಾಂಗೋಪಾಂಗ ಸೌಂದರ್ಯನುಮಾದ ನಿಜತನೂಜಂಗೆ

1 ಪರಿ (ಗಜ) 2 ಪಂಕ್ತಿ (ಕಗಚಜ) 3 ಣ (ಗಜ) 4 ಮಾಗೆ (ಕಟತ) 5 ಸುಂ (ಗಜ) 6 ಯುಂ (ಕಗಚ) 7 ಯುಂ (ಗಜ) 8 ನಿರ್ಮ (ಗಜ) 9 ತಾ (ಚ)

ವಿವಾಹೋತ್ಸವಮಂ ಮಾಡಲೆಂದು ಮನದೊಳೆ ಮಂತಣಮಿರ್ದು ಪರಮೇಶ್ವರನು ಮೊಡಂಬಡುಗುಮೊಡಂಬಡನೆಂದು ತನ್ನ ಬಲ್ಲಂದದೊಳೆಲ್ಲಂ ನುಡಿದೊಡಂಬಡಿಸ ಲೆಂದು ಕೆಲಕ್ಕೆ ಬಂದು ಕೆಯ್ಯನೊತ್ತಿಯುಂ ಕಾಲನೊತ್ತಿಯುಂ [1]ತತ್ತು[1]ಪಣಂಗೆಯ್ದು

ಆ ಪುಣ್ಯಮಕ್ಕೆ ಲೋಕ
ವ್ಯಾಪಾರಂ ನಡೆದ ಬಟ್ಟೆಯೊಳ್ ನಡೆವುದು ಮು
ನ್ನಾ ಪುರುಪರಮೇಶ್ವರನೆಂ
ತಾ ಪಾಂಗಿನೆ ಕಂದ ನೆಗೞ್ದೊಡಾವುದು ದೋಷಂ ೯೬

ಭರತನ ದೊರೆಯುನನುರ್ವೀ
ಭರಸಹನಂ ಮಗನೆ ಪಡೆಯುವೇೞ್ಪುದು ಮಗನಂ
ದೊರೆಕೊಳ್ಗೆ ಧರ್ಮಪತ್ನಿಯ
ಪರಿಗ್ರಹಂ ನಿಮಿರ್ಗೆ ಪುತ್ರಸಂತತಿ ನಿನ್ನೊಳ್ ೯೭

ಮನವೊಸೆದಂದು ಪೆತ್ತಿಮಗೆ ಸಂತಸಮಾಗೆ ವಿವಾಹಮಂಗಳಂ
ನಿನಗದುವೇೞ್ಪುದೇ [2]ಸುತೆಯರಂ ಕು[2]ಡಲರ್ತಿಗರಾದಪರ್ ಮಹಾ
ವನಿಪತಿ[3]ಗಳ್ ವೆಱಂ ಮು[3]ಗನೆ ನೋೞ್ಪಿಮೆ ಪೇೞ್ನೆ ತನ್ನ ಸಸ್ಮಿತಾ
ನನದೊಳೆ ಮಾೞ್ಪುದೆಂದಱಿಪಿದಂ ಜಿತಶತ್ರುಗೆ ಜೈತ್ರಶಾತ್ರ[4]ವಂ[4] ೯೮

ಅಂತು ತನ್ನ ನುಡಿಗೊಡಂಬಟ್ಟುದಕ್ಕೆ ಸಂತಸಂಬಟ್ಟು ಗುಡಿಯಂ ಕಟ್ಟಿ ಬದ್ಧ ವಣಂ ಬಾಜಿಸಲ್ವೇೞ್ದು ಜಿತಶತ್ರುಮಹಾರಾಜನಿಕ್ಷ್ವಾಕುವಂಶೋತ್ತಂಸಂಗೆ ನಾಥವಂಶ ಮಹೀ[5]ನಾಥ[5]ನಂದನೆಯರುಮನುಗ್ರವಂಶನೃಪಾಗ್ರೇಸರತನೂಜೆಯರುಮಂ ಹರಿವಂಶಕ್ಷತ್ರಪುತ್ರಿಯರುಮಂ ಕುರುವಂಶ ಪಾರ್ಥಿವಪ್ರಭೂತೆಯರುಮಂ ಭೋಜವಂಶ ತನೂಜೆಯರುಮಂ ಜೆನ್ನೆಯರುಮಂ ತಂದು ಸೂರ್ಯವಂಶದ ನರೇಂದ್ರಸುತೆಯರುಮಂ ಸೋಮವಂಶದ ನರಪಾಲಸುತೆಯರುಮಂ [6]ಕದಂಬ[6]ವಂಶಮಹೀಧರಾತ್ಮಜೆಯರುಮಂ ಪಾಂಡ್ಯವಂಶ ಧರಣೀಧರಸುತೆಯರುಮಂ ಕೇರಳವಂಶ ಭೂಪಾಲಪತ್ನಿಯರುಮಂ ಮತ್ತಮನೇಕ ಮೂರ್ಧಾಭಿಷಿಕ್ತ ಕ್ಷತ್ರಿಯಕುಲ ಸಮುತ್ಪನ್ನೆಯರುಮಂ ನಿರತಿಶಯ

---

1 ತತ್ತ (ಕಚತ) 2 ನೀಱಿಕೆಯರಂ ಕ (ಕ) ನೀಱಿಕೆಯರಂ ಕು (ಗಚಜ) 3 ಗಳ್ವರ್ಮ (ಕ) ಗಳ್ ಪಲರ್ ಮ (ಗಚಜ) 4 ಮಂ (ಗಜ) 5 ಪಾಲ (ಗಜ) 6 ಕಪಂಬ (ಗಜ)

ರೂಪಲಾವಣ್ಯ ಸೌಭಾ[1]ಗ್ಯ[1] ಹಾವಭಾವವಿಲಾಸ ವಿಭ್ರಮ ಸೌಂದರ್ಯಸಂಪನ್ನೆಯರು ಮುಪ್ಪ ಸಾಸಿರ್ವರ್ ಕನ್ನೆಯರುಮಂ [2]ಚೆನ್ನೆಯರುಮಂ ತಂದು[2] ಮಹೋತ್ಸಾಹದಿಂ ಶುಭದಿನ ಪ್ರಶಸ್ತ ವಾರ ಮಂಗಳ ಕಲ್ಯಾಣಮುಹೂರ್ತದೊಳ್ ಪಾಣಿಗ್ರಹಣಂಗೆಯ್ಸಿ ವಿವಾಹ ಕಲ್ಯಾಣಮಂ ಮಾಡಿದಾಗಳ್

ಕಡುಗಾಡಿಯ ಕಡುಚೆಲ್ವಿನ
ಬೆಡಂಗುವೆತ್ತವರ ನಡುವೆ ಕಣ್ಗೊಪ್ಪಿ ಬೆಡಂ
ಗಿಡಿದಿರ್ದ ಕಲ್ಪಲತೆಗಳ
ನಡುವಣ ಕಲ್ಪಾವನೀಜಮಂ ವಿಭು ಪೋಲ್ತಂ ೯೯

ಅಂತು ಸಹಸ್ರಾಂಗನಾವಲ್ಲಭನಾದಜಿತವಲ್ಲಭನಂ ಸಾಮ್ರಾಜ್ಯಲಕ್ಷ್ಮೀವಲ್ಲಭನಂ ಮಾಡಲೆಂದು ಜಿತಶತ್ರುಮಹಾರಾಜಂ ಗಣಕರಣ ನಿರೂಪಿತ ಪ್ರಶಸ್ತಲಗ್ನೋದಯ ದೊಳಗಣ್ಯ ಪುಣ್ಯಾಂಬುಪೂರ್ಣ ಸ್ವರ್ಣಕಳಶಂಗಳಿಂ ಸೌಧರ್ಮೇಂದ್ರಂ ಮಾಡಿದ ಜನ್ಮಾಭಿಷೇಕಮಂ ಪೋಲೆ ರಾಜ್ಯಾಭಿಷೇಕಮಂ ಮಾಡಿ ಮಣಿಮಯೋತ್ತುಂಗ ಸಿಂಹಾಸನಮನೇಱಿಸಿ

ಧವಳಚ್ಛತ್ರತ್ರಯಂ ಶ್ರೀಧವಳ ಚಮರಜಶ್ರೇಣಿಗಳ್ ವಾರನಾರೀ
ಧವಳಾಪಾಂಗಂಗಳೆತ್ತಂ ಧವಳಿಸೆ ದಶದಿಗ್ಭಿತ್ತಿಯಿಂ ಚಂದ್ರರೋಚಿ
ರ್ಧವಳಂ ಲೋಕಕ್ಕೆ ಕೀರ್ತಿಪ್ರಸರಮೆಸೆವಿನಂ ಮಾಡಿದಂ ಪಟ್ಟ[3]ಬಂಧೋ[3]
ತ್ಸವಮಂ ಸಮ್ಯಕ್ತ್ವ ಲಕ್ಷ್ಮೀಧವಳನಜಿತನಾಥಂಗಯೋಧ್ಯಾಧಿನಾಥಂ ೧೦೦

ಇದು ಸಕಲ ಮುನೀಂದ್ರವೃಂದ ವೃಂದಾರಕ ಶ್ರೀಮದಜಿತಸೇನಭಟ್ಟಾರಕ ಶ್ರೀಪಾದಪದ್ಮಪ್ರಸಾದಾಸಾದಿತ ರತ್ನತ್ರಯಾಲಂಕೃತ ಶ್ರೀಮದಭಿನವ ಕವಿಚಕ್ರವರ್ತಿ ಕವಿರತ್ನ ನಿರ್ಮಿತ ಶ್ರೀ ದಾನಚಿಂತಾಮಣಿ ನಿರ್ಮಾಪಿತ ಶ್ರೀಮದಜಿತತೀರ್ಥಕರ ಪುರಾಣತಿಲಕದೊಳ್

ಪಟ್ಟ[3]ಬಂಧೋ[3]ತ್ಸವವರ್ಣನಂ

ಪಂಚಮಾಶ್ವಾಸಂ

---

1 ಗ್ಯ ಭಾಗ್ಯ (ಗಜ) 2 ತಂದು (ಗಜ) 3 ಬದ್ಧೋ (ಗಜ)

# ಷಷ್ಠಾಶ್ವಾಸಂ

ಶ್ರೀಮದ್ವಿತೀಯ ತೀರ್ಥ
ಸ್ವಾಮಿ ಜಗತ್ತ್ರಿತಯಶೇಖರಂ ಭಾಸುರತೇ
ಜೋಮೂರ್ತಿ ಭವ್ಯಜನಚಿಂ
ತಾಮಣಿ ನಿರವದ್ಯಚರಿತನಪಗತ ದುರಿತಂ ೧

ಅಂತು ಸಕಲ ಜಗತ್ಸಾಮ್ರಾಜ್ಯ ಪಟ್ಟ[1]ಬಂಧ ಸಮುಲ್ಲಸಿತ[1] ಲಲಾಟಪಟ್ಟನಾಗೆ ಪರಮೇಶ್ವರನ ವಿವಾ[2]ಹಕ್ಕಂ[2] ತೆ[3]ಲ್ಲಂಟ[3]ದಪ್ಪಂತೆ ದೇವರಾಜಂ ದೇವಲೋಕದೊ[4]ಳ[4]ಗ್ಗಳಮಪ್ಪ ದಿವ್ಯಾಂಬರಮಣಿಮಯಾಲಂಕಾರ ಸುಗಂಧಕುಸುಮದಾಮಂಗಳ್ವೆರಸು

ಕಳಗೀತಂ ಕಳವಾದ್ಯದೊಳ್ ನೆಗಬ್ದುದೆಂಬೀ ನರ್ತನಂಗಳ್ ಮನಂ
ಗೊಳೆ ಸಂಗೀತಕಮಂ ನೆಗಪ್ತಿ ನೆಗಬ್ದೀಶಾನಾದಿ ದೇವೇಂದ್ರರಾ
ಗಳೆ ಬಂದಿಂದ್ರನಿವಾಸದಿಂದೆಱಗಿ[5]ದಂ[5] ಲೀಲಾಚಲತ್ಕರ್ಣಕುಂ
ಡಳ[6]ನಾಖಂಡಳನಾ[6] ದ್ವಿತೀಯ ಜಿನತೀರ್ಥೇಶಾಂಘ್ರಿಪದ್ಮಂಗಳೊಳ್ ೨

ಅಂತೆಱಗಿ ಪೊಡೆವಟ್ಟು ಭುವನೈಕಪೂಜ್ಯನಂ ಪೂಜಿಸಿ ದಿವಿಜರಾಜಂ ಜಿತಶತ್ರು ಮಹಾರಾಜನ ಮೊಗಮಂ ನೋಡಿ

ಗುರುವಿಭವಂ ವರ್ಣಾಶ್ರಮ
ಗುರುವೆನಿಸಿದ ತೀರ್ಥಕರ್ತೃಗಜಿತಂಗೆ ಜಗ
ದ್ಗುರು[7]ಗೆ ಗುರುವೆನೆ[7] ಗುರೋರ[8]ಪಿ[8]
ಗುರುವೆನಿಸಿದ ನೀನೆ ಧನ್ಯನೈ ಜಿತಶತ್ರೂ ೩

---

1 ಬದ್ಧ ಸಮುಲ್ಲಸಿತ (ಗಜ) ಬದ್ಧ ಸಮುಲಲಿತೆ (ಚ) 2 ಹೋತ್ಸವಕ್ಕಂ (ಕಚ) 3 ಲ್ಲಟ್ಟ (ಕ) 4 ಳಗ (ಗಚಜ) 5 ರ್ದಂ (ತ) 6 ನಾ (ಚ) 7 ವೆನೆ (ಚ) 8 ಪಿ ಗುರು (ಗಚಜ)

ದೇವನವತರಿಸಿದಂ ಗ
ರ್ಭಾವಾಸಕ್ಕಜಿತನಾಥನೆನೆ ಸಕಲ ಜಗ
ತ್ಪಾವನೆಗೆ ವಿಜಯಸೇನಾ
ದೇವಿಗೆ ಸಮರೊಳರೆ ಪುತ್ರವತಿಯರ್ ಸತಿಯರ್ ೪

ಎಂದು ತೀರ್ಥಕರಗುರುಗಳಂ ಪೊಗಟ್ಟು ಪೂಜಿಸಿ ಸಂಗೀತಪ್ರಸಂಗದೊಳಮರ ಪುಂಗವನಜಿತನಾಥನನೋಲ[1]ಗಿ[1]ಸುತ್ತುಮಿರೆ

ಪರನೃಪರೋಲಗಿಸಿದ ಪ
ದ್ಮರಾಗಮಣಿಯಿಂ ನರೇಂದ್ರಪದ ನಖಮಣಿಯಿಂ
ಪೆರ[2]ಡೋ[2]ಳಿಯೆ ಮಣಿದೀಪದ
ಪರಮೊಪ್ಪಿದು[3]ದಂ[3]ದು ಪಾದಪೀಠದ ಮೊದಲೊಳ್ ೫

ಭೂವಲ್ಲಭನಾಸ್ಥಾನ ಸ
ರೋವರದೊಳ್ ಕಮಲಲತೆಯನಡರ್ದೇಱಿದ ಹಂ
ಸಾವಳಿಗಳನಿಱಿಕಂ [4]ನವ
ಯೌವನೆಯರ್[4]ಕೆಯ್ಯ ಧವಳ ಚಮರರುಹಂಗಳ್ ೬

ವೀರರಸಂ ಭಟರೊಳ್ ಶೃಂ
ಗಾರರಸಂ ಪೆಂಡವಾಸದೊಳ್ ಶಾಂತರಸಂ
ಸಾರಿರ್ದ ನಿಯೋಗಿಗಳೊಳ್
ಚಾರಣಗಣದೊಳ್ ನಿರಂತರಂ ಹಾಸ್ಯರಸಂ ೭

[5]ಧುರದೊಳ್[5] ಭೀಭತ್ಸರಸಂ
ಕರುಣ ಭಯಾನಕರಸಂ ಪದಾನತರೊಳ್ ರೌ
ದ್ರರಸಂ ದಾಯಿಗರೊಳ್ ಪುದಿ
ದಿರೆ ನೆಗೞ್ದದ್ಭುತರಸಂ ಕಥಾಗೋಷ್ಠಿಗಳೊಳ್ ೮

---

1 ಯಿ (ಗಚಜ) 2 ದೋ (ಗಜ) 3 ದೊಂ (ಗಚ) 4 ಬಿದವಾಪಧುಗಳ (ಗಜ) ಬಿಡದಾವ ಮಗಳ (ಚ) 5 ಚರದೊಳ್ (ಕ) ಚರದೊಳ್ (ಗಚಜ)

ಅಂತೊಡ್ಡೋಲಗಂಗೊಟ್ಟಸಾರ್ಗಗಳ್

ಉತ್ಸವವಮಂ ಜಗಜ್ಜನಕೆ ಮಾಡೆ ಸಹಸ್ರ ನಿತಂಬಿನೀ ವಿವಾ
ಹೋತ್ಸವಮುತ್ಸವಂ ನೆಗೞೆ ರಾಜಸಹಸ್ರದೊಳಾಯ್ತು ಪಟ್ಟಬ
ದ್ಧೋತ್ಸವನಂದನಂ ಜನಮನೋಹರಮಾಗಿಪೆನೆಂಬವೊಲ್ ವಸಂ
ತೋತ್ಸವಮಾದುತ್ಸವಪರಂಪರೆಗಳ್ ನೆಗೞುತ್ತಮಿರ್ಪಿನಂ ೯

ಅಂತು ದೇವಾಗಮನಮುಂ ವಸಂತಾಗಮನಮುಮೊಡನೊಡನೆ ನೆಗೞೆ

ಸಕಲ ಜಗಜ್ಜನಮಂ ಮಕ
ರಕೇತು ಗೆಲೆ ಮದನ[1]ನೃಪನ[1] ನಾಟಕವಿಜಯಾ
ನಕರವದಂತೆಸೆಗುಂ [2]ಕ್ಷ್ಮೀ
ಬ[2]ಕೀರ ಮತ್ತಾಳಿ ಪರಭೃತಪ್ರಭವರವಂ ೧೦

ನವ ಸಹಕಾರದಂಕುರದಿನಂಕುರಿಸಿತ್ತು ಪೊದೞ್ದ ನೀಳ್ದ ಪ
ಲ್ಲವತತಿಯಿಂದೆ ಪಲ್ಲವಿಸಿತುನ್ಮದ ಭೃಂಗಕುಳಕ್ಕೆ ಕಂಪುವೀ
ಱುವ ಕುಸುಮಂಗಳಿಂ ಕುಸುಮಿಸಿತ್ತು ಶುಕವ್ರಜಮುತ್ಸುಕತ್ವದಿಂ
ಸವಿವ ಫಲಂಗಳಿಂ ಫಲಿತಮಾಯ್ತು ಮನೋಜ ಮನೋರಥದ್ರುಮಂ ೧೧

ಅವಿರಳ ತಮಾಳ ಭೂರುಹ
ನಿವಹದ ಮೇಲೋಳಿವಟ್ಟು ಪಾಱುವ ಗಿಳಿ ಪೋ
ಲ್ತುವು ಕರಿಯ ಮುಗಿಲಮೇಲೊ
ಪ್ಪುವ ರುಂದ್ರಸುರೇಂದ್ರಚಾಪರುಚಿರ ಶ್ರೀಯಂ ೧೨

ನಂದನವನದೊಳಗೇನೇಂ
ಬಂದವೊ ಮರನೆಂದು ಕಂತು ಬೆಸಗೊಳೆ ಮಾವಿಂ
ಬಂದಿ[3]ರ್ದುವೆಂ[3]ದು ಬಿನ್ನವಿ
ಸಂದದೆ ಕೋಗಿಲೆಗಳುಲಿದುವಾಮ್ರದ್ರುಮದೊಳ್ ೧೩

1 ಜಯನ (ಕಟ) 2 ರಾಜ (ಗಜ) 3 ರ್ದನೆಂ (ಚ) ರ್ದವೆಂ (ಜ)

*ಬಂದಿರೆ ಮಾಮರಂಗಳಿರ ಮಲ್ಲಿಗೆ ಬಂದಿರೆ ಕೋಕಿಲಾಳಿನೀ
ವೃಂದಮೆ ಬನ್ನಿಮಿತ್ತ [1]ಶುಕ ನೀಂ[1] ಸೊಕಮೋ ರಜನೀಂದ್ರಚಂದ್ರ ಸೈ
ಪಿಂದಮೆ ಬಂದಿರೇ ಕುಶಲಮೇ ನಿಮಗೆಂದು ಮಧುಪ್ರ[2]ವೇ[2]ಶದೊಳ್
ಬಂದು ಮನೋಜನೇನನಿತುಮಂ ಪೆಸಗೊಂಡನೊ ಕೂಡಿಕೊಂಡನೋ ೧೪

† ಅಳಿಭರದಿಂ ಶುಕಕೋಕಿಳ
ಕುಳಭರದಿಂ ಕೋರಕಾಂಕುರೋತ್ತರಭರದಿಂ
ಫಳಭರದಿಂದತಿಭರವಾ
ಯ್ತ್ತುಳಮಾವಿಂಗೆನಿಸೆ ನೇಲ್ದ ಕೊಂಬುಗಳೆಸೆಗುಂ ೧೫

ಉರಿಯಂ ಕೆಂದಳಿರ್ಗಳ್ ಧೂ
[3]ಮ[3]ರಾಜಿಯಂ ಭೃಂಗರಾಜಿ ಕಿಡಿಯಂ ಪಣ್ ಪೋ
ಲ್ತಿರೆ ಕಾಮಿಗೆ ಕಾಮಾಗ್ನಿಯು
ಪರಮರಿಯೆನಿಸಿದುವು ಬಂದ ಮಾವಿನ ಮರಗಳ್ ೧೬

ಬಳೆದಗ್ರಪಲ್ಲವಂ ಭೂ
ತಳ ಚುಂಬಿ ಕಪೋಲಮತಿವಿಶಾಲಸ್ಕಂಧಂ
ವಿಳಸಚ್ಛಾಯಂ ಪೋಲ್ತ
ತ್ತುಳಿಮಳಿನಮನಂಗನಾಗಮಂ ಪುನ್ನಾಗಂ ೧೭

ಪೆಱಗಣ ಮುಂತಣ ರಿತುಗಳ
ತೆಱೆಯಂ ನಿಶ್ಚಯಿಸಿ ಮಧುಕರಂ ಮಧುಕರಮಂ
ತೆಱಲಾಱದೆ ಮಲ್ಲಿಗೆಯೊಳ್
ಸೆಱೆಗೆಯ್ದಂತಿರ್ದುದೊಂದು ಪರಿಮಳಫಲಮಂ ೧೮

---

1 ಶುಕ (ಕಗಚಜ) 2 ದೇ (ಗಚಜ) 3 ಪ (ಕ)

* ಇದಕ್ಕೆ ಅನಂತರ 'ಕಗಜಜ' ಪ್ರತಿಗಳಲ್ಲಿ ಬರುವ ಹೆಚ್ಚಿನ ಪದ್ಯ: ಮರಗತ್ತಲೆಯೊರೆಯೊಳ್ ಬಲು ಮುಗುಳಮಲುತಾರಗೆಗಳೆನಿಸಿ ಕೊಸಗತಿರ್ದ ನಿಬಿಡಮಾದಂಕುರ ರಜಸ್ವರೂಪದಿಂ ಲಲಿತ ವನಲತಾಮಂಟಪದೊಳ್

† ಇಲ್ಲ (ಗ)

ಮತ್ತೆ ಮನಂ ಮಲ್ಲಿಗೆಯೊಳ್
ಪತ್ತುವಿಡಲ್ಕಾಱದದನೆ ಸೇವಿಸಿ ತನಗಾ
ಯತ್ತಮೆನಿಸಿರ್ದ ಮಧುಕರ
ವೃತ್ತಿಗೆ ಪಾಯ್ವಂತೆ ಪಾಯ್ದುವಳಿ ಪೆಱವಲರೊಳ್ ೧೯

ಪುಗಲೆಂಬ ಪಿಕ[1]ಸ್ವರಕೆರ್ದೆ[1]
[2]ಯುಗಿವ[2] ಸರಕ್ಕೆಯ್ದೆ ಬೆರ್ಚಿ ಕಣ್ಗಂ ಮನಕಂ
ಸೊಗಯಿಪ ಸರದೊಳಗೆ ಶರ
ಣ್ಬುಗುವಂತಿರೆ ಪೊಕ್ಕುದಂದು ವಿರಹಿಜನಂಗಳ್ ೨೦

[3]ಪಪ್ಪ[3]ಲದಲರ್ಗ[4]ಣ್[4] ಸಂಬಳ
ಮಪ್ಪಿನಮುಪವನಕೆ ನಿಚ್ಚವಯಣಂ ಬರುತುಂ
[5]ಪ[5]ಪ್ಪಕಮಾಗಿರೆ ಪಱಿಮೆಗ
ಳುಪ್ಪಯಣಂಗೆಯ್ದು[6]ವಂ[6]ದು ಪೊಸಮಲ್ಲಿಗೆಯೊಳ್ ೨೧

ಅಳಿಸಾತ್ಕೃತ ಕುಸುಮಂ ಕೋ
ಕಿಳ ಸಾತ್ಕೃತ ಕೋರಕಾಂಕುರಂ ರಾಜಶುಕಾ
ವಳಿ ಸಾತ್ಕೃತ ಕೋಮಲಫಲ
ಮಿಱಿ[3]ಸಿರ್ದುದು ದೊರೆಗೆ ಚೂತತರು ಸುರತರು[7]ವಂ[7] ೨೨

ಎಳ[8]ವೆಱಿ[8] ದಾಡೆ ಕೆಂದಳಿರೆ ನಾಲಗೆ ಮಾಮರ[9]ನ[9]ಳ್ಳಿಗೊಂಬಿನೊಳ್
ಮಿಳಿರ್ವೆಳವಳ್ಳಿ ಬಾಲ[10]ಮಲಗೊರ್ಂ[10]ಚಲೆ ಕೇಸರಮೆಂಬಿನಂ ಮನಂ
ಗೊಳೆ ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂ
ಗೊಳಿಸಿದುದುತ್ಕಕೀರಮದಕೋಕಿಲ ಗರ್ಜಿತ ತರ್ಜಿತಂಗಳಿಂ ೨೩

ನವಕಳಿಕಾಂಕುರಪ್ರಕರ[11]ಮುಂ ನನ[11]ಕೋಕಿಲಕುಟ್ಮಲಂಗಳಂ
ನವಫಲಕಂಗ[12]ಳಂ[12] ಮಿಳಿರ್ವ ಕೊಂಬುಗಳೆಂಬ ಕರಂಗಳಿಂ ಮಧೂ

---

1 ಸರಕ್ಕೆರ್ದೆ (ಕ) 2 ಪುಗುವ (ಕಗಜ) 3 ಪುಷ್ಪ (ಗಜ) 4 ಳ್ (ಕಗಜಟ) 5 ಬ (ಗಜ) 6 ವೆಂ (ಗಜ) 7 ಗಳ್ (ಗಜ) 8 ದಳಿ (ಗ) ದಳಿರ್ (ಜ) 9 ಪ (ಕಗಜ) 10 ಮೆಳೆಗೊಂ (ಗಚಜ) 11 ಮರನ (ಕ) 12 ಳಿಂ (ಗಚಜ)

ತ್ಸವದೊಳ್[1]ವೆಮ್ಮ[1]ತಂದೊಡವೆಯೆಂದಿದಿರೊಳ್ ಪಿಡಿದಂಗಜಂಗೆ [2]ಲೆ[2]
ಕ್ಕವಣಿಗೆದೋಱುವಂತೆಸೆದು ತೋಱ[2]ದುವಂದಿನ ಬಂದ ಪೂವುಗಳ್ ೨೪

ಪದೆದಧಿರಾಜನಾದೆನಗೆ ಮಾಮರನಂ ಯುವರಾಜನಾಗೆ ಮಾ
ಟ್ಪಿದು ಪದನೆಂದು ಮನ್ಮಥನೃಪಂ ಸಹಕಾರಮಹೀರುಹಕ್ಕೆ ಕ
ಟ್ಟಿದ ಯುವರಾಜಕಂಠಿಕೆವೊಲಾಯ್ತು ಜೆಗೊಟ್ಟಿಜೆಗೊಟ್ಟು ನಿಂದ ಷ
ಟ್ಪದ ಗುಣ[3]ಮುಂ[3] ಪ್ರಸೂನ ಭರ[3]ಮುಂ[3] ಮಕರಂದ
ಗುಣಾಭಿಶೋಭಿತಂ ೨೫

ಸ್ಮರಶರಮೇವುವೆಂಬ ಶಿಶಿರಾಂಶುವ ತಣ್ಣದಿರೇವುವೆಂಬ [4]ತೆಂ[4]
ಬೆರಲ[5]ರಲೇ[5]ವುವೆಂಬ ಕಳಕಂಠಿಯ ಬಗ್ಗಣೆಯೇವುವೆಂಬ ಗಾ
ವರಿಸಳಿಯೇವುವೆಂಬ ಮಧುಮಾಸದ ಗೋಸಣೆಯೇವುವೆಂಬ ಬ
ದ್ದರನಱ[6]ಯಟ್ಟಿ ಸಂತವಿರಲೀಯದೆ ಬಾಳಬಸಂತವಾರಣಂ ೨೬

ವಿಳಸದಶೋಕಪಲ್ಲವತಲಂ ವಿಕಚಾಬ್ಜದಳಾಕ್ಷಿ ಮತ್ತಕೋ
ಕಿಳಕಳನಿಸ್ವನಂ ಸಕಲ ಚಂದ್ರವಿಲಾಸಮುಖಂ ಸಸೌರಭಾ
ನಿಳ ರಮಣೀಯ ನಿಶ್ವಸಿತಮಸ್ಥಿರ ಭೃಂಗಚಳಾಳಕಂ ಮನಂ
ಗೊಳೆ ಪರಿಪೂರ್ಣಮಾಯ್ತು ನವಯೌವನಲಕ್ಷ್ಮಿ ವಸಂತಲಕ್ಷ್ಮಿಯಾ ೨೭

ನನೆಯಂಬಂ ಪಿಡಿಗಿತ್ತು ಕುತ್ತುವಡೆದಾ ಕಾಮಾರ್ತನಂ ತನ್ನ[6]ಕ
ಬ್ಬಿನ[6]ಬಾಳಿಂ ಮುಳಿದಟ್ಟಿನೋದನೆ ಗಡಂ ನಿರ್ವಂದದಿಂ ಬಂದ ಮಾ
ವಿನ ಬಾಱಿಶ್ಲೊಂಪದೊಳೊಯ್ದು ರುಳ್ಳನೆ ಗಡಂ ತಂಗಾಳಿಯುಂ ತಿಂಗಳುಂ
ಬನಮುಂ ಬೆಂಬಲಮಾಗಿ ತೀರ್ಚವೆ ಗಡಂ ಕೊಂಡುಗ್ಗಿಯಂ
ಸುಗ್ಗಿ[7]ಯೊಳ್[7] ೨೮

ಅಂತು ಬಂದ ವಸಂತಸಮಯದೊಳ್ ಸಹಕಾರ ಭೂರುಹದೊಳಂಕುರಂ ಪುಟ್ಟುವಂತೆ, ಮಲ್ಲಿಕಾಕುಸುಮದೊಳ್ ಪರಿಮಳಂ ಪುಟ್ಟುವಂತೆ ನಾಗಾಚಲದೊಳ್

---

1 ವೆಂತು (ಚ) 2 ಕ (ಗಚಜ) 3 ಮಂ (ಚ) 4 ತಂ (ಗಚಜ) 5 ಲರೇ (ಗಚಜ) 6 ನಚ್ಚಿನ (ಕ) 7 ಯಂ (ಗಚಜ)

ಸಿರಿಕಂಡಂ ಪುಟ್ಟುವಂತೆ ಪೂರ್ವಾಚಲದೊಳ್ ಚಂದ್ರಂ ಪುಟ್ಟುವಂತೆ [1]ಕೋಗಿಲೆಗೆ ಕಳರವಂ ಪುಟ್ಟುವಂತೆ ಅ[1]ಶೋಕದ್ರುಮಕ್ಕೆ ಬಾಲಪ್ರವಾಲಂ ಪುಟ್ಟುವಂತೆ ಬಂಧುಜನಶೋಕಾಪನೋದನಾಗಿ

ಸಂಪಾದಿತ ಶಕ್ರಾಸನ
ಕಂಪಂಗಜಿತಂಗೆ ಸಕಲ ಭವ್ಯ ಶರಣ್ಯಂ
ಸಂಪೂರ್ಣ ಪುಣ್ಯನೆನಿಸಿ ಮ
ಗಂ ಪುಟ್ಟಿದನಜಿತಸೇನನೆಂ[2]ಬೊಪ್ಪಿ[2]ಸರಿಂ ೨೯

ಆಗಳ್ ಸೌಧರ್ಮಕಲ್ಪೇಶ್ವರಂ ಪರಮೇಶ್ವರನ ವಿವಾಹೋತ್ಸವಕ್ಕಂ ಪಟ್ಟ [3]ಬದ್ಧೋ[3]ತ್ಸವ ಪುತ್ರಜನ್ಮೋತ್ಸವಂಗಳಂ ಮನ್ನಿಸಿ ಮನಂಗೊಂಡು ಬೀಳ್ಕೊಂಡು ಪೋದನಿತ್ತಲ್

ವಿಜಯ ವಿಮಾನದಿಂದಿೞಿದನೀ ಧರೆಗಾ ಜಿತಶತ್ರು ತಂದೆ ತಾ
ನಜಿತನೆನೆಂದು ತಾಯ್ ವಿಜಯಸೇನೆ ವಿನಿರ್ಜಿತ ಶತ್ರುವಾದನಾ
ತ್ಮಜನಭಿಧಾನದಿಂದಜಿತಸೇನನೆನಲ್ಕಜಿತಂ ಜಿತೇಂದ್ರಿಯಂ
ವಿಜಯ ಪರಂಪರಾ[4]ಪರಿಗತಂ[4] ಜಿತ[5]ವಿದ್ವಿ[5]ಷನಾಗದಿರ್ಕುಮೇ ೩೦

ಮಗನಜಿತನಜಿತಸೇನಂ
ಮಗನ ಮಗಂ ಮಗನೆ [6]ಮಗನ[6] ಜಿತಶತ್ರು ನೆಗ
ೞ್ತೆಗೆ ನೋಂತೆಯೆಂದು ಭುವನಂ
ಪೊಗೞ್ದುದು ಜಿತಶತ್ರುನೃಪನ ಪುಣ್ಯೋದಯಮಂ ೩೧

ಜಿತದುರಿತನಜಿತನಾಥಂ
ಜಿತೇಂದ್ರಿಯಂ ಪಿತೃಪಿತಾಮಹಂ ಜಿತಶತ್ರು
ಕ್ಷಿತಿಪನೆನಿಪಜಿತಸೇನನೆ
ಕೃತಾರ್ಥನಾ[7]ತನೆ[7] ಸಮರ್ಥ[8]ನುರ್ವೀಭರತಂ[8] ೩೨

---

1 ಅ (ಗಜಜ) 2 ಬೊಂಪೆ (ಕ) ಬಂಪೆ (ಟ) 3 ಬಂಧೋ (ಕ) 4 ಗದಿತಂ (ಚ)
5 ಕಿದ್ವಿ (ಕಗಜ) ಕಿಲ್ಪಿ (ಚ) 6 ಮಗೆ (ಚ) 7 ಪನೆ (ಜ) 8 ನಾವಿರ್ಭರಿತಂ (ಕ)

ಅಂತು ಕವಚಹರನಾದಜಿತಸೇನಕುಮಾರಂಗೆ ಯುವರಾಜಪದವಿಯಂ[1]ಗೆಯ್ಯೆ[1]

ಜಿತಶತ್ರು ವೃದ್ಧರಾಜ್ಯೋ
ನ್ನತಿಯಿಂದಜಿತೇಂದ್ರನಾದಿ ರಾಜ್ಯೋನ್ನತಿಯಿಂ
ಸುತನೆಸೆದನಜಿತಸೇನಂ
ಜಿತ ಸಕಲಾರಾತಿ ಯೌವರಾಜ್ಯೋನ್ನತಿ[2]ಯಿಂ[2] ೩೩

ಅಂತಾ ರಾಜರತ್ನತ್ರಯಂ ರತ್ನತ್ರಯದಂತೆ ಭುವನತ್ರಯಪವಿತ್ರಮಾಗೆ

ನೆಗಟ್ದಿತ್ಯ್ಯದ್ವತಪೋಗ್ನಿಯಿಂ ಸುಡದಿರಂ ದೇವಂ ಬಬಿಕ್ಕೆನ್ನನ
ನ್ನೆಗವಿಾ ತನ್ನಿಯರೊತ್ತಿನೊಳ್ [3]ಸ[3]ಡಸುಡಂಗೆಯ್ದಿರ್ಪನೆಂದೊಯ್ಯ[4]ಗೊ[4]
ಯ್ಯಗೆ ಸಾರ್ವಂಗಜನೊಯ್ಯಗೊಯ್ಯಗೊಳಸಾರ್ದಿರ್ದಳ್ಕಿದಂತುಳ್ಕಿದಂ
ತಗಿದಂತಾಱನೆ ವೀತರಾಗನ ಮನಕ್ಕಾಸಕ್ತಿಯಂ ಪುಟ್ಟಿಸಲ್ ೩೪

ಗುರುಗಳ್ ಬಂದುಪರೋಧಿಸೆ
ಗುರುವಚನಮಲಂಘನೀಯಮೆಂದೆಡೆಗೊಂಡಂ
ಪರಿಣಯನಮನಂತೆ ವಧೂ
ಪರಿಗ್ರಹಾಗ್ರಹಮದುಂಟೆ ಪರಮನ ಮನದೊಳ್ ೩೫

ಕಾಂತೆಯರೊಳ್ ರಾಜ್ಯಶ್ರೀ
ಕಾಂತೆಯೊಳಾದಮೆ ಜಿತಾತ್ಮನಗ್ಗಲಿಸುವನ
ಲ್ಲೆಂತೆಂದೊಡೆ ಮುಕ್ತಿಶ್ರೀ
ಕಾಂತೆಯೊಳಗ್ಗಲಿಪನೆಡೆಯೊಳಗ್ಗಲಿಸುಗುಮೇ ೩೬

ಅಂತಾ ಪರಮೇಶ್ವರಂ ಸ್ವಭಾವಮಾರ್ದವಾರ್ಜವೋಪೇತನುಂ ವೀತರಾಗನುಮಪ್ಪು ದಱಿಂ ಸಂಸಾರಶರೀರ ಭೋಗ ವೈರಾಗ್ಯಭಾವನೆಗಳಂ ಭಾವಿಸುತ್ತಿರ್ಪನ್ನೆಗಂ

1 ದಯುಗೆಯ್ಯೆ (ಗಜ) ದಯುಂಗೆಯ್ಯೆ (ಚ) 2 ಯಂ (ಗಜ) 3 ಸು (ಕ) 4 ನೊ (ಗಚಜ)

ಉದಯಾಸ್ತಮಯಂಟು ಸಂಸಾ
ರದ ಜೀವಗಣಕ್ಕದಕ್ಕುದಾಹರಣಮಿದೆಂ
ಬುದನೆನಿಸಿ ಪೂರ್ವಶೈಲದೊ
ಳುದಯಿಸಿ ಬಂದಪರಶೈಲಮಂ ರವಿ ಸಾರ್ದಂ ೩೭

ಒಂದಿದಳಿನಿನಪದಿಂದಭಿ
ವಂದಿಸುತುಮುಗಳ್ಕೈಯೊಳ್ ಪುನರ್ದರ್ಶನಮ
ಕ್ಕೆಂದು ದಿನಪಂಗೆ ಕೆಯ್ಮುಗಿ
ವಂದದೆ ಮುಗಿದಿರ್ದುವಲರ್ದ ತಾವರೆಯ[1]ರಲ್ಗಳ್[1] ೩೮

ಹರಿದಿಗ್ವದನಂ ಸಂಧ್ಯಾ
ಸ್ಫುರಿತಾಧರ ಮಧುರ ತಾರಕಾವಸನಂ ಭಾ
ಸುರ ಚಂದ್ರಿಕಾತಿಲಕಮುಡು
ವರ ಕಾಂತಿಯುತಂ ಬೆಡಂಗುವೆತ್ತತ್ತಾಗಳ್ ೩೯

ಮುಗಿಯೆ [2]ಖಳಾನನಾಂಬುಜಮುಮಂ[2]ಬುಜಮುಂ ತಮದೊಡ್ಡುಗೆಟ್ಟು ತಾ
ನುಗಿಯೆ ಕರಂಗಳಂ ಸ್ಮರಕರಂಗಳೆಗೆತ್ತು ವಿಯೋಗಿಸಂಕುಲಂ
ಸುಗಿಯೆ ನಿಜೋದಯಾಚಲದೊಳಾಯ್ತುದಯಂ ಸಕಳೋದಯೋತ್ಸವಂ
ದ್ವಿಗುಣಿತ ತಾರಕಾತರಳ ದೀಧಿತಿ ತಾರಕಚಕ್ರವರ್ತಿಯಾ ೪೦

ದಿಗ್ನಾರೀಮಣಿಮುಕುರಂ
ದಿಗ್ನಾಗ ಕರಾಗ್ರ ಕಳಿತ ಶಶಿಮಣಿಕಳಶಂ
ದಿಗ್ನಾಯಕಚೂಡಾಮಣಿ
ಲಗ್ನೋದಯಶಿಖರನೊಪ್ಪಿದಂ ತುಹಿನಕರಂ ೪೧

ಜಗದಾಲೋಕನದರ್ಪಣಂ [3]ಪ್ರಥಮ[3] ದಿಕ್ಕಾಂತಾನನಂ ಕಂತುರಾ
ಜಗಜೋದ್ದೀಪನ ಪಿಂಡಮಂಬರಸರಸ್ಯುತ್ತಂಸಹಂಸಂ ವಿಯೋ

---

1 ಲರ್ಗಳ್ (ಕಗಚಜ)  2 ದಳನನಾಬ್ಜಮುಯಂ (ಚ) ಖನಾನನಾಬ್ಜಮುಮಂ (ಜ)
3 ಪ್ರಮಥ (ಕ)

ಗಿಗಣಾಕೂತಕುರಂಗ ಪ್ರೋತ ಭಯಕೃತ್ಕಂಠೀರವಂ ಚೆಲ್ವುವೆ
ತ್ತೊೞಗಿದತ್ತರ್ಣವವೀಚಿನರ್ತನ[1]ನಟಂ[1] ಬಿಂಬಂ ಸುಧಾಸೂತಿಯಾ ೪೨

ಇರುಳೆಂಬ ಕಂಭದಿಂ ಹಿಮ
[2]ಕರಸಾದಂ[2] ಕಱಿಯು ತೞಿದಿ ತೞಿತ್ತೊೞಗೆಯೆ ಸುಧಾ
ಕಿರಣವುದ[3]ವುಣ್ಮೆ[3] ಪರಿದುದು
ವಿರಹಾಕುಳರೆಂಬ ಬೀರದಂ ಪೆಣಱುತ್ತುಂ ೪೩

ಕೊಳನಂ ಗಗನಂ ನೀರ್ವೂ
ಗಳನುಡುತತಿ ನೀಲನಚ್ಚವೆಳ್ದಿಂಗಳ [4]ಬೆ[4]
ಳ್ಪೞಿಸೆ ಹರಿಣಾಂಕಮಂಡಲ
ನಿೞಿಸಿದುದಳಿ ಪಾಯ್ದ ಬಿಳಿಯ ತಾವರೆಯರಲಂ ೪೪

ಬೆಲಗಸೆ ತೀವಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು ತಿರ್ದಿ[5]ಬ
ಚ್ಚ[5]ಲ[6]ನೆಲೆದೋಂಟದೊಳ್ ಪರಿಯಿಸಲ್ ಪಱ[6]ಗೋಲ್ಗಳನಿಕ್ಕಿ ಪಾ[6]
[7]ಯಿಸಲ್
ನೆಲೆಯಿನಿಸೆಂದು[7] ನೋಡಲೊಳಪೊಕ್ಕು [8]ಧುಡುವಿ[8]ಱ[8]ದಾಡಲೀಸಲ
ಗ್ಗಲಿಸದಲಂಪಿನಿಂ ಬಗೆ[9]ದು[9]ದಂದು ಜನಂ ಘನ ಚಂದ್ರಿಕಾಂಬುವಂ ೪೫

ಅಂತೊಪ್ಪುವ ಚಂದ್ರಿಕಾಶ್ರೀವಿಲಾಸದೊಳ್ ನಿರವದ್ಯವಿದ್ಯಾಧರನಜಿತನಾಥಂ ವಿದ್ಯಾಧರರೋಲಂಗಂಗೊಟ್ಟಿರ್ದು ದಿಗವಲೋಕನಂಗೆ[10]ಯ್ದ[10]ನ್ನೆಗಂ

ಬೀೞುವಿನಂ ಕಣ್ಣಳ್ಕೆ ನಿ
ರಾಳಂಬನವಾಗೆ ಮನದ ಮೋಹಸ್ತಂಭಂ
ಬೀೞ್ತು ವಿಷಯಾನುರಾಗಂ
ಕೇೞ್ತು ನಭಸ್ಥಲದೊಳಾದುದುಳ್ಕಾಪಾತಂ ೪೬

---

1 ವಿಟಂ (ಗಚಜ) 2 ಕರಂ (ಕಗಚಜ) 3 ವುಣ್ಮೆ (ಟಡ) 4 ಕೆ (ಕ) 5 ಬಾಳ್ತ (ಕಗಚ) ಬಾಳ್ತ (ಜ) 6 ಪರಿನೀರವೊಲ್ ಪರಿಯಲೋಳಿಯಿಸಲ್ ಪಱ (ಕಗ) ಪರಿನೀರವೊಲ್ ಪರಿಯಲೆಳಿಯಿಸಲ್ ಪಱು (ಚಟ) 7 ಯ್ಸಲೆ ನೆಲೆಯೆಂದು (ಟ) 8 ಪುವಿ (ಗಚ) 9 ಗೆ (ಕಗಚಜ) 10 ಯ್ತ (ಗಚಜ)

[1]ಅದಂ[1] ಕಂಡಸುಂಗೊಂಡು

ಭಂಗುರಮುಳ್ಕುವಂತೆ ನರಜನ್ಮಮದಂ ಬಗೆ[2]ದುಂ[2] ವಿವಾಹಕಾ
ರ್ಯಂಗಳ ಕಾಮಸೇನೆಗಳ ಬಂಧುಜನಂಗಳ ರಾಜ್ಯಪಟ್ಟಬಂ
ಧಂಗಳ ಪುತ್ರಸಂತತಿಗಳಾದರದೊಳ್ ಮನಮಂ ತೊಡರ್ಚಿ ನಾ
ಣ್ಚಂಗೆಡೆಯಾಗಿ ಮಾಣ್ಬುದು ಮರುಳ್ತನಮಲ್ತೆಮಗ[3]ಲ್ತೆ[3] ಬೆಳ್ತನಂ ೪೭

ಎಂದು ಬಗೆಯೆವಗೆಯೆ

ಆದರದೆ ವಿಮಲವಾಹನ
ನಾದಂದಿನ ಭವದೊಳಾದ ನಿರ್ವೇಗಂಗಳ್
ಪೋದುವೆ ಪುಟ್ಟೆ ಪುನರ್ಭವ
ಮಾದುವೆ ಪಲ್ಲವಿಸುವನ್ನಮಾದುವೆ ಮನದೊಳ್ ೪೮

ಧಾತ್ರಿಗೆ ನೆಗಟ್ದ ವಿದೇಹ
ಕ್ಷೇತ್ರದೊಳ್[4]ಹರ್[4]ಭಿ[5]ಧಾನಯ[5]ಪ್ಪಂದಿನ ರ
ತ್ನತ್ರಯಮಂದಿನ ನಿರ್ವೇ
ಗತ್ರಯಮೊಡನೊಡನೆ ಬಂದವಾಗ[6]ಡೆ[6] ಜಿನನಾ ೪೯

ಅಂತು ನಿರ್ವೇಗತ್ರಯಮಂ ಭಾವಿಸಿ

ಜಲದಾಟೋಪೋಪಮಂ ಬುದ್ಬುದನಿವಹನಿಭಂ ಫೇನಪಿಂಡಾಯಮಾನಂ
ಜಲರೇಖಾಕಾರ[7]ಮಾಖಂಡಲ[7] ಲಲಿತ ಧನುರ್ಲೀಲಮಾಕಾಳಿಕೀಸಂ
ಚಲಮಾ ಸೌಂದರ್ಯಮಿಂತೀ ನವರಸಚಯಮಾ ದೇಹಮಾಭೋಗಮಾ ಭೂ
ತಲ ರಾಜ್ಯಾಭೋಗಮಾ ಜೀವಿತಮಿದನಱಿಯುತ್ತಿರ್ದು ಮತ್ತೆಂತುಮಾಣ್ಬೆಂ ೫೦

---

1 ಅಂತದಂ (ಗಜ) 2 ದಂ (ಟತ) 3 ಲ್ಕೆ (ಗಚಜ) 4 ಹರ್ತ್ಪದಾ (ಕಗಜಟ)
5 ಧಾನವ (ಕಗಚ) ಯ (ಟ) 6 ಳೆ (ಗಚಜ) 7 ಮಂ ಖಳ (ಚ)

ಕರುಣಿಸದೆ ಕೃತಾಂತಂ ಗೋ
ಣ್ಮುರಿಗೊಂಡೆಱಿದೊಯ್ವ ಪದದೊಳೆಳಸುವರೊಳರೋ
ಶರಣಪ್ಪರೊಳರೋ [1]ವೋಣ್[1] ಕಾ
ವರೊಳರೊ ಕರುಣಿಸುವರೊಳರೊ ಧರ್ಮಮೆ ಕಾಗುಂ ೫೧

ಒರ್ವನೆ ಸುರಗತಿಯೊಳ್ ಸುಖಿ
ದೊರ್ವನೆ ನರಗತಿಯೊ[2]ಳಿಱ್[2]ದು ತಿರ್ಯಗ್ಗತಿ[3]ಯೊ
ಳೊ[3]ರ್ವನೆ ನಾರಕಗತಿ[4]ವೊ
ಕ್ಕೊ[4]ರ್ವನೆ ದೇಹಿಗೆ ಸಹಾಯರೊರ್ವರುಮೊಳರೇ ೫೨

ಇವರಾರಾನಾರ್ಗೆನಗೀ
ಭವಮಲ್ಲದೆ ಕಱಿದ ಭವದ ತಾಯ್ ತಂದೆ ತನೂ
ಭವರೆಲ್ಲರುಮೆಲ್ಲಿದರೆಂ
ದವಧರಿಸದಿದೇಂ ಜಡಸ್ವಭಾವನೊ ಜೀವಂ ೫೩

ಸಿಂಬುೞು ಕೀವು ಕೆರಂ[5]ಕ[5]ಸ್ಪ
ಗಂಬು ಮಲಂ ಮೂತ್ರಮಾ ಪುರೀಷಂ ಜೀವಂ
ಬೆಂ[6]ಬಿಡದೀ[6] ಪಂದೊವಲ ಪ
ಸುಂ[7]ಬೆಯೊಳೀ[7]ಯೊಡಲೊಳಾವ ಸುಖ[8]ಕಿ[8]ರ್ದಪುದೋ ೫೪

ಸಕಲ ಸ್ವ[9]ರ್ಗಾ[9]ದಿ ಚತು
ರ್ವಿಕಲ್ಪಗತಿಭೇದಭಿನ್ನಮುಂತದೆ ಪಂಚಾ
ತ್ಮಕಮಕ್ಕುಂ ದ್ರವ್ಯಕ್ಷೇ
ತ್ರಕಾಲಭವ[10]ಭೇದದಿಂದಮಿಾ[10] ಸಂಸಾರಂ ೫೫

ನಿಮಿರ್ದ ಚತುರ್ದಶ ರಜ್ಜು
ಪ್ರಮಾಣಮಿರ್ದಪುದು ಸಯ್ತುಧೋಲೋಕಂ ಮ

---

1 ಪೇೞ್ (ಕ) 2 ಳಿೞ (ಗಚಜ) 3 ವೆತ್ತೊ (ಕತ) 4 ವೆತ್ತೊ (ಟ) 5 ಕು (ಕ)
6 ಬೀಳದೆ (ಕಗಚಜ) 7 ಬೞಿ (ಚ) ಬೆಳಿ (ಗಜ) 8 ಮಿ (ಗಚಜ) 9 ಭ್ರಾ (ಗಚ)
10 ಭೇದದಿಂ (ಕ) ಭಾವಾಭೇದದಿಂ (ಗಚಜ)

ಧ್ಯಮಲೋಕಮೂರ್ಧ್ವಲೋಕಂ
ಕ್ರಮದಿಂ ತ್ರಸನಾಳಮೇಕರಜ್ಜು ಪ್ರಮಿತಂ ೫೬

ಪರಮತರುಚಿಯಿಂ ವಿಷಯಾ
ನುರಾಗದಿಂ ಖಳಕಷಾಯವರ್ತನದಿಂದಂ
ಪರಿಪಾಲಿತ ಶೀಲವ್ರತ
ವಿರಮಣದಿಂದಶುಭಕರ್ಮದಾಸ್ರವಮಕ್ಕುಂ ೫೭

ಕೃತಜೀವದಯಾವ್ರತ ಸಂ
ಯತಭಾವಂ ಕ್ರಮದಿ[1]ನೈದು ಮೂಱೆೞಾಱುಂ[1]
ವ್ರತಸಮಿತಿ ಗುಪ್ತಿಯೊಳ್ ಸಂ
ಯುತನೆನಿಸಿದ ಸುವ್ರತಂ ಸುಸಂವೃತನಕ್ಕುಂ ೫೮

ಉಪವಾಸದಿಂದಜೀರ್ಣಮ
ನುಪಶಮಿಸುವ ವೈದ್ಯನಂತೆ ಸಂಯಮದಿಂದಂ
ತಪದಿಂದಮುಪಜಿತಾಘಮ
ನುಪಶಮಿಸುವ ಪರಮಮುನಿಯೆ ಸಂಯಮಿಯಕ್ಕುಂ ೫೯

ಅಱಿಯಲರಿದರಿದು ದೀಕ್ಷೆಗೆ
ತಱಿಸಲಲಱಿದೆರಡುಮಾಗಿ ತಪದೊಳ್ ತನುವಂ
ನಿಱಿಸಲರಿದೆನಿಸುವಱಿತಮೆ
ಪೆಱತಿಲ್ಲ[2]ದುಮಲ್ತೆ ತಾನೆ ಬೋಧಿಯುಮಕ್ಕುಂ ೬೦

ಪಾವನ ಚಾರಿತ್ರೌಷಧ
ಸೇವೆಯೆ ದೋಷತ್ರಯಂಗಳಂ ಕಿಡಿಸೆ ತಪೋ
ಭಾವನೆಯೊಳೆಸೆವನಾಮಯ
ನಾವನುಮಾ ಮುನಿಯೆ ಪರಮಧರ್ಮಕ್ಕಾರ್ಮಂ ೬೧

---

1 ನೈದುಂ ಮೂಱುಂ (ಕ)...ನೈದುಂ ಮೂಱುಂ (ಟ)   2 ಲ್ತ (ಟ)

ಎಂದಿಂತಧ್ರುವಮಶರಣಮೇಕತ್ವಮನ್ಯತ್ವಮಶುಚಿತ್ವಂ ಸಂಸಾರಂ ಲೋಕಮಾಸ್ರವಂ ಸಂವರೆ ನಿರ್ಜರೆ ಬೋಧಿದುರ್ಲಭ ಧರ್ಮಸ್ವಾಖ್ಯಾತಮೆಂ[1]ಬ[1] ಪನ್ನೆರಡು-ಮನುಪ್ರೇಕ್ಷೆಯಂ ಕ್ರಮದಿನನುಸ್ಮರಿಸುತ್ತು ಮಿರ್ಪನ್ನೆಗಂ

ತಿಳಿದಿರ್ದ ಕೊಳದ ಜಲದೊಳ್
ಪಳಚ್ಚನೆಸೆದಿರ್ದ ತನ್ನ ನೆೞಲಂ ತನ್ನೋ
ಪಳಿಗೆತ್ತು ಮುೞುಗಿ ಕಾಣದೆ
ತಳವೆಳಗಾಗಿರ್ದುವಿರು[2]ಳ್[2] ವಿರಹವಿಹಂಗಂ ೬೨

ಮದನಸದನೋ[3]ದ್ಯೋಗ[3]ಸ್ಥಾನಂಗಳೊಳ್ ಸುೞ[3]ದಂಗನಾ
ವದನಮದಿರಾಮೋದಸ್ವೇದಾಂಬುವಂ ತವೆ ಪೀರ್ದು ಕೌ
ಮುದಿಯೊಳಲರ್ದಿರ್ದಿಂದ್ಯನ್ನೀಲೋತ್ಪಲಂಗಳ ಕಂಪಿನೊಳ್
ಪುದಿದು ಪುರದೊಳ್ ತೀವಿತ್ತೆತ್ತಂ ಪ್ರಭಾತಸಮೀರಣಂ ೬೩

ವಿಲಸಿತ ಪುಂಡರೀಕಚರಣಂ ಕುಮುದೇಕ್ಷಣಕಾಂತಮಂಜನಾ
ಕುಲಿತ ವಿಲೋಚನಂ ಸ್ವಗತವಾಮನಮನ್ವಿತ ಸುಪ್ರತೀಕಮು
ಜ್ಜ್ವಲತರ ಪುಷ್ಪದಂತಮಮರೇಭಗತಂ ಗೃಹಸಾರ್ವಭೌಮಮು
ಗ್ಗಲಮೆಸೆದತ್ತು ದಿಗ್ವಲಯದಂತೆ ನಿಶಾಂತದೊಳಂಗನಾಜನಂ ೬೪

ನಸುಬಿರಿವ ಕಮಲಮುಕುಳದ
ನಸುಬಿರಿವುತ್ಪಲದ ಮುಗ್ಧಪರಿಮಳಗಂಧಂ
ಪೊಸವೇಟದ [4]ಪೞ[4]ವೇಟದ
ಸುಸಿ[5]ಲಿನಿ[5]ದಂ ಪಡೆದುದಳಿಗೆ ಬೆಳಗಪ್ಪಾಗಳ್ ೬೫

ಪೊಸತಲರ್ದಂಭೋರುಹದೊಳ್
ಮುಸುಂಬು ಮುೞುಗುವಿನಮೆಱ[6]ಗೆ[6] ಗಂಧಮನಾಘ್ರಾ
ಣಿಸುತುಮುಳವಳಿಸುವಳಿಗಳ
ಪಸವೋಡಿದುದಿಲ್ಲ ರಜನಿಸಮ[7]ಯಾತ್ಯಯದೊಳ್[7] ೬೬

1 ಬುವ (ಟತ) 2 ಳು (ಗಚಜ) 3 ದ್ಯಾನ (ಕಗಚಜ) 4 ಪಳೆ (ಕ) ಪಳಿ (ಗಚ)
5 ಲನ (ಗಚಜ) 6 ಗೆ (ಕಗಚಜ) 7 [illegible] (ಕಗಚಜ)

ಕುಶಲನೆ ನಿಮಗೆಂಬಂತಿರೆ
ಕುಶೇಶಯಂಗಳ್ಗೆ ನೀಡೆ ಕರಮಂ ಮಿತ್ರಂ
ಕುಶಲನೆಮಗೀಗಳೆಂಬಂ
ತೆ ಶೋಭಿಸಿತ್ತಳಿರವಂಗಳಿಂ ಕಮಳವನಂ ೬೭

ಶರಣೋಪಗತರೆಮೆಮಗಿಂ
ಕರುಣಿಪುದೆಂ[1]ದಂಜಿ ಲಗ್ನ[1] ದಿನಕರಪಾದ
ಕ್ಕಿರದೆಱಪ ತಮದ ಮಱಿಗಳ
ದೊರೆಯಾದುವು ಕಮಲವನಕೆ ಮೊರೆದೆಱಪಳಿಗಳ್ ೬೮

ಕೇಳ್ವನಜಾನನೇ ಶಫರಲೋಚನೆ ಪದ್ಮಿನಿ ಪದ್ಮಬಾಂಧವಂ
ಬಳ್ವಳ ನೀಡಿದಂ ಕರಸಹಸ್ರಮನೆಂದು ಕಳಸ್ವನಂ ಮನಂ
ಗೊಳ್ವಿನೆಗಂ ಕಳಕ್ಕಳಿಸಿ ಸಂತಸವಾತಿನ ಪೂರ್ಣಪಾತ್ರಮಂ
ಕೊಳ್ವವೊಲೀಟ್ಟುಕೊಂಡುವಳಿಗಳ್ ಸುಮನೋಮಕರಂದಗಂಧಮಂ ೬೯

ವಾಸವದಿಕ್ತಟಂ ಸಮೆದ ಮೂಷೆ [2]ತಮಂ ಸು[2]ರಿದಿರ್ದಲಬ್ಜ ಸಂ
ವಾಸಿ ಸಮಿರಾರನೇರಣಿಗನಾಗೆ ನಿದಾ[3]ಘದ[3] ದೀಪ್ತಿವರ್ತಿಯೊಳ್
ಕಾಸೆ ತೆರಳ್ದ ಪಿಂಜರಿಯಮೋಲ್ ಕಿಸುಸಂಜೆ ತೆರಳ್ವಿನಂ ಪಟಿಂ
ಗಾಸಿನ ಪೊನ್ನಗಂಟೆಯವೊಲೊಪ್ಪಿದುದುದ್ಗತ ಭಾನುಮಂಡಲಂ ೭೦

ಅಂತು ಸಕಲ ಕಮಲಾಕರಪ್ರಬೋಧಕರ ದಿವಸಕರನುದ[4]ಯಗಿರಿ[4]ಶಿಖರಿಶೇಖರ ನಾಗೆ ತೀರ್ಥಕರ ಪರಮದೇವನಂ ಪ್ರಬೋಧಿಸುವಭಿಪ್ರಾಯದಿಂ ಬ್ರಹ್ಮಕಲ್ಪಾಂತರ ವಾಸಿಗಳಪ್ಪ ಸಾರಸ್ವತನುಮಾದಿತ್ಯನುಂ ವಹ್ನಿಯುಂ ವರುಣನುಂ ಗರ್ದತೋಯ[5]ನುಂ ತುಷಿತತೋಯನುಮ[5]ವ್ಯಾಬಾಧನುಂ ಅರಿ[6]ಷ್ಟ[6]ನುಮೆಂಬೆಣ್ಬರುಂ ಲೋಕಾಂತಿಕ ದೇವರಜಿತದೇವಾಂತಿಕಕ್ಕೆಬಂದು

1 ದಜಲಗ್ನದಿ (ಗಚಜತ) 2 ತಮಮಂ ಸ (ಚ) 3 ಪದ (ಕಗಚಜ) 4 ಯ (ಟತ) 5 ನುಮ (ಚ) 6 ಷ್ಟ ರಿಷ್ಟ (ಗಚಜ)

ಭಗವತ್ಪಾದಪಯೋರುಹಕ್ಕೆ ವಿನಯಂ ಕೈಗಣ್ಮೆ ಗಂಧಾಕ್ಷತಾ
ದಿಗಳಿಂದರ್ಚಿಸಿ ದೇವ ತೀರ್ಥಕರನೈ ಮೋಕ್ಷಕ್ಕೆ ಕೊಂಡೊಯ್ವುದೀ
ಕ್ಷೆಗೆ ಮೈಗೊಳ್ಳದನಿತ್ಯಮೆಂದೆನಿಸುವೀ ಸಾಮ್ರಾಜ್ಯಮೋಹಕ್ಕೆ ದಂ
ದುಗದಿಂ ಪ್ರಾಕೃತಮರ್ತ್ಯ[1]ನಿ[1]ರ್ಪ ತೆಱದಿಂ ನೀನಿಂತಿರಲ್ ತಕ್ಕುದೇ ೭೧

ನೀಂ ಚರಮದೇಹಧರನೈ
ಪಂಚೇಷುವನಿಕ್ಕಿಗೆಲ್ದು ಪಂಚೇಂದ್ರಿಯಮಂ
ಪಂಚಮಹಾಕಲ್ಯಾಣವ
ನಿಂ ಚೆಚ್ಚರಮೆಯ್ದಿ ಪಡೆಯ ಪಂಚಮಗತಿಯಂ ೭೨

ಕಷ್ಟತರಮಂ ಕಷಾಯಚ
ತುಷ್ಟಯದೆಡೆಗಿಡಿಸಿ ದೇವ ಕಿಡಿಸಿಯೆ ಭವಚಾ
ತುಷ್ಟಯ[2]ಮನಿನ್ನ[2]ನಂತ ಚ
ತುಷ್ಟಯ[3]ಮಂ ಪೊರ್ದು[3] ಪೊರ್ದದಿರು [4]ಸಂ[4]ಸೃತಿಯಂ ೭೩

ಪ್ರಿಯತಮನೆನಾಗು ರತ್ನ
ತ್ರಯದೊಳ್ ನಿನ್ನಡಿಗೆ ತಡೆಯದೆಱಗಿಸು ಭುವ[5]ನ
ತ್ರ[5]ಯಮಂ ನೆಲಸುಗೆ ಕಾಲ
ತ್ರಯಮುಮನೊಡನಱಿವ ದಿವ್ಯಬೋಧಂ ನಿನ್ನೊಳ್ ೭೪

ತೊಱೆ[3] ಸಕಲ ಪರಿಗ್ರಹಮಂ
ಕಱೆ[3] ಧರ್ಮಾಮೃತಮನಱಿಯೆ ಲೋಕದೊಳಱಿವಂ
ಮೆಱೆ[3] ನಿನ್ನ ನಾಲ್ಕು ಗುಣ[6]ದಿಂ[6]
ನೆಱೆ[3] ನಿನಗಂ ದೇವ ಬುದ್ಧಿಗಲಿಸುವರೊಳರೇ ೭೫

ಭವಜಲಧಿಯನೀಸು ಮನೋ
ಭವನಂ ಕಡಿಕೆಯ್ದು ಕಾದಿಗೆಲ್ ಧರ್ಮಕ್ಕು

1 ಠ (ಗಚಜ) 2 ಮಂ ನಿನ್ನನ (ಕ) ಮಂ ನನ (ಟ) 3 ಪೊರ್ದು (ಗಚಜ)
4 ಮಹಾಸಂ (ಗಚಜ) 5 ನಾಶ್ವ (ಚ) 6 ಮಂ (ಗಚಜ)

ದ್ಭವಮಕ್ಕೆ ತಡೆಯದ ಪುನ
ರ್ಭವಲಕ್ಷ್ಮೀಪತಿಯೆಯಾಗು ಭುವನಾಧಿಪತೀ ೭೬

ರಾಜ್ಯಮನುೞಿ ಪರಮತಪೋ
ರಾಜ್ಯದೊಳೆಸಗಜಿತ ವಿ[1]ಜಿ[1]ತ ಕಿಲ್ಬಿಷ [2]ನಿ[2]ನಗಿಂ
ತ್ಯಾಜ್ಯಂ ಪರಿಗ್ರಹಂ ದಲ್
ಪ್ರಾಜ್ಯಂ ತಪಮದುವೆ ಪಾಲ್ಯಮಾ ಕೈವಲ್ಯಂ ೭೭

ಕೊಳ್ ತಪಮಂ ತಡೆಯದೆ ಬೆಂ
ಕೊಳ್ ತೀವ್ರಕಷಾಯಭಟರನಕ್ಷಯಸುಖದೊಳ್
ತಳ್ತಿರು ನೀಂ ಸುರುಳಿದ್ದರ್ಪ ಮ
ರುಳ್ತನಮಿನ್ನೇಕೆ ದೇವ ಜನ್ಮಾಟವಿಯೊಳ್ ೭೮

ಸಂಗತ ಜಿನಧರ್ಮ[3]ಮತಿಗೆ
ನಾಂಗಳ್[3] ನಿ[4]ನಗೞಿಯೆ[4] ತೆಱಿಯೆ ಭಣ್ಣಿಸೆಮಾದಿ
ತ್ಯಂಗೆ ಸೊಡರೆತ್ತುವೀ ಗಾಂ
ಪಿಂಗಾಗರಮಾಗಿ ತೊೞಿಗೆ ನೀರಡುಕುವವೋಲ್ ೭೯

ಶತಸಪ್ತತಂತುಗಮರಾ
ವತಿಯುಂ ಫಣಿಪತಿಗೆ ನೆಗೞ್ದ ಭೋಗಾವತಿಯುಂ
ಮತಿಗೆಟ್ಟು ಜಡರ್ ಬಣ್ಣಿಸು
ವ ತೆಱದಿ ಬಣ್ಣಿಪೆಮೆ ನಿನಗೆ ಮುಕ್ತಿಯ ಸುಖಮಂ ೮೦

-ಅಂತು[5]

ಸುರತರುಗೇಂ ಸುರಿಯರೆ ಪಂ
ಚರತ್ನಮಂ ಜಿನರ ಮುಂದೆ ಜೈನಾಗಮಮಂ
ಪರಿವಿಡಿಗೆಯ್ಯರೆ ಚಂದನ
[6]ದ ರಸದಿ[6] ಚಂದನದ ದೇವರಂ ಪೂಜಿಸರೇ ೮೧

---

1 ದಿ (ಗಚಜ) 2 ನ (ಗಜ) 3 ವನಾ ಮಿಂಗಿದ (ಗಚಜ) 4 ಱಿಯ (ಟ)
5 ಇಲ್ಲ (ಗಚಜ) 6 ರಸದಿಂ (ಕ) ದ ರಸದಿಂ (ಗಚಜ) ಸರದಿಂ (ಟ)

ಶ್ರೀವೃಷಭಜಿನಂ ಧ
ರ್ಮಾಮೃತಮಂ ಕಱೆದು ಪೋದನಾ ಸಂತತಿಯೊಳ್
ನೀವಿರ್ದಿರೆ ಕಱೆವುದು ಧ
ರ್ಮಾಮೃತಮಂ ಭವ್ಯಸಸ್ಯಸಮಿತಿಗೆ ದೇವರ್ ೮೨

ಪುರುದೇವಂ ಮೊದಲೊಳು ನೀ
ನೆರಡನೆಯೊಳು ನಡೆಯೆ ಸೊಪ್ಪುಸೊಪ್ಪಾದ ಪದಾಂ
ತರದೊಳು ನಡೆದಿಪ್ಪತ್ತಿ
ರ್ವರುಮಿನ್ನಾ ಶಂಭವಾದಿಗಳ್ ತೀರ್ಥಕರರ್ ೮೩

*ಘಾತಿಗಳಂ ಪರಿವಿಡಿಯಿನ
ಘಾತಿಗಳಂ ಜೈನಶಾಸ್ತ್ರ ಶಸ್ತ್ರಾಹತಿಯಿಂ
ಘಾತಿಸಿ ಪುರುದೇವನ ಸಂ
ಘಾತದೊಳಿರು ದೇವ ನೆರೆದು ಮುಕ್ತ್ಯಂಗನೆಯೊಳ್ ೮೪

*ಎಂದವರ್ ತನ್ನಂ ಪ್ರತಿಬೋಧಿಸಿ ಮೂದಲಿಸಿ ನುಡಿಯಲೊಡಂ

ಹೃದಯಂಗಮಮಪ್ಪಿನೆಗಂ
ತದೀಯ ವಚನಾಮೃತಂಗಳಮೃತವ[1]ಘೂಗಾ[1]
ಸ್ಪದಮಂ ಪೊರ್ದುವ ಬಗೆಯಿಂ
ತದಸ್ತುವೆಂದಂ ಜಿನೇಂದ್ರಚಂದ್ರನತಂದ್ರಂ ೮೫

ಬೆಳಗಿದ ಮಣಿದರ್ಪಣಮಂ
ತಿಳಿದ ಸರೋವರಮನಿಬ್ಬಿಸಿ [2]ನಿರ್ಮಳಮದೆ[2] ನಿ
ರ್ಮಳಿನತರಮಾಯ್ತು ಜಗತೀ
ತಿಳಕನ ನೆಗಟ್ದ ಜಿತಜಿನನ ಚಿತ್ತಮುದಾತ್ತಂ ೮೬

ಅಂತು ಶುದ್ಧಚಿತ್ತನಾಗಿ

1 ಘು ಘುಖಾ (ಕ) 2 ದಂ ಮಹಿಮೆಯ (ಗಚಜ) *'ಗಚಜ' ಪ್ರತಿಗಳಲ್ಲಿಲ್ಲ.

ಗುರುಗಳ್ಗೆಲ್ಲಂ ತ್ರಿಲೋಕೀಗುರು ನಿಜವಿಜಯೋದ್ಯೋಗಮಂ ಪೇೞ್ದು ಕಲ್ಪಾ
ಮರಸೈನ್ಯಂ [1]ಭಾಪು ಭಾಪೆಂ[1]ಬಿನೆಗಮಜಿತಸೇನಂಗೆ ರಾಜ್ಯಾಭಿಷೇಕಂ
ಬೆರಸಾಗಳ್ ಪಟ್ಟಬದ್ಧೋತ್ಸವಮನತಿಶಯಂ ಮಾಡಿ ಸಾಮ್ರಾಜ್ಯದೀಕ್ಷಾ
ಗುರು ತಾಳಲ್ ದೀಕ್ಷೆಯಂ ಭೋಂಕೆನೆ ತಳರ್ದನಯೋಧ್ಯಾಪುರೀಮಧ್ಯದಿಂದಂ ೮೭

ಅಂತು ಸೌಧರ್ಮೇಂದ್ರಸಂಪಾದಿತ ಪರಿನಿಷ್ಕ್ರಮಣ ಕಲ್ಯಾಣ ಪೂಜಾ ಪರಿಕರನ ನೇಕ ಮೂರ್ಧಾಭಿಷಿಕ್ತ ಭೂಭೃಚ್ಚಕ್ರಂಬೆರಸು [2]ಸಕಲ ಕುಲಾಚಲಚಕ್ರಂಬೆರಸು ಮೇರು[2]ಮಹೀಧರಮೆ ತಳರ್ವಂತೆ ತಳರ್ವಾಗಳ್ ಮುಂದೆ ಬಂದನರ್ಘ್ಯರತ್ನಮಯ ಶಿಬಿಕಾಲಂಕೃತಸ್ಕಂಧರಾಗಿ

ನಡಪುತುಮೊಯ್ದರೇೞಡಿವರಂ ಧರಣೀಶ್ವರರೊಯ್ದರಾಗಳೇ
ೞಡಿವರಮತ್ತಲಂಬರ[3]ಚರರ್ ಬೞ[3]ಕೀಲೞಡಿಯಂ ಸುರಾಸುರರ್
ತಡೆದಿರದೊಯ್ದರತ್ತಲಮರೇಶ್ವರರಾ ಪರಮೇಶ್ವರಂಗೆ ಬಂ
ದಡಿಗೆ ವಿನಮ್ರರಾಗಿಯೆ ಸಹೇತುವನಂಬರಮುಯ್ದರೀಶನಂ ೮೮

ಅಂತು ಸಕಲ ದಿಗ್ವಲಯಮುಮಂ ನಿಜಪ್ರಭೆಯಿನಲಂಕರಿಸುವ ಸುಪ್ರಭೆಯೆಂಬ ಸಿವಿ ಗೆಯನೇಱ[4] ರಾಗಹೇತು[4]ಕಂ ತಾ[4]ನಾಗಿಯುಂ ತನಗೆ ವಿರಾಗಹೇತುವಾದ ಸಹೇತುಕ ವನಕ್ಕೆ ಸಕಲ ಭುವನ ಭವನಪಾವನಮಪ್ಪ ಪರಮೇಶ್ವರಂ ಬರೆ

ಸುತಮೋಹದೆ ಪಿತೃಮೋಹದೆ
ಪಿತೃಸುತರೊಡವಂದರಶ್ರುಪೂರಿತ ನಯನರ್
ಜಿತಶತ್ರುನೃಪತಿಯು[5][ಮಾ] ವಿ
ಜಿತಸೇನೆ[ಯುಮ]ಜಿತ[5]ಸೇನನುಂ ಬೞ[5]ವೞ[5]ಯಂ ೮೯

ಜಿನಪಿತೃಗಳ್ ಜಿನತನಯಂ
ಜಿನೇಂದ್ರತವರೆಲ್ಲಮೊಡನೆ ತಳರಲೊಡಂ ಬಿ

---

1 ಬಾಷ್ಪು ಬಾಷ್ಪೆಂ (ಕ) 2 ಮೇರು (ಗಚಜ) 3 ರ್ವ (ಕ) 4 ವಂತ (ಗಚಜ)
ವಿಜಿತಸೇನೆ ತಾನಜಿತ (ಕ) ವಿಜಿತ ಸೇನಾನಜಿತ (ಗಚಜ) ವಿಜಯಸೇನೆ ತಾನಜಿತ (ಟ)

ವ್ಮನೆಯಾಗಿ ಮದುವೆಗಳುಪಿದ
ಮನೆಯಂದದಿನಿರ್ದುದಂದಯೋಧ್ಯಾನಗರಂ ೯೦

ದಿನಕರನಿಲ್ಲದಂಬರಮನಾವ್ರಮಹೀರುಹವಿಲ್ಲದೊಂದು ಕಾ
ನನ[1]ಮನ[1]ರಲ್ದ ಪಂಕರುಹವಿಲ್ಲದ ಪೂಗೊಳನಂ ವನೇಭಮಂ
ಡನನೆನೆ ಸಂದ ಯೂಥಪತಿಯಿಲ್ಲದರಣ್ಯಮದೇಂ ತ್ರಿಲೋಕಮಂ
ಡನನೆನೆ ಪೆಂಪುವೆತ್ತಜಿತನಿಲ್ಲದಯೋಧ್ಯೆಯುಮೊಪ್ಪಲಾರ್ಕುಮೇ ೯೧

ಇಂಪಿಲ್ಲದ ಕೇದಗೆಯುಂ
ಕಂಪಿಲ್ಲದ ಪೂ ಸುಪುತ್ರನಿಲ್ಲದ ಭವನಂ
ಪೆಂಪಿಲ್ಲದ ಕುಲವಧು ಗೃಹ
ಸಂಪತ್ತಿಲ್ಲದ ವಿಳಾಸಮೇನೊಪ್ಪುಗುಮೇ ೯೨

ರಸಮಿಲ್ಲದ ಕೃತಿ ದಾನ
ವ್ಯಸನಂ ತನಗಿಲ್ಲದರಸನಱನಿಲ್ಲದ............
................ ಕೆಡು[2]ದಪ್ಪ[2]
ದೆಸಕಂ ಘೃತಮಿಲ್ಲದೂಟಮೇನೊಪ್ಪುಗುಮೇ ೯೩

ನಾಯಕಮಿಲ್ಲದ ತೊಡವಿನ
ನಾಯಕನಿಲ್ಲದ ದಿನಾವಸಾನಂ ಪುಣ್ಯ
[3]ಶ್ರೀ[3]ಯಿಲ್ಲದ ಪೆರ್ಮೆ ಮದ
ಶ್ರೀಯಿಲ್ಲದ ಗಜಮದೇಂ ಮನಂಗೊಳಿಸುಗುಮೇ ೯೪

ಚಲಮಿಲ್ಲದ ಗಂಡಂ ತಂ
ಬುಲವಿಲ್ಲದ ವದನಮಾ[4]ಯುಮಿ[4]ಲ್ಲದ ತುಬಿಲಾಳ್
ಫಲಮಿಲ್ಲದ ತರು ಶೀತಲ
ಜಲಮಿಲ್ಲದ ಪೂಗೊಳಂ ಮನಂಗೊಳಿಸುಗುಮೇ ೯೫

ಕಡುಗೂರ್ಪಿಲ್ಲದ ಕರವಾಳ್
ಕಡುಪಿಲ್ಲದ ಕುದುರೆ ಗಾಡಿಯಿಲ್ಲದ ಬೆಲೆವೆಣ್

---

1 ಮ (ಕ) 2 ವುಪ (ಜ) 3 ಸ್ತ್ರೀ (ಗಜ) 4 ಯವಿ (ಗಜ) ಯುಮಿ (ಕ)

ನಡೆಯಿಲ್ಲದ ಕ[1]ರ್ತೆ[1] ಮನ
ಕ್ಕೆಡಂಬಡಂ ಮಾಱ್ಕಿಮರ್ತೆಯಂ ಮಾಡುಗುಮೇ ೯೬

[2]ದೊಣೆ[2]ಯಿಲ್ಲದ ಬಿಲ್ಲಾಳ್ ಬಿ
ನ್ನಣಮಿಲ್ಲದ ಕಿಱುಪು ಮಂತ್ರಿಯಿಲ್ಲದರಸು [3]ಮ
ನ್ನಣೆ[3]ಯಿಲ್ಲದ ನೃಪನೋಲಗ
ಮೆಣೆಯಿಲ್ಲದ ಜಕ್ಕವಕ್ಕಿ ಸೊಗಯಿಸಿದಪುದೇ ೯೭

[4]ಮಲ್ಲಿ[4]ಲ್ಲದ ಬಳಮುಂ ಮೂ
ಗಿಲ್ಲದ ಮೊಗಮಾನೆಯಿಲ್ಲದರಮನೆ ಸಂಪ
ತ್ತಿಲ್ಲದ ಮಾನಸವಾಳ್ ದಯೆ
ಯಿಲ್ಲದ ಧರ್ಮಂ ಮನಂಗೊಳಲ್ ನೆಱೆದಪುದೇ ೯೮

ಎಂಬಂತೆ ಭಿನ್ನನಾದ ಪೊೞ[5]ಲಂ[5] ಪರಮೇಶ್ವರನ ಬೞಿವೞಿಗೊಂಡು ಪೋಪ ಪುರಜನಂಗಳುಮಂ ಕಂಡುಮಂತಃಪುರದೊಳಿರ್ದ ಸಹಸ್ರಾಂಗನೆಯರಾಕುಳವ್ಯಾಕುಳೆಯರಾಗಿ

ದೇವನನಾ ಲೋಕಾಂತಿಕ
ದೇವರ್ ವಂದೇನನಪ್ಪೊಡಂ ಗಳಪಿ ತಪೋ
ಭಾವನೆಗೆಱಗಿಸಿದರ್ ನಮ
ಗಾವುದು ಸೂೞಿಕ್ಕ ಪೇೞಿಮಿನ್ನೇಗೆ[6]ಯ್ವೊಂ[6] ೯೯

ಎಲ್ಲಿಲ್ಲದ ಸುರಗಣಿಕೆಯ
ರೆಲ್ಲಿಲ್ಲದ ದೇವಿಯರ್ಕಳಗಲರುಸಿರ್ಪ
ತ್ತಿಲ್ಲ ನಮಗವರೆ ಜಗತೀ
ವಲ್ಲಭನಂ ಪೞ್ಚಿವೞ್ಚಿ ಮೆೞ್ಚಿಸಿಕೊಂಡರ್ ೧೦೦

1 ರ್ತ (ಗಜಟ) 2 ದೊರೆ (ಕಗಜ) 3 ಮಂತಣೆ (ಕ) ಮಂತಣ (ಟ) 4 ಮಲ್ಲಿಗೆಯಿ (ಚ) 5 ಲುಂ (ಕಗಚಜ) 6 ಯ್ವಂ (ಗಚಜ)

ತಲೆ[1]ತ[1]ರಟಪ್ಪಿನಮಡಕಿದ
[2]ರ[2]ಲಸದೆ ದೇವಂಗೆ ದೇವಿಯರ್ ಪುಷ್ಪಫಲಾ
ವಳಿಯಂ ದಿವ್ಯಾಂಬರಮಂ
ವಿಲೇಪನಂಗಳನವಕ್ಕೆ ಮೆಚ್ಚದರೊಳರೇ ೧೧೧

ಮನಮನದೊಳ್ ದೇವಂ ನ
ಮ್ಮನಿಬರೊಳಂ ನುಡಿವುದಲ್ಲದಗ್ಗಲಿಸುವುದಿ
ಲ್ಲೆನಸುಂ ತ್ರಿಭುವನತಿಲಕನ
ಮನಮಂ ದಿವಿಜೆಯರೆ ನೆರೆದು ಗೆಂಟಾಗಿಸಿದರ್ ೧೧೨

ಅನಿತಕ್ಕತರ್ಕ್ಯಮಲ್ಲದೆ
ಜನಪತಿ ನಮಗಕ್ಕೆ ಪೇೞ್ದುಪೋದನೆ ಪೇೞಿಂ
ಮುನಿಯುದೆ ಮುನ್ನಣಮಿಲ್ಲದ
ಮುನಿ[3]ಸೆ[3]ಲ್ಲಂ ಬಂದದಾಯ್ತಿದೇಂ ಕಾರಣಮೋ ೧೧೩

ಅಂತು ಕೆಲರಲ್ಲಿ ವಿವೇಕವಿಕಳೆಯರಾಗಿ ನುಡಿಯೆ ವಿವೇಕಿಗಳಂ ಬರಿಸಿ

ಸುರಲೋಕಸುಖಮನೊಲ್ಲದೆ
ನರಲೋಕಕ್ಕಿರದೆ ಬಂದು ಮುಕ್ತಿಶ್ರೀಯೊಳ್
ನೆರೆಯಲ್ ಪೋದಪನಱಿಯಿರೆ
ಸುರವಧುವರನಂತು ಬಗೆದು [4]ಪುಟ್ಟನೆ[4] ದೇವಂ ೧೧೪

[5]ಆವೀ[5] ನೆರಪಿದ ದುಷ್ಕೃತ
ಮಾವುದು ಗಡ ನಡೆಯಿವೊಡನಸುಂಗಳೆದಪಮಾ
ದೇವಂ ಬಲ್ಲಿದನೆಮಗೆ ಮ
ನೋವಲ್ಲಭನಿಂತುಟೆಂದು ಬಗೆವೇೞ್ದಪನೇ ೧೧೫

---

1 ದ (ಕ) 2 ಮ (ಗಚಜ) 3 ಸಿ (ಗಚಜ) 4 ಪಟ್ಟತಪತನು (ಗಚಜ) 5 ಆವಿಧಿ (ಗಚಜ)

[1]ಕಳೆ[1]ಸಿರಿಗನ್ನಡಿಯುಂ ಮಂ
ಗಳವಸದನಮೇವುದಕ್ಕ [2]ಕಾ[2]ಲಲತೆಗೆಯುಂ
ಕಳೆ ತೊಡೆದು ಕಣ್ಗೆ ಕಜ್ಜಲ
ವಿಳಾಸವಿನ್ನೇವು[3]ದೆಮಗವೇ[3]ಗೆಯ್ದಪುವೋ ೧೦೬

ಕಳೆ ಸೀಗುರಿಯುಂ ಡವಕೆಯು
ನೊಳಗಿಡು ಚಾಮರಮನಿಕ್ಕದಿರು ಸಕಳ ಜಗ
ತ್ತಿಳಕನುಱಿದಿರ್ದ ವೇಃಯ್ಮೆಯ
ವಿಳಾಸವೆಮಗಾತನಿಲ್ಲದೆಂತೊಪ್ಪುಗುಮೋ ೧೦೭

ಬಿಡಿಮಿಂದೀ ವರರಾಜಹಂಸೆಗಳನಿನ್ನೀ ರಾಜಕೀರಂಗಳಂ
ಬಿಡಿಮಿಂತೀ ಮೃಗಪೋತಕಂಗಳನಿವಂ ಕೊಂಡೊಯ್ದು ಕಾಂತಾರದೊಳ್
ಬಿಡಿಮಿಾ ಬಾಜಿಪ ಬೀಣೆಯುಂ ತಿಸರಿಯುಂ ಕೊಳ್ಳೆಂದು ಬಲ್ಲಂಗಿವಂ
ಕುಡಿಮೇಗೆಯ್ದಪೆಮಾಮಿವಕ್ಕೆಮಗಿ[4]ವಿ[4]ರ್ದಿನ್ನೆಲ್ಲಮೇಗೆಯ್ವುದೋ ೧೦೮

ಎಂದು ಪರಿಚಾರಕಗಣಕ್ಕಪ್ಪಯಿಸಿ

ನಿಮಗೆಂದಪ್ಪಡಮಾಮುಱಿ
ಯೆ ಮನಃಕ್ಷತಮಾಗಿಯುಱಿಯದೆಮ್ಮಿಂದಮಿದಂ
ಸಮವಾಯಂ ಮಾಡಿದೊಡಂ
ಕ್ಷಮಿಯಿಪುದೆಂದೆರೆದರಜ್ಜರುಂ ಗುಜ್ಜರುಮಂ ೧೦೯

[5]ಅಂತೊರೆ[5]ದನಿಬರುಮೊಂದೆಡೆಗೆನಂದು

ಇಂದಜಿತಂ ತಪೋವನಕೆ ಪೋದನಧೀಶನೆ ಪೋಗೆ ಮಾಣಲಾ
ಗೆಂದೊಡಮೋಗಲಿರ್ದೆಮುದಱಿಂ ಬೆಸಕೇಳ್ದಪೆಮೆಂದು ನಮ್ಮ ತಾಯ್

1 ಕೆಳೆ (ಗಚಜ) 2 ಕು (ಗಚಜ) 3 ದಕ್ಕಮೇ (ಗಚಜ) 4 ದ (ಳ) ಮ (ಗಚಜ)
5 ಅಂತಿರ (ಗಚಜ)

ತಂದೆಗೆ ಪೇೞ್ದು ಬನ್ನಿಮೊಡನಾಡಿದ ಮೇಳದವಳ್ದಿರೆಲ್ಲಮೇ
ನೆಂದಪಿರಕ್ಕ ನೇಲ್ದ[1]ಳಪಿ[1] ಮಾಣ್ದೊಡೆ ದುರ್ಜನಮಲ್ತೆ ಸಜ್ಜನಂ ೧೧೦

ಎಂದು ಪರಿಚ್ಛೇದಂಗೆಯ್ದುನಿಬರುಂ ನಿತಂಬಿನಿಯರ್ ತಂತಮ್ಮ ಚೆಂಬೊನ್ನ ಮಾಡದ ನೆಲೆಯನೇಱಿ ನಿಜಗೃಹೋಪವನಕ್ಕೆ ಮುನ್ನೀರೆಱೆದು ನಡಪಿ ಬೆಳೆಯಿಸಿದ ಬಾಳಾಶೋಕಪಾದಪಾದಿಗಳ್ಗೆ ಮುಕುಳಿತಾಂಜಲಿಯರಾಗಿ

ಲಲಿತ ಲತಾಲಯಂಗಳಿರ ಸುಂದರ ಕಾನನ ಚಂದನದ್ರುಮಂ
ಗಳಿರ ತಳಿರ್ತಶೋಕೆಗಳಿರಾ ಸಹಕಾರತಮಾಲ ಭೂರುಹಂ
ಗಳಿರ ವಿಯೋಗಮಾದುದೆಮ[2]ಗಂ ನಿಮಗಂ[2] ಬೆಸಕೆಯ್ವೆವೆಂದು ವಿ
ಹ್ವಳೆಯರಗಲ್ಕೆಯೊಳ್ ನೆಗಪಿದರ್ ವಸಮಲ್ಲದ ಬಾಷ್ಪವಾರಿಯಂ ೧೧೧

ಅಂತು ಬಾಷ್ಪವಾರಿಧಾರಾಪೂರಿತ ನೇತ್ರೆಯರುಮತಿ[3]ಶಯ[3]ಚಕಿತಗಾತ್ರೆಯರುಮಾಗಿ

ಎಲೆ ಪರಪುಟ್ಟ ಕೇಳೆಲೆ ಮಧುವ್ರತ ಕೇಳೆಲೆ ರಾಜಕೀರ ಕೇ
ಳೆಲೆ ಕಳಹಂಸ ಕೇಳೆಲೆ ಸರೋಜಿನಿ ಕೇಳೆಲೆ ಚೂತರಾಜ ಕೇ
ಳೆಲೆ ವನರಾಜಿ ಕೇಳ್ ನೆನೆಯುತಿರ್ಪುದು ಕೂರ್ಪುದು ಸೈರಿಸಿರ್ಪುದ
ಗ್ಗಲಿಸಿದ ನಲ್ಮೆ ತಣ್ಮಲೆಯೆ ಬೆನ್ನನೆ ಪೋದಪೆಮೆಮ್ಮ ಸಾಮಿಯಾ ೧೧೨

ಎಂದು ಮೆಲ್ಲನಲ್ಲಿಂದಗಲ್ದು ಕಳೆದು ಗದ್ಗದಕಂಠೆಯರ್ [4]ಕಲ[4]ಕಂಠಾದಿಗಳಂ ಬೀೞ್ಕೊಂಡು ಮುಕ್ತಿಲಕ್ಷ್ಮೀಸಮಾಗಮಸಮುತ್ಕಂಠಚಿತ್ತನಾಗಿ ಪೋದ ನಿಜವಲ್ಲಭನಂ ನೆನೆನೆನೆದು

ಪಿರಿದುಂ ಪುಣ್ಯದೆ [5]ಪ[5]ತಿಯುಂ
ಪರಮೇಶ್ವರ ಪಡೆದು ನಿನ್ನನಾವನುಭವಿಸು
ತ್ತಿರಲೆಯ್ದೆ ಪಡೆದೆವಿಲ್ಲಂ
ತರಾಯಮಾಯ್ತೆಮಗದೊಂದು ವಿಧಿವಶ[6]ದಿಂದಂ[6] ೧೧೩

1 ಳಿಸಿ (ಗಜ) ಳಸಿ (ಚ) 2 ಗಂ (ಗಚಜ) 3 ಭಯ (ಕಟ) 4 ಕಳಾ (ಕಗಚಜ)
5 ಸ (ಗಚಜ) 6 ದಿಂ (ತ)

ನಿನಗಂಜಿ ಬೆರ್ಚಿ ಬೆಸಕೆ
ಯ್ವನಿಬರನಿರಲಿತ್ತುದಿಲ್ಲ ಬಿದಿ ತಳ್[1]ರ್ದೆ[1] ತಪೋ
ವನದತ್ತ ಜಗತ್ರಯಪಾ
ವನ ತಡೆದಿರೆವಾಗಿ ನಿನ್ನ ಲೋಕಮೆ ಲೋಕಂ ೧೧೪

ಏನೆಮ್ಮ ಮನಮೆ ಶೂನ್ಯಂ
ನೀನಿಲ್ಲದ ರಾಜಮಂದಿರಂ ಶೂನ್ಯಮಯೋ
ಧ್ಯಾನಗ[2]ರ[2] ಶೂನ್ಯಮಖಿಳಾ
ಸ್ಥಾನಂ ಶೂನ್ಯಂ ತ್ರಿಲೋಕಮಂಡನತಿಲಕಾ ೧೧೫

ನಿಂದ[3]ಪೆಮೆ[3] ನಿನ್ನ ಬಟಿಯನೆ
ಬಂದಪೆವೇಕಿಪ್ಪೆ ಮಜಿತವಲ್ಲಭ ನಿತ್ಯಾ
ನಂದಕರ ವಿಜಯಸೇನಾ
ನಂದನ ಜಿತಶತ್ರುಪುತ್ರ ಕಾಶ್ಯಪಗೋತ್ರಾ ೧೧೬

ಎಂದು ಮುಂದೆ [4]ನಿಂದನೊಳ್[4] ನುಡಿವಂತೆ ನುಡಿದು ನೋಡಿ ಕಾಣದೆ

ಗುಣನಿಧಿಯೆತ್ತಣಂ ಭುವನಪೂಜಿತನೆತ್ತಣನಿಂದ್ರವಂದ್ಯನೆ
ತ್ತಣನಕಳಂಕನೆತ್ತಣನಘಾಂತಕನೆತ್ತಣನಸ್ತದೋಷನೆ
ತ್ತಣನಭಿರೂಪನೆತ್ತಣನನಿಂದಿತನೆತ್ತಣನೀಶರೂಪನೆ
ತ್ತಣನಖಿಳಾವನೀತಿಲಕನೆತ್ತಣನುತ್ತಮಸತ್ವನೆತ್ತಣಂ ೧೧೭

[5]ಪ[5]ದಯಿದನೆಲ್ಲಿದಂ ಪರಮನೆಲ್ಲಿದನುಜ್ಜ್ವಲಹೇಮವರ್ಣನೆ
ಲ್ಲಿದನಭಿಮಾನಿಯೆಲ್ಲಿದನಸಂಚಳನೆಲ್ಲಿದನಪ್ರಮಾದಿಯೆ
ಲ್ಲಿದನವಧಾತ್ರವೆಲ್ಲಿದನಿಭಧ್ವಜನೆಲ್ಲಿದ[6]ನಾಪ್ತತತ್ವನೆ[6]
ಲ್ಲಿದನಬಲಾಮನೋರಮಣನೆಲ್ಲಿದನೆಲ್ಲಿದನೋ ಮನಃಪ್ರಿಯಂ ೧೧೮

1 ರ್ದೆ (ಕಗಚಜ) 2 ರಂ (ತ) 3 ಪಮೆ (ಗಚಜ) 4 ನಿಂದನೆನ್ನೊಳ್ (ಗಜ) 5 ಸ ಚ) 6 ನೆಮ್ಮಕಾಂತನೆ (ಗಚಜ)

ಪೀನ ಭುಜದ್ವಯಂ ಸುಭಗಶುಂಭದುರಸ್ಸ್ಥಲನೆತ್ತವೋದನ
ಬ್ಜಾನನನೆತ್ತವೋದನಸಿತೋತ್ಪಲಲೋಚನನೆತ್ತವೋದನಿಂ
ಧ್ರಾನತನೆತ್ತವೋದನುದಿತೋದಿತ ವೈಭವನೆತ್ತವೋದನಂ
ಭೋನಿಧಿ ದುಂದುಭಿಧ್ವನಿಗಭೀರಕಳಸ್ವನನೆತ್ತವೋದನೋ ೧೧೯

ಬಡವರ ನಂಟನಾವೆಡೆ ದಯಾಪರನಾವೆಡೆ ಧರ್ಮಚಿತ್ತನಾ
ವೆಡೆ ಶುಭ[1]ವೃತ್ತ[1]ನಾವೆಡೆ ಮಹೋದಯ[2]ನಾವೆಡೆ ಪು[2]ಣ್ಯಭಾಜನಾ
ವೆಡೆ ಜನನಾಥನಾವೆಡೆ ಶುಭಾಕರನಾವೆಡೆ ಸತ್ಯವಾಕ್ಯನಾ
ವೆಡೆ ಗುಣಸಿಂಧುವಾವೆಡೆ ಮನೋರಮನಾವೆಡೆ ಪೇಟಲಾಗದೇ ೧೨೦

[3]ಎಂದು[3] ಪ್ರಲಾಪಂಗೆಯ್ದು

ಪಡಪಡವಾಯ್ದು ಮೆಲ್ಲೆರ್ದೆಗಳಂ ಕರಯುಗ್ಮದಿನೊತ್ತಿ ಕಣ್ಣನೀ
ರಡಿಗಡಿಗುಣ್ಮಿ ಪಾಯ್ತರೆ ಮುಖೇಂದು ಬಿಗು[4]ರ್ತಿ[4]ರೆ ಸುಯ್ಯಬೆಂಕೆಯುಂ
ನಿಡುಪಮಳುಂಬಮಪ್ಪಿನೆಗಮಾಶನದೆಲ್ಲಿದನೆತ್ತವೋದನಾ
ವೆಡೆಯುನಧೀಶನೆಂದು ಪಲವಾಡಿದರಂದಜಿತಾಂಗನಾಜನಂ ೧೨೧

ಅಂತು ಪಲವಾಡಿ

ಮಾವನುಮೆಮ್ಮತ್ತೆ[5]ಯಿರುಂ[5]
ದೇವನುಮಿರಿಸಿಟ್ಟು ಪೋದರಿನಿಬರುಮಂ ಶೂ
ನ್ಯಾವಾಸದೊಳಿಂತಿರೆ ಪುದಿ
ದಾವುದು [6]ನಿನ[6]ಗುಚಿತಮಜಿತಸೇನಕುಮಾರಾ ೧೨೨

ತಮ್ಮ ಮಗಂ ಬಗೆಯದೊಡೋ
ವೆಮ್ಮತ್ತೆಯುಮೆಮ್ಮ ಮಾವನುಂ ಬಗೆಯದೆ ಚೀ
ಕೆಮ್ಮನೆ ಪಾಟ್ಸಿನೆಯೊಳ್ ಗುಱು
ಗುಮ್ಮನೆ ಸುಱಿದಿರದೆ ಪೋಪಮಜಿತನ ಬಱಿಯಂ ೧೨೩

1 ಚಿತ್ತ (ಚಜ) 2 ಪು (ಗಚಜ) 3 ಅಂತಾ (ಗಚಜ) 4 ಳ್ತಿ (ಕಗಚಜ)
5 ಯರುಂ (ಕ) 6 ನಿಮ (ಗಜ)

ಎಂದು ಮಾಡದಿಂದಿೞಿದು ಪೋಗಲ್ ಬಗೆದ ಸಾಸಿರ್ವರರಸಿಯರನಂತಃಪುರ ಸಂಚರತ್ಕಂಚುಕಿಗಳ್ ಬಾಜಿಸಿ ನಿಮ್ಮನೆಮ್ಮರಸನ ಬೆಸಸಿಲ್ಲ[1]ದೆಲ್ಲಿಗಂ[1] ಪೋಗ ಲೀಯೆಂ ನೀವೆಲ್ಲಮಮರೇಂದ್ರವಂದ್ಯನವನ ಜಾನನ ಷಟ್ಕರಣಾವಧಿಯಂ ಮಾಡಿ ಬೞಿಕ್ಕೆ ನಿಮ್ಮ ಬಗೆವುದಂ ಬಗೆಯಿಮೆಂದೆ[2]ನಿ[2]ತಾನುಂ ಮಾಣಿಸಿದರಿತ್ತ ಪರಮೇಶ್ವರ ನತಿ ಲಲಿತ ಕಪಿಶ ಕಿಸಲಯಂಗಳಿಂ ವಿದ್ರುಮಮಿರ್ಪಂತಿರ್ದ ಸಪ್ತವರ್ಣದ್ರುಮದ ಮೊದಲೊಳ್ ಷಷ್ಠೋಪವಾಸದಿಂ ಮಾಘ ಶುದ್ಧ ನವಮಿಯಪರಾಹ್ಣದೊಳ್ ರೋಹಿಣೀನಕ್ಷತ್ರದೊಳ್ ಸಾಸಿರ್ವರರಸುಮಕ್ಕಳ್ ಧನಧಾನ್ಯದ್ವಿಪದ ಚತುಷ್ಪದ ಯಾನ ಶಯನಾಸನ ಕುಪ್ಯಭಾಂಡ ದಶವಿಧ ಚೇತನಾಚೇತನದ ಭೇದ ಲಕ್ಷಣಮಪ್ಪ ಬಾಹ್ಯಪರಿಗ್ರಹಮುಮಂ ಮಿಥ್ಯಾತ್ವ ಕ್ರೋಧ ಮಾನ ಮಾಯಾ ಲೋಭ ಹಾಸ್ಯ ರತ್ಯರತಿ ಶೋಕ ಭಯ ಜುಗುಪ್ಸಾವೇ[3]ಧ[3]ರಾಗ ದ್ವೇಷ ಚತುರ್ದಶಭೇದಮಪ್ಪಭ್ಯಂತರ ಪರಿಗ್ರಹಮುಮಂ ಪತ್ತುವಿಟ್ಟ[4]ತಿ[4]ಸುಂದರ . ಚಂದನದ್ರವ್ಯಚ್ಛಟಾಚ್ಛಾದಿತಮುಮ ಮರೇಂದ್ರ ಸುಂದರೀನಿಕಾಮ ಕೋಮಲ ಕರತಲಾವಿರಚಿತಾನೇಕ ರತ್ನೋಪಹಾರಮು ಮತಿ ವಿಚಿತ್ರ ಮಣಿಮಯಮಂಡಪಮುಪ್ಪ ಚಂದ್ರಕಾಂತಾಶಿಲಾತಲದೊಳ್ ಪೂರ್ವಾ ಭಿಮುಖನುಂ ಬದ್ಧಪರ್ಯಂಕಾಸನನುಮಾಗಿರ್ದ ಮಹಾಪ್ರತಿಹಾರಿಭೂತ ಪುರು ಹೂತ ದೂರೋತ್ಸಾರಿತ ನಿಖಿಲ ಪರಿಜನನು[5]ಮಪ[5]ಗತಕ್ಷೋಭನುಮಾಗಿ ಪ್ರಾರಬ್ಧ ಸಂಗೀತ ಮಂಗಳಸಂಗತಮಪ್ಪ ಜವನಿ[6]ಕಾ[6]ಮಧ್ಯದೊಳು[7]ಪಚಿತ[7] ದಿವ್ಯವಸ್ತ್ರ ಮಾಲ್ಯಾಭರಣನಾಗಿ ಸರ್ವ ಸತ್ವಂಗಳೊಳ್ ಸಮಸತ್ವಮಂ ಭಾವಿಸುತ್ತುಂ ತ್ರಿಸಾಕ್ಷಿಕ ನಾಗಿ ಪಂಚಮುಷ್ಟಿಯಿಂ

ನೆಗಟ್ದಂ ತೀರ್ಥಕರೇಶ್ವರಾಗ್ರಣಿ ನಮಸ್ಸಿದ್ಧೇಭ್ಯಯೆಂದಿಂದ್ರವಂ
ದ್ಯಗುಣಂ ಕರ್ಮದ ಬೇರ್ಗಳಂ ಪೞಿವವೊಲ್ ನೀಲಾಳಿಮಾಲಾ ವಿಲಾ
ಸಿಗಳಂ ಕೇಶಸಮೂಹಮಂ ಪಱಿವುದುಂ ತ್ರಿಜ್ಞಾನಿಗಾಗಳ್ ಪೊದ
ಱಿದ್ದಗೆದತ್ಯುತ್ತಮ ದೀಕ್ಷೆಯಂ [8]ಕೊಳ್[8]ಲೊಡಂ ಜ್ಞಾನಂ ಮನಃಪರ್ಯಯಂ ೧೨೪

ಚತುರ[9]ಸದವ[9]ಗಮನ [10]ಸಮ
ನ್ವಿ[10]ತನಜಿತಂ ಪರಮಯೋಗಿ ಪರಲೋಕಗತಾ

---

1 ದದೆಲ್ಲಿಗಂ (ಕ) ದೆಲ್ಲಿ (ಚ) ದೆಲ್ಲಿದಂ (ಜ) 2 ನೆ (ಕಗಚಜ) 3 ದ (ಕಚ) ಗ (ಟ) 4 ತಿಭೇದ (ಚ) 5 ಮಾಗಿ (ಗಚಜ) 6 ಕೆಯ (ಟತ) 7 ಪರಿಚಿತ (ಕ) ಪಚಿತ (ಗಜ) ಪರಚಿತ (ಟ) 8 ಕೊಡ (ಚ) 9 ವ (ಗಜ) ವಂ (ಚ) 10 ಸಮನ್ವಿತಬ್ರ (ಚಜ)

ಗತ ಕಾರ್ಯಕಳಾಪದೊಳವ
ಹಿತನಾ[1]ದನ್ನದೆ[1] ಜಿಗೀಷು [2]ವು[3]ಬ್[3]ದಿರ್ದಪನೇ ೧೨೫

ಆ ದೀಕ್ಷಾವಲ್ಲರಿ ಜಿನ
ಪಾದಸರೋಜದೊಳನಂತಸುಖಫಲವೆಸೆದ
ತ್ತಾದವೆ ಮಹಾಶ್ರಯಂ ತಮ
ಗಾದೊಡೆ ಸಫಲಾತ್ಮವೆಸೆವುದೊಂದಚ್ಚರಿಯೇ ೧೨೬

ಅಂತು ಸರ್ವಸಾವದ್ಯವಿರತಿಯೊಳ್ ಸಾಮಾಯಿಕ[3]ವ್ರ[3]ತಸಮಿತಿ ಗುಪ್ತಿಸಮನ್ವಿತ ಮನವಲಂಬಿಸಿ ನಿಲ್ವುದುಮಾಗಳಾ ಚತುರ್ಜ್ಞಾನಾಂಭೋನಿಧಿ[4]ಯುಂ[4] ಮಧು ಕರನಿಕರ ನಿಕಾಶಕೇಶಪಟಲಮಂ ತನ್ನ ಹಸ್ತಪಟ[5]ಲಕ[5]ದೊಳಾಂತುಕೊಂಡು ಪಂಚ ಮಾಂಭೋಧಿಯೊಳಮರೇಂದ್ರವೃಂದವೊಯ್ದಿಕ್ಕುವುದುಂ

ಪ್ರಕಟದ್ಯುತ ಪ್ರವಾಳ
ಪ್ರಕರಮುಮಾ ತೀರ್ಥಕರ ವಿಶೇಷಕನಳಕ
ಪ್ರಕರಮುಮೊಡನೆಸೆದುವು ಪೋ
ಲ್ತು ಕೇಳಿವೆರಸಿರ್ದ ಪವಳ[6]ಮಂ[6] ನೀಲಮುಮಂ ೧೨೭

ಕರಮುಱುವಾಱು ದುಗ್ಧ[7]ಜಲ[7]ವಿಕ್ರಯದಿಂ ದೊರೆಕೊಂಡುದೀ ಜಿನೇ
ಶ್ವರನಳಕಂಗಳೆಂಬ ಹರಿನೀಲಚಯಂಗಳ ಲಾಭಮಾಗವೆಂ
ದಿರದನುರಾಗದಿಂ ಕುಣಿಯುತಿರ್ಪವೊಲಿರ್ದುದು ವೀಚಿಬಾಹುಗಳ್
ಬೆರಸಳಿಸಂಚರಚ್ಚಟುಳ ಭಾಸುರ ಸಂಚಲ ಪಂಚಮಾರ್ಣವಂ ೧೨೮

ಆ ಪ್ರಸ್ತಾವದೊಳ್

ಪರಿಹೃತವಸನಂ ವಿಗತಾಂ
ಗರಾಗನಪನೀತ ಭೂಷಣಂ ವಿಬುಧಜನೋ

1 ದಂ ವಿ (ಗಚಜ) 2 ವೃತ್ತಿಮ (ಗಚಜ) 3 ಬ್ರ (ಕಗಚಜ) 4 ಯ (ಗಚಜ) 5 ಲ (ಗಜ) 6 ಮುಂ (ಗಚಜ) 7 ಚಳ (ಜ)

ದ್ಧರಣಂ ಪಯೋದಸಂಧ್ಯಾ
ನುರಾಗಭರಣವ್ಯಪೇತ ರವಿಯಂತಿರ್ದಂ ೧೨೯

ಪರಮೇಶ್ವರನಜಿತನಜಾ
ತರೂಪ[1]ನು[1]ತ್ತಪ್ರ ಜಾತರೂಪದವೊಲದೇಂ
ಕರವೆಸೆದುದೊ ನೋಡುವೊಡಾ
[2]ಸುರೂಪ[2]ಮೇಂ ಜಾತರೂಪದಂತೊಪ್ಪುಗುಮೇ ೧೩೦

ಅಂತಾ ಪರಮೇಶ್ವ[3]ರಂ[3] ಪರಮತಪಸ್ಸಂಯಮಧರನಪ್ಪುದುಂ ಶೋಕಾಕುಳೀಕೃತ ಚಿತ್ತರಾದ ತೀರ್ಥಕರಗುರುಗಳುಮಜಿತಸೇನಕುಮಾರನುಮನೆನಿತಾನುಂ ಸಂತಯಿಸಿ ಸಾಕೇತನಗರಕ್ಕೆ ಕಳಿಪಿ ಬಟಿಯಂ ಪ್ರಥಮತೀರ್ಥೇಶ್ವರಂಗೆ ಮಾಡಿದಂದದೊಳೆ ಪರಿನಿಷ್ಕ್ರಮಣಪೂಜೆಯಂ ಮಾಡಿ

ವಿವಿಧ ಸ್ತೋತ್ರಂಗ[4]ಳಿಂದಂ[4] ಸ್ತುತಿಯಿಸಿ ಭುವನಸ್ತುತ್ಯನಂ ಭವ್ಯವೃಂದೋತ್ಸವಪಂಕೇಜಾತದೊಳ್ ದೇವ[5]ನ್[5] ಪದಯುಗದೊಳ್ ಮುಗ್ಗಿ ಗಂಧಾಕ್ಷತಾದ್ಯಷ್ಟವಿಧೋತ್ಕೃಷ್ಟಾರ್ಚನಾದ್ರವ್ಯದಿನಭವನನಭ್ಯರ್ಚಿತಂ ಮಾಡಿ ಬೀಟಿ೩ಳ್ಕೊಂಡು ವಿಮಾನಶ್ರೇಣಿ ಸು[6]ತ್ತುಂ[6] ಬರೆ ಸುರಪತಿಗಳ್ ತಮ್ಮ ತಾಣಕ್ಕೆ ಪೋದರ್ ೧೩೧

ಇದು ಸಕಲ ಮುನೀಂದ್ರ ವೃಂದ ವೃಂದಾರಕ ಶ್ರೀಮದಜಿತಸೇನಭಟ್ಟಾರಕ ಶ್ರೀಪಾದಪದ್ಮಪ್ರಸಾದಾಸಾದಿತ [7]ರತ್ನ[7]ತ್ರಯಾಲಂಕೃತ ಶ್ರೀಮದಭಿನವ ಕವಿಚಕ್ರವರ್ತಿ ಕವಿರತ್ನ ವಿರಚಿ[8]ತ[8] ಶ್ರೀ ದಾನಚಿಂತಾಮಣಿ [9]ನಿ[9]ರ್ಮಾಪಿತ ಶ್ರೀಮದಜಿತತೀರ್ಥಕರ ಪುರಾಣ ತಿಲಕದೊಳ್

ದೀಕ್ಷಾಗ್ರಹಣ ವರ್ಣನಂ

ಷಷ್ಠಾಶ್ವಾಸಂ

---

1 ಮು (ಕಗಚಜ) 2 ರೂಪು (ಕಚ) ಸುರೂಪು (ಗಜ) 3 ರಂಗೆ ಮಾಡಿದಂದದೊಳೆ ಪರಿನಿಷ್ಕ್ರಮಣಪೂಜೆಯಂ ಮಾಡಿ (ಚ) 4 ಳಿಂ (ಗಚಜ) 5 ನಾ (ಗಚ) 6 ತ್ತ್ರಂ (ಗಜ) 7 ಶ್ರೀರತ್ನ (ಗಚಜ) 8 ತಮಪ್ಪ (ಗಚಜ) 9 ವಿನಿ (ಕಟಿತ)

# ಸಪ್ತಮಾಶ್ವಾಸಂ

ಶ್ರೀಮತ್ಕಾಶ್ಯಪಗೋತ್ರ ಶಿ
ಖಾಮಣಿ ಭವ್ಯಜನಕಲ್ಪತರು [1]ಕಲ್ಪಂ ಕ[1]
ಲ್ಪಾಮರಪೂಜಿತನಜಿತ
ಸ್ವಾಮಿ ಸಮೀಚೀನಚರಿತನಪಗತದುರಿತಂ ೧

ಅಂತಂದಿನ ದಿವಸಮಲ್ಲಿಯೆ ನಿಂದೆರಡನೆಯ ದಿವಸದೊಳ್ ದಿವಸಕರಮಂಗಳ ಪ್ರಕಾಶಭಾಸುರಂ ದಾನಧರ್ಮಪ್ರಕಾಶನಂ ಮಾಡಲೆಂದು ಸಮ್ಯಕ್ತ್ವವೀಕ್ಷಿತೋಭಯ ಪ್ರಚಾರಮುಂ ಪ್ರವಿಷ್ಟಪೂರ್ವಪರಸ್ವಾಂಗದೇಶ ವಿಧಾನಮುಮಾಚಾ[2]ರ್ಯ ಸೂಕ್ತ[2] ಪ್ರೋಕ್ತ ದೇಶಕಾಲಮುಂ ಲಾಭಾಲಾಭ ಮಾನಾವಮಾನಸಮಾನಮನೋವೃತ್ತಿಯುಂ ಗೀತನೃತ್ಯ ಪ್ರಸೂತಿಕಾಸುತ ಪಣ್ಯಾಂಗನಾ ಪಾಪಕರ್ಮ ದೀನಾನಾಥ ಜನ ದಾನಶಾಲಾ ವಿವಾಹಾದಿ ಮಂಗಳಗೇಹವರ್ಜಿತಮುಂ ಲೋಕಗತಪರಿವ[3]ರ್ಜ[3]ನೋಪಗತಲಕ್ಷಿತ ಜಿನವೃತ್ತಿವಿಗಮುಮುಂ ಪ್ರಾಸುಕಾಹಾರಗವೇಷಣ ಪ್ರಣಿಧಾನ ಪರಾಯಣಮುಮಪ್ಪ ಭೈಕ್ಷ್ಯ[4]ಸಿ[4]ದ್ಧಿಯೊಳು ಷಟ್ಚತ್ವಾರಿಂಶದ್ದೋಷ ವಿರಹಿತಮುಂ ನವಕೋಟಿ ಪರಿಶುದ್ಧ ಮುಂ ಗೋ[5]ಚಾರ[5]ಮುಮಕ್ಷಮ್ರಕ್ಷಮುಂ [6]ಉ[6]ದರಾಗ್ನ್ಯುಪಶಮನಮುಂ [7]ಭ್ರಮರಾ ಹಾರಮುಂ ಶ್ವಭ್ರ[7]ಪೂರಣಮುಮೆಂಬ ಪಂಚವಿಧಾಹಾರದಿಂ ಮಾರ್ಗಪ್ರಬೋಧನಾ ರ್ಥ[8]ಮುಂ[8] ಮುಕ್ತಿಸುಖಸಿದ್ಧ್ಯರ್ಥಮುಮಾಗೆ ಕಾಯಸ್ಥಿತಿಯಂ ಮಾಡಲೆಂದು ನಾನಾ ವಿಧಾಯನಾಶ್ರಯಕೃತಾವಧಾನಜನಿತ ಪ್ರಯತ್ನ ಪರಿ[9]ಹೃತ[9] ಪ್ರಾಣಿ ಪೀಡೆಯುಂ ದ್ರುತವಿಲಂಬಿತಸಂಭ್ರಾಂತಾ ವಿಸ್ಮಿತ ಲೀಲಾವಿಕಾರದಿಗವಲೋಕನಾದಿ ದೋಷವಿರಹಿತನುಮಪ್ಪ ಈರ್ಯಾಪಥಶುದ್ಧಿಯೊಳ್ ನೆಱೆದು ಯುಗಾಂತರದೃಷ್ಟಿ ಯಾಗಿ ಚರ್ಯಾಮಾರ್ಗದಿನಯೋಧ್ಯಾಪುರಮಂ ಪೊಕ್ಕು ಜಘನ್ಯೋತ್ತಮಗೃಹಂಗ ಳೊಳ್ ಚಂದ್ರಗತಿಯಿಂ [10]ಸಲುತ್ತುಂ[10] ಬ್ರಹ್ಮನೆಂಬರಸನ ಮನೆಗೆವರೆ ಮಂಗಳ ತೂರ್ಯಮುಮಪ್ಪ ಮಂಗಳಮುಂ ಬೆರಸು ಪರಮೋತ್ಸಾಹದಿಂದಿದಿರ್ಗೊಂಡು

---

1 ಕ (ಕ) [ಕಲ್ಪಕಕ] (ಟ) 2 ರ ಸೂತ್ರ (ಕಗಚಜ) 3 ರ್ಜ (ಟತ) 4 ಶು (ಕ)
5 ಚರಾ (ಕಟ) 6 ಮಂ (ಗಚಜ) 7 ಶ್ವಭ್ರ (ಗಚ) ಭ್ರ (ಜ) 8 ನ ಮುಂ (ಗಚಜಟ)
9 ವೃತ (ಗಚಜ) 10 ಸಲಿಸುತ್ತಂ (ಗಚಜ) ಸಲುತ್ತಿಂ (ಟ)

ಶ್ರದ್ಧಾ[1]ಶಕ್ತಿ[1]ರ[2]ಲೋ[2]ಭತ್ವಂ ಭಕ್ತಿರ್ಜ್ಞಾನಂ ದಯಾ ಕ್ಷಮಾ
ಇತಿ ಶ್ರದ್ಧಾದಯಸ್ಸಪ್ತ ಗುಣಾಶ್ಚ ಗೃಹಮೇಧಿನಾಂ
ಪ್ರತಿಗ್ರಹೋಚ್ಚಸ್ಥಾ[3]ನೇ[3] ಚ ಪಾದಪ್ರಕ್ಷಾಳ[3]ನಾ[4]ರ್ಚನಂ
ಪ್ರಣಮೋಯೋಗಶುದ್ಧಿಶ್ಚೈಷಣಶುದ್ಧಿಶ್ಚ[5]ತೇ ನವ[5]

ಎಂದು ಪೇಳ್ವಿಂದದಿಂ

ಪ್ರಣುತೆಯ ನಯುವೆಂಬೇೞಿಂ
ಗುಣದಿಂ ನವವಿಧದ ಪುಣ್ಯದಿಂ ನೆಱೆದು ನೃಪಾ
ಗ್ರಣಿ ನೆಗೞ್ದ ದಾನಚಿಂತಾ
ಮಣಿ ನಿಱಿಸುವ ತೆಱದಿನಿಱಿಸಿದಂ ಬ್ರಹ್ಮನೃಪಂ ೨

ಅಂತು ನಿಱಿಸಿ ಸಿದ್ಧಭಕ್ತಿಪುರಸ್ಸರಂ ಪಾಣಿಪಾತ್ರದೊಳ್ [6]ಕನಕಪಾತ್ರದೊಳ್ ತೀ[6]ವಿದಿಕ್ಷುರಸಮಂ ಪಯೋರಸಮು[7]ಮಂ ಪಾನಗಳಿಂದೆ[7]ಱೆಯೆ ನಿರಂತರಾಯದಿಂ ನಿಲ್ವುದುಮುತ್ತಮ ಪಾತ್ರದಾನದ ಫಲದಿಂ

ಸುರಿಯೆ ವಸುಧಾರೆ ನಭದೊಳ್
ಸುರವೃಂದಂ ಪೊಗೞೆ[8] ಮೊೞಗೆ ಸುರದುಂದುಭಿ ತ
ಣ್ಣೆರಲೆಸಗೆ ಕುಸುಮವರ್ಷಂ
ದೊರೆಕೊಳೆ ಸಾಶ್ಚರ್ಯಮಾಯ್ತು ಪಂಚಾಶ್ಚರ್ಯಂ ೩

ಅಂತು ನಿಂದಕ್ಷಯದಾನಮಕ್ಕೆಂದು ಪರಸಿ ಪರಮೇಶ್ವರನಯೋಧ್ಯಾಪುರ[8]ದಿಂ[8] ಪೊಱಮಟ್ಟು ವನವ್ರತದಿಂ ಗ್ರಾಮ ನಗರ ಖೇಡ ಖರ್ವಡ ಮಡಂಬ [9]ಪತ್ತನ ದ್ರೋ[9]ಣಾಮುಖಪ್ರದೇಶಂಗಳೊಳ್ ವಿಹಾರಿಸಿ

ಮಲಮಂಗರಾಗಮಂಬರ
ವಲಯಂ ದಿವ್ಯಾಂಬರಂ ಗುಣಾವಳಿ ಭೂಷಾ

---

1 ಭಕ್ತಿ (ಕಟ) 2 ಲಾ (ಗಚಜ) 3 ನೇನ (ಗಚಜ) 4 ಮ (ಕಗಚಜ) 5 ತೇ (ಜ) 6 ತೀ (ಗಚಜ) 7 ಮನೆ (ಕಟ) 8 ಮಂ (ಗಚಜ) 9 ದ್ರೋ (ಗಚಜ)

ವಲಿಗಳೆನೆ ಮುಕ್ತಿಲಲನೆಯ
ನೊಲಿಸಲ್ ಕೈಗೈದು ನಿಂದನಜಿತಮುನೀಂದ್ರಂ ೪

ಅನಿಲನವೋಲ್ ನಿಸ್ಸಂಗಂ
ಕನಕಮಹಾದ್ರೀಂದ್ರದಂದದಿಂ ನಿಷ್ಕಂಪಂ
[1]ವನ[1]ನಿಧಿಯಂತಕ್ಷೋಭಂ
ಘನಮಾರ್ಗದವೋಲ್ ಮುನೀಶ್ವರಂ ನಿಂದಿರ್ದಂ ೫

ಅಂತಾ ತ್ರಿಲೋಕೈಕಗುರುವುಂ ತ್ರಿಕಾಲಜ್ಞಾನಿಯುಂ ತ್ರಿಕಾಲಯೋಗಿಯುಂ ತ್ರಿಗುಪ್ತಿಗುಪ್ತನುಂ ತ್ರಿದಂಡ ತ್ರಿಶಲ್ಯ ತ್ರಿಗಾರವಿರಹಿತನುಂ ತ್ರಿದಶವಂ[2]ದಿತನುಂ[2] ತ್ರಿಮಂದವ್ಯಪೇತನುಂ ಯೋಗತ್ರಯಪವಿತ್ರನುಂ ರತ್ನತ್ರಯಾಲಂಕೃತನುಮೆನಿಸಿದ ಜಿತಯೋಗಿ ನಿಯಮನಿಶ್ಚಲನಾಗಿ ನಿಲ್ವುದುಂ

ಕರಿಕಲಭಂಗಳ್ ಕರಿಕೇ
ಸರಿಗಳ್ ವೈರಮನೆ ಬಗೆಯದಹಿ ನಕುಲಂಗಳ್
ಹರಿಣ ಚಮೂರಂಗಳ್ ಶಾಂ
ತರೂಪದಿಂದಿರ್ದುವಜಿತನಾಥನ ಕೆಲದೊಳ್ ೬

ವನಮೂಷಕ ಮಾರ್ಜಾ[3]ರಂ[3]
ವನಾಶ್ವ ಮಹಿಷಂ ವನಾಶ್ವ ಸೂಕರಮನಿತುಂ
ಮುನಿಸಂ ಪರಿಹರಿಸಿರ್ದುವು
ಮುನಿನಾಥಾಂತಿಕದೊಳುದಿತ ಶಾಂತರಸಂಗಳ್ ೭

ಅಂತು ಪರಮೇಶ್ವರನ ಕೆಲದೊಳಿರ್ದ ಕ್ರೂರಜಾತಿಗಳೆಲ್ಲಮಾ ಮಹಾನುಭಾವನ ತಪಃಪ್ರಭಾವದಿಂ ಅಪಗತರೌದ್ರರಸಂಗಳುಮುಪಗತ ಶಾಂತರಸಂಗಳುಮಾಗೆ

ಸುರಿದುವು ಪೂಗಳಂ ಮಿಳಿರ್ವ ಕೊಂಬುಗಳೆಂಬ ಕರಂಗಳಿಂ ಮುನೀ
ಶ್ವರನ ಪದಾಬ್ಜದೊಳ್ ತಮಗೆ ತಾಮೆ ವನಾವನಿಜಂಗಳಂಬುಜಾ

1 ನವ (ಗಜ) 2 ವ್ಯತನು (ಗಚಜ) 3 ಲಂ (ಬತ)

ಕರಮನಿಲಾಹತಿ ಪ್ರಚ[1]ಲ[1] ವೀಚಿಭುಜಂಗಳಿನೊಳ್ಪುವೆತ್ತ ಶೀ
ಕರನಿಕರಂಗಳೊಳ್ ತೊಳೆದುದಾ ಗುಣಸತ್ವನ ಪಾದಪದ್ಮಮಂ ೮

ಅಂತುಗ್ರೋಗ್ರತಪದೊಳ್ ನೆಗಟ್ದು ಬುದ್ಧಿಕ್ರಿಯಾ[2]ತಪೋಬಲರಸೌಷಧಿ ಕ್ರಿಯಾ ಕ್ಷೀಣ[2]ವಿಕಲ್ಪಮಪ್ಪ ಸಪ್ತ[3]ಋ[3]ದ್ಧಿಯೊಳಂ ನಾಮಸತ್ಯಂ ರೂಪಸತ್ಯಂ ಪ್ರತೀ[4]ತ್ಯ[4]ಸತ್ಯಂ ಸಂಯೋಜನಸತ್ಯಂ ಜನಪದಸತ್ಯಂ ದೇವಸತ್ಯಂ ಭಾವಸತ್ಯಂ ಸಮಯಸತ್ಯಮು [ಪಮಾಸತ್ಯ]ಮೆಂಬೊಂಬತ್ತುಂ ಸತ್ಯದೊಳಂ ಭಾವಶುದ್ಧಿಯುಂ ಕಾಯಶುದ್ಧಿಯುಂ ವಿನಯಶುದ್ಧಿಯುಂ ಈರ್ಯಾಪಥಶುದ್ಧಿಯುಂ [5]ಭಿಕ್ಷಾಶುದ್ಧಿಯುಂ ಪ್ರತಿ[5]ಷ್ಠಾಪನಾ ಶುದ್ಧಿಯುಂ ಶಯನಾಶನಶುದ್ಧಿಯುಂ ವಾಕ್ಯಶುದ್ಧಿಯುಮೆಂಬ ಶುದ್ಧ್ಯಷ್ಟಕದೊಳಂ ಮನೋಗುಪ್ತಿಯುಂ ವಾಗ್ಗುಪ್ತಿಯುಂ ಕಾಯಗುಪ್ತಿಯುಮೆಂಬ ಗುಪ್ತಿತ್ರಯದೊಳಂ ಉತ್ತಮಕ್ಷಮಾ ಮಾರ್ದವಾರ್ಜವ ಸತ್ಯ ಶೌಚ ಸಂಯಮ ತಪಸ್ತ್ಯಾಗಾಕಿಂಚನ್ಯ ಬ್ರಹ್ಮಚರ್ಯಮೆಂಬೀ ದಶ[6]ಕುಲ[6]ಧರ್ಮದೊಳಮನಶನಾವಮೌದರ್ಯ ವೃತ್ತಿಪರಿ ಸಂಖ್ಯಾನ ರಸಪರಿತ್ಯಾಗ ವಿವಿಕ್ತಶಯ್ಯಾಸನ ಕಾಯಕ್ಲೇಶಂಗಳೆಂಬ ಬಾಹ್ಯತಪದೊಳಂ ಪ್ರಾಯಶ್ಚಿತ್ತ ವಿನಯ ವೈಯಾಪೃತ್ಯ ಸ್ವಾಧ್ಯಾಯ ವ್ಯುತ್ಸರ್ಗ ಧ್ಯಾನಂಗಳೆಂಬ ಷಡ್ವಿಧಾಭ್ಯಂತರತಪದೊಳಂ ನೆಱೆ[3]ದು ಮನೋದಂಡ ವಾಗ್ದಂಡ ಕಾಯದಂಡಮೆಂಬ ದಂಡ ತ್ರಯಮಂ ಪರಿಹರಿಸುತ್ತುಂ ಕ್ಷುತ್ಪಿಪಾಸಾ ಶೀತೋಷ್ಣ ದಂಶಮಶಕ ನಾಗ್ನ್ಯರತಿ ಸ್ತ್ರೀ ಚರ್ಯಾನಿಷದ್ಯಾಶಯ್ಯಾಕ್ರೋಶವಧಯಾಚನಾ [7]ಲಾ[7]ಭ ರೋಗತೃಣ ಸ್ಪರ್ಶಮಲ ಸತ್ಕಾರ ಪುರಸ್ಕಾರ ಪ್ರಜ್ಞಾಜ್ಞಾ[8][ನಾ][8]ದರ್ಶನಂಗಳೆಂಬ ಇಪ್ಪತ್ತೆರಡುಂ ಪರೀಷಹಂ ಗಳಂ ಪರಿಹರಿಸುತ್ತುಂ ಪೃಥ್ವೀಕಾಯಕಮಪ್ಪುಕಾಯಕ ತೇಜಸ್ಕಾಯಕ ವಾಯುಕಾಯಕ ವನಸ್ಪತಿಕಾಯಕ ತ್ರಸಕಾಯಕಮೆಂಬ ಷಡ್ವಿಧ ಜೀವನಿಕಾಯಮನೋವುತ್ತುಂ ಜೀವ ಜೀವಾಸ್ರವಬಂಧ ಸಂವರ ನಿರ್ಜರಾ ಮೋಕ್ಷಂಗಳೆಂಬ ಸಪ್ತತತ್ವಮಂ ನೈಗಮಸಂಗ್ರಹ ವ್ಯವಹಾರ ಋಜುಸೂತ್ರ ಶಬ್ದ ಸಮಭಿರೂಢೈವಂಭೂತಮೆಂಬ ಸಪ್ತನಯಮುಮಂ ಭಾವಿಸುತ್ತುಂ ಸತ್ವಂಗಳೊಳ್ ಮೈತ್ರಿಯಂ ಗುಣಾಧಿಕರೊಳ್ ಪ್ರಮೋದಮಂ ಕ್ಲಿಶ್ಯ ಮಾನರೊಳ್ ಕಾರುಣ್ಯಮಂ [9]ಅವಿ[9]ನಯರೊಳ್ ಮಾಧ್ಯಸ್ಥಮುಮನವಳಂಬಿಸುತ್ತುಂ ಅನಂತಾನುಬಂಧಿಯಪ್ರತ್ಯಾಖ್ಯಾನ [ಪ್ರತ್ಯಾಖ್ಯಾನ] ಸಂಜ್ವಲನಭೇದಭಿನ್ನ ಕ್ರೋಧ ಮಾನಮಾಯಾಲೋ[10]ಭ[10] ಕಷಾಯ ಚತುಷ್ಕಂಗಳನಗ[11]ಲುತ್ತುಂ[11] ಮಿಥ್ಯಾದರ್ಶನಾ

1 ರ (ಕ) ಳ (ಜ) 2 ಕ್ಷೀಣ (ಗಜ) ಕ್ರಿಯಾಕ್ಷೀಣ (ಚ) 3 ಸಿ (ಕಟತ) 4 ತಿ (ಟತ)
5 ಪ್ರತಿ (ಗಜ) 6 ಕುಶಲ (ಕಚಟತ) 7 ಲೋ (ಕಚಜಟ) 8 ನ (ಕಗಚಜಟತ)
9 ವಿ (ಗಜ) 10 ಲ (ಕಟ) 11 ಲಿಸುತ್ತಂ (ಗಜ) ಲಿಸುತ್ತುಂ (ಚ)

ವಿರತಿ ಪ್ರಮಾದ ಕಷಾಯಯೋಗಂಗಳೆಂಬ [1]ಬಂಧಹೇ[1]ತುಗಳಂ ಪರಿಹರಿಸುತ್ತಂ ಕಾಯವಾಙ್ಮನೋಯೋಗತ್ರಯುವನವಲಂಬಿಸುತ್ತಂ ಸ್ಪರ್ಶನರಸನಘ್ರಾಣ ಚಕ್ಷು ಶ್ರೋತ್ರಂಗಳೆಂಬ ಪಂಚೇಂದ್ರಿಯ ವಿಷಯಸ್ಪರ್ಶರಸಗಂಧ ಶಬ್ದರೂಪಂಗಳಂ ನಿರಾಕರಿಸುತ್ತಂ ಜೀವಪುದ್ಗಲ ಧರ್ಮಾಧರ್ಮ ಕಾಲಾಕಾಶವೆಂಬೈದುವಮಂ ಭಾವಿಸುತ್ತಂ ಪನ್ನೆರಡು ವರ್ಷದಿಂ [2]ಜಿನಕಲ್ಪ[2]ಚರಿತ್ರದಿಂ ಛದ್ಮಸ್ಥಕಾಲಂ ಪೋಗೆ ಯೋ[3]ಗ[3] ಯೋಗ್ಯಪ್ರದೇಶದೊಳ್ ವಾಕ್ಸಂಯಮನುಮುವಹಿತಧ್ಯಾನನುಮಾಗಿರೆ

ಪರಮಂಗೆ ಲಕ್ಷ್ಮಿ ಪರಮಾ
ದರದಿಂದಂ ಗೂಢಪದ್ಮವಿಷ್ಟರಮಂ [4]ತಂ
ದಿ[4]ರಿಸಲ್ ತದ್ದಿವ್ವ ಗುಣದೆ ಸುಖ
ನಿರಾದರಂಗೆಸೆದುದಾತಪತ್ರಮಲಕ್ಷಂ ೯

ಎರಡುಂ ಮಡದೆಡೆಯುಂ ನಾ
ಲ್ವೆರಲುಂಗುಟಮೆರಡಱ[5]ಡೆಯುಮೊರ್ಗೆಣೆಂಬಂ
ತಿರೆ ಕಾಯೋತ್ಸರ್ಗದ ಮು[6]ದ್
[6]ದಿರೆ ಋ[6]ಜ್ವಾಗತದೊಳಜಿತನೂರ್ಜಿತಧೈರ್ಯಂ ೧೦

ವದನಂ ಸ್ತಿಮಿತಾಕ್ಷಂ ಶ್ಲಿ
ಷ್ಟದಂತಮುಷ್ಟಾಂಗಪಾತಮಭ್ರೂ[7]ಭಂಗಾ[7]
ಸ್ಪದಮೆಸೆದುದು ಯೋಗನಿಯೋ
ಗದೊಳಜಿತಮಹಾಮುನೀಂದ್ರವೃಂದಾರಕ[8]ನಾ[8] ೧೧

[9]ಕ[9]ನದಂಭೋನಿಧಿಗರ್ಜ
[10]ತ್ಸ್ವ[10]ನದಿಂ ಗುಂಜದ್ಗುಹಾದ್ರಿಯೆನೆ ಜಿನನಿರ್ದಂ
ಮನದೊಳಗೊಂದೊಂದವ್ಯ
ಕ್ತನಿಜಾಕ್ಷರ ಜಲ್ಪಮೆಸೆಯೆ ಮಂದರಕಲ್ಪಂ ೧೨

---

1 ಹೇ (ಚ) 2 ಜಿನಕಲ್ಪಿತ (ಕ) ಜೀವಕಲ್ಪಿತ (ಗಚಜ) 3 ಗೆ (ಗಜ) 4 ಕೂಡಿ (ಚ) 5 ದದಿಂ (ಕ) 6 ಗಿರಿ (ಕಗಚಜ) 7 ಭೃಂಗಾ (ಕಚಜ) 8 ನಂ (ಕಗಚಜ) 9 ಘ (ಗಜ) [illegible] (ಚ) 10 ಸ್ವ ([illegible])

ಕರಮನಿಲಾಹತಿ ಪ್ರಚ[1]ಲ[1] ವೀಚಿಭುಜಂಗಳಿನೊಳ್ಪುವೆತ್ತ ಶೀ
ಕರನಿಕರಂಗಳೊಳ್ ತೊಳೆದುದಾ ಗುಣಸತ್ವನ ಪಾದಪದ್ಮಮಂ ೮

ಅಂತುಗ್ರೋಗ್ರತಪದೊಳ್ ನೆಗೞ್ದು ಬುದ್ಧಿಕ್ರಿಯಾ[2]ತಪೋಬಲರಸೌಷಧಿ ಕ್ರಿಯಾ ಕ್ಷೀಣ[2]ವಿಕಲ್ಪಮಪ್ಪ ಸಪ್ತ[3]ಋ[3]ದ್ಧಿಯೊಳಂ ನಾಮಸತ್ಯಂ ರೂಪಸತ್ಯಂ ಪ್ರತೀ[4]ತ್ಯ[4]ಸತ್ಯಂ ಸಂಯೋಜನಸತ್ಯಂ ಜನಪದಸತ್ಯಂ ದೇವಸತ್ಯಂ ಭಾವಸತ್ಯಂ ಸಮಯಸತ್ಯಮು [ಸಮಾಸತ್ಯ]ಮೆಂಬೊಂಬತ್ತುಂ ಸತ್ಯದೊಳಂ ಭಾವಶುದ್ಧಿಯುಂ ಕಾಯಶುದ್ಧಿಯುಂ ವಿನಯಶುದ್ಧಿಯುಂ ಈರ್ಯಾಪಥಶುದ್ಧಿಯುಂ [5]ಭಿಕ್ಷಾಶುದ್ಧಿಯುಂ ಪ್ರತಿ[5]ಷ್ಠಾಪನಾ ಶುದ್ಧಿಯುಂ ಶಯನಾಶನಶುದ್ಧಿಯುಂ ವಾಕ್ಯಶುದ್ಧಿಯುಮೆಂಬ ಶುದ್ಧ್ಯಷ್ಟಕದೊಳಂ ಮನೋಗುಪ್ತಿಯುಂ ವಾಗ್ಗುಪ್ತಿಯುಂ ಕಾಯಗುಪ್ತಿಯುಮೆಂಬ ಗುಪ್ತಿತ್ರಯದೊಳಂ ಉತ್ತಮಕ್ಷಮಾ ಮಾರ್ದವಾರ್ಜವ ಸತ್ಯ ಶೌಚ ಸಂಯಮ ತಪಸ್ತ್ಯಾಗಾಕಿಂಚನ್ಯ ಬ್ರಹ್ಮಚರ್ಯಮೆಂಬೀ ದಶ[6]ಕುಲ[6]ಧರ್ಮದೊಳಮನಶನಾವಮೌದರ್ಯ ವೃತ್ತಿಪರಿ ಸಂಖ್ಯಾನ ರಸಪರಿತ್ಯಾಗ ವಿವಿಕ್ತಶಯ್ಯಾಸನ ಕಾಯಕ್ಲೇಶಂಗಳೆಂಬ ಬಾಹ್ಯತಪದೊಳಂ ಪ್ರಾಯಶ್ಚಿತ್ತ ವಿನಯ ವೈಯಾವೃತ್ಯ ಸ್ವಾಧ್ಯಾಯ ವ್ಯುತ್ಸರ್ಗ ಧ್ಯಾನಂಗಳೆಂಬ ಷಡ್ವಿಧಾಭ್ಯಂತರತಪದೊಳಂ ನೆಱೆ[3]ದು ಮನೋದಂಡ ವಾಗ್ದಂಡ ಕಾಯದಂಡಮೆಂಬ ದಂಡತ್ರಯಮಂ ಪರಿಹರಿಸುತ್ತುಂ ಕ್ಷುತ್ಪಿಪಾಸಾ ಶೀತೋಷ್ಣ ದಂಶಮಶಕ ನಾಗ್ನ್ಯರತಿ ಸ್ತ್ರೀಚರ್ಯಾನಿಷದ್ಯಾಶಯ್ಯಾಕ್ರೋಶವಧಯಾಚನಾ [7]ಲಾ[7]ಭ ರೋಗತೃಣ ಸ್ಪರ್ಶಮಲ ಸತ್ಕಾರ ಪುರಸ್ಕಾರ ಪ್ರಜ್ಞಾ ಜ್ಞಾ[8][ನಾ][8]ದರ್ಶನಂಗಳೆಂಬ ಇಪ್ಪತ್ತೆರಡುಂ ಪರೀಷಹಂಗಳಂ ಪರಿಹರಿಸುತ್ತಂ ಪೃಥ್ವೀಕಾಯಕಮಪ್ಕಾಯಕ ತೇಜಸ್ಕಾಯಕ ವಾಯುಕಾಯಕ ವನಸ್ಪತಿಕಾಯಕ ತ್ರಸಕಾಯಕಮೆಂಬ ಷಡ್ವಿಧ ಜೀವನಿಕಾಯಮನೋವುತ್ತುಂ ಜೀವ ಜೀವಾಸ್ರವಬಂಧ ಸಂವರ ನಿರ್ಜರಾ ಮೋಕ್ಷಂಗಳೆಂಬ ಸಪ್ತತತ್ವಮಂ ನೈಗಮಸಂಗ್ರಹ ವ್ಯವಹಾರ ಋಜುಸೂತ್ರ ಶಬ್ದ ಸಮಭಿರೂಢೈವಂಭೂತಮೆಂಬ ಸಪ್ತನಯಮುಮಂ ಭಾವಿಸುತ್ತುಂ ಸತ್ವಂಗಳೊಳ್ ಮೈತ್ರಿಯಂ ಗುಣಾಧಿಕರೊಳ್ ಪ್ರಮೋದಮಂ ಕ್ಲಿಶ್ಯಮಾನರೊಳ್ ಕಾರುಣ್ಯಮಂ [9]ಅವಿ[9]ನಯರೊಳ್ ಮಾಧ್ಯಸ್ಥಮುಮನವಳಂಬಿಸುತ್ತುಂ ಅನಂತಾನುಬಂಧಿಯಪ್ರತ್ಯಾಖ್ಯಾನ [ಪ್ರತ್ಯಾಖ್ಯಾನ] ಸಂಜ್ವಲನಭೇದಭಿನ್ನ ಕ್ರೋಧ ಮಾನಮಾಯಾಲೋ[10]ಭ[10] ಕಷಾಯ ಚತುಷ್ಕಂಗಳನಗ[11]ಲುತ್ತುಂ[11] ಮಿಥ್ಯಾದರ್ಶನಾ

1 ರ (ಕ) ಳ (ಜ) 2 ಕ್ಷೀಣ (ಗಜ) ಕ್ರಿಯಾಕ್ಷೀಣ (ಚ) 3 ಸಿ (ಕಟತ) 4 ತಿ (ಟತ) 5 ಪ್ರತಿ (ಗಜ) 6 ಕುಶಲ (ಕಚಟತ) 7 ಲೋ (ಕಚಜಟ) 8 ನ (ಕಗಚಜಟತ) 9 ವಿ (ಗಜ) 10 ಲ (ಕಟ) 11 ಲಿಸುತ್ತಂ (ಗಜ) ಲಿಸುತ್ತುಂ (ಚ)

ವಿರತಿ ಪ್ರಮಾದ ಕಷಾಯಯೋಗಂಗಳೆಂಬ [1]ಬಂಧಹೇ[1]ತುಗಳಂ ಪರಿಹರಿಸುತ್ತಂ ಕಾಯವಾಙ್ಮನೋಯೋಗತ್ರಯವನವಲಂಬಿಸುತ್ತಂ ಸ್ಪರ್ಶನರಸನಘ್ರಾಣ ಚಕ್ಷುಶ್ಶ್ರೋತ್ರಂಗಳೆಂಬ ಪಂಚೇಂದ್ರಿಯ ವಿಷಯಸ್ಪರ್ಶರಸಗಂಧ ಶಬ್ದರೂಪಂಗಳಂ ನಿರಾಕರಿಸುತ್ತಂ ಜೀವಪುದ್ಗಲ ಧರ್ಮಾಧರ್ಮ ಕಾಲಾಕಾಶಮೆಂಬೈದುಮಂ ಭಾವಿಸುತ್ತಂ ಪನ್ನೆರಡು ವರ್ಷದಿಂ [2]ಜಿನಕಲ್ಪ[2]ಚರಿತ್ರದಿಂ ಛದ್ಮಸ್ಥಕಾಲಂ ಪೋಗೆ ಯೋ[3]ಗ[3] ಯೋಗ್ಯಪ್ರದೇಶದೊಳ್ ವಾಕ್ಸಂಯಮನನುಮವಹಿತಧ್ಯಾನನುಮಾಗಿರೆ

ಪರವಂಗೆ ಲಕ್ಷ್ಮಿ ಪರಮಾ
ದರದಿಂದಂ ಗೂಢಪದ್ಮವಿಷ್ಟರಮಂ [4]ತಂ
ದಿ[4]ರಿಸಲ್ ತದ್ದ್ವಿಗುಣದೆ ಸುಖ
ನಿರಾದರಂಗೆಸೆದುದಾತಪತ್ರಮಲಕ್ಷ್ಮಂ ೯

ಎರಡುಂ ಮಡದೆಡೆಯುಂ ನಾ
ಲ್ವೆರಲುಂಗುಟಮೆರಡಱಡೆಯುಮೊರ್ಗೇಣೆಂಬಂ
ತಿರೆ ಕಾಯೋತ್ಸರ್ಗದ ಮು[5]ದ್[5]
[6]ದಿರೆ ಋ[6]ಜ್ವಾಗತದೊಳಜಿತನೂರ್ಜಿತಧೈರ್ಯಂ ೧೦

ವದನಂ ಸ್ತಿಮಿತಾಕ್ಷಂ ಶ್ಲಿ
ಷ್ಟದಂತಮುಷ್ಟಾಂಗಪಾತಮಭ್ರೂ[7]ಭಂಗಾ[7]
ಸ್ಪದಮೆಸೆದುದು ಯೋಗನಿಯೋ
ಗದೊಳಜಿತಮಹಾಮುನೀಂದ್ರವೃಂದಾರಕ[8]ನಾ[8] ೧೧

[9]ಕ[9]ನದಂಭೋನಿಧಿಗರ್ಜ
[10]ತ್ಸ್ತ[10]ನದಿಂ ಗುಂಜದ್ಗುಹಾದ್ರಿಯೆನೆ ಜಿನನಿರ್ದಂ
ಮನದೊಳಗೊಂದೊಂದವ್ಯ
ಕ್ತನಿಜಾಕ್ಷರ ಜಲ್ಪಮೆಸೆಯೆ ಮಂದರಕಲ್ಪಂ ೧೨

---

1 ಹೇ (ಚ) 2 ಜಿನಕಲ್ಪಿತ (ಕ) ಜೀವಕಲ್ಪಿತ (ಗಚಜ) 3 ಗೆ (ಗಜ) 4 ಕೂಡಿ (ಚ) 5 ದದಿಂ (ಕ) 6 ಗಿರಿ (ಕಗಚಜ) 7 ಭೃಂಗಾ (ಕಚಜ) 8 ನಂ (ಕಗಚಜ) 9 ಘ (ಗಜ) [illegible] (ಚ) 10 ಸ್ವ (ಕಗಚಜ)

ಅಂತಿರ್ದು ಶುಕ್ಲಧ್ಯಾನದಿಂ ಜ್ಞಾನಾವರಣೀಯಂ ದರ್ಶನಾವರಣೀಯಂ ಮೋಹನೀಯಮಂತರಾಯಮೆಂಬ ಘಾತಿಚತುಷ್ಟಯಮಂ ಕಿಡಿಸಿ ಪುಷ್ಯಮಾಸದ ಶುಕ್ಲಪಕ್ಷದ ಏಕಾದಶಿಯೊಳ್ ಅಪರಾಹ್ಣಸಮಯದೊಳ್ ರೋಹಿಣೀನಕ್ಷತ್ರಮಾಗೆ

ವನದೊಳ್ ದಾವಾಗ್ನಿ ಪೂರ್ವಾಚಲದೊಳಹಿಮಕೃನ್ಮಂಡಲಂ ವಾರ್ಧಿಯೊಳ್ ಭೋಂ
ಕೆನೆ ಬಂದೌರ್ವಾನಳಂ ಪುಟ್ಟುವವೊಲಜಿತತೇಜೋಮಯಂ ಕರ್ಮ[1]ವೇಲ್ಲ
ದ್ವ[1]ನದಾಹೋತ್ಸಾಹವೃತ್ತಿ ಪ್ರಗುಣಮಜಿತತೀರ್ಥೇಶನೊಳ್ ತೀರ್ಥಕೃನ್ಮಂ
ಡನನೊಳ್ ಪುಟ್ಟಿತ್ತಗಾಧಂ [2]ತ್ರಿಭು[2]ವನಜನ ಮಾಂಗಲ್ಯಕೈವಲ್ಯಬೋಧಂ ೧೩

ಅಂತು ದುರಿತತಿಮಿರ ವಿಘಟನಪಟುವೆನಿಪ ವಿಮಲಕೇವಲಜ್ಞಾನಭಾನೂದಯಮಾಗೆ

ಹರಿಪೀಠಂ ಸುರಪುಷ್ಪವೃಷ್ಟಿ ಲಲಿತಾಶೋಕದ್ರುಮಂ ಚಾರುಚಾ
ಮರಮಾಲಾವಳಿ ದಿವ್ಯಭಾಷೆ ರುಚಿರ ಶ್ವೇತಾತಪತ್ರತ್ರಯಂ
ಸುರತೂರ್ಯಧ್ವನಿ ಭಾನುಮಂಡಲನಿಭಂ ಭಾಮಂಡಲಂ ಚೆಲ್ವುವೆ
ತ್ತಿರೆ ದೇವೇಂದ್ರನಿನಾದುದಂದಜಿತದೇವ ಪ್ರಾತಿಹಾ[3]ರ್ಯಾಷ್ಟಕಂ[3] ೧೪

ಸುಂದರ ಸುರೇಂದ್ರವೃಂದಾ
ನಂದಕರಂಗಳ್ ದುರಂತದುರಿತಹರಂಗಳ್
ಸಂಧಿಸಿ ನೆಗೞ್ದುವನುಕ್ರಮ
ದಿಂದೆ ಚತುಸ್ತ್ರಿಂಶದತಿಶಯಂಗಳ್ ಜಿನ[4]ನಂ[4] ೧೫

ಅಂತ[5]ಷ್ಟ[5]ಮಹಾಪ್ರಾತಿಹಾರ್ಯಮುಂ ಚತುಸ್ತ್ರಿಂಶದತಿಶಯಂಗಳುಮೆಸೆಯೆ ವೃಷಭನಾಥಂಗೆ ವೃಷಭಸೇನಗಣಧರ[6]ರಂತ[6]ಜಿತಂಗೆ ಸಿಂಹಸೇನಾಭಿದಾನಂ [7]ಗಣ[7]ಪ್ರಧಾನನಾಗಿ ಸರ್ವಭಾಷಾಸ್ವಭಾವಾತ್ಮಕಮುಂ ತ್ರಿಭುವನಜನಭಿತ್ತಿಯುಗಪದರ್ಥಪ್ರತಿಪಾದನಾಸಮರ್ಥಮುಂ ಸೂತ್ರ ಪೌರುಷೇಯ[8]ತಾಲ[8]ಪ್ರಸರಮುಂ ಗಣಧರ ವಜ್ರಧರ ಚಕ್ರಧರ

---

1 ನೇಲ್ದ್ವದ್ವವ (ಕ) 2 ಭು (ಗಚಜ) 3 ರ್ಯಾಷ್ಟಕಂ (ಕತ) ರ್ಯಾಸ್ವನಂ (ಟ)
4 ನಿಂ (ಟ) 5 ಪ್ಪ (ಟ) 6 ನ (ಚಜ) ರಂತ ಅ (ಟ) 7 ಗಣಧರ (ಕಗಚಜ)
8 ಕಾಳ (ಕಗಚಜ)

ಪ್ರಶ್ನ ವ್ಯತಿರೇಕ ನಿಸ್ರುತಮುಂ [1]ಅಕ್ಷರಾನು[1]ಕ್ಷರಾತ್ಮಕಮುಮವಿವಕ್ಷಿತ ವೃತ್ತಮುಂ ತಾಲ್ವೋಷ್ಠವ್ಯಾಪಾರವಿರಹಿತಮುಮಪ್ಪ ದಿವ್ಯವಚನಾಮೃತಮುಮನಾತ್ಮೀಯಮತಿ ಭಾಜನದೊಳ್ ಪುಣ್ಯಭಾಜನನಾಂತುಕೊಂಡಿರ್ಪಿನಮವಧಿಬೋಧಾಧಿಗತ ದ್ವಿತೀಯ ತೀರ್ಥಕರ ಪರಮದೇವರ ಕೇವಲಾವಗಮನನಾಗಿ ನಾಗೇಂದ್ರಂ ಬಲಾಹಕ ವಿಕ್ರಿಯಾ ವಿನಿರ್ಮಿತಮಪ್ಪ ಕಾಮುಕೀವಿಮಾನಮನೇಱಿ ಬಂದಂ. ಇತ್ತ ಸೌಧರ್ಮೇಂದ್ರಂ ನಾಗದತ್ತ ವಿಕ್ರಿಯಾ ಸಮುದ್ಭೂತಮಪ್ಪ ಐರಾವಣಮನೇಱಿಬಂದಂ ಉೞಿದ ದೇವೇಂದ್ರರುಂ ತಂತಮ್ಮ ವಿಮಾ[2]ನಂಗಳ[2]ನೇಱಿ ಚತುರ್ನಿಕಾಯಾಮರಜನಮುಂ ಸಪ್ತಾನೀಕಂಬೆರಸು ಬಂದು ಸಕಲ ಜಗತ್ಪೂಜಿತಮಪ್ಪ ಅಜಿತಜಿನನ ಕೇವಲಜ್ಞಾನೋತ್ಪತ್ತಿ ಕಲ್ಯಾಣಪೂಜೆಯಂ ಮಾಡಲೆಂದು ಮೂಱು ಸೂೞ್ ಬಲವಂದು ಉಪಹೃತ ಪುಷ್ಪಾಂಜಲಿಗಳುಮವನತ ಮಣಿ[3]ತಿ[3]ರೀಟರುಮಾಗಿ ಮುಂದೆ ನಿಂದು

ಜಯಜಯ ಜಿನಾಧೀಶ ಕನಕಘನ [4]ಸಂಕಾಶ[4]
ಜಯಜಯ ಜಗತ್ತಿಳಕ ಕೃತಭವ್ಯಜನ[5]ಪು[5]ಳಕ
ಜಯಜಯ ಗುಣಾಭರಣ ಸಕಲಜನಹಿತಕರಣ
ಜಯಜಯ ತಮೋವಿಲಯ ವಿಮಲತೇಜೋನಿಲಯ
ಜಯಜಯ ಮನೋಹರ ಸದ್ಧರ್ಮತೀರ್ಥಕರ
ಜಯಜಯ [6]ಜ[6]ನಾನಂದ ಕೇವಲಾಂಕುರಕಂದ
ಜಯಜಯ ಜನಾಧಾರ ನಿರ್ದಳಿತ ಸಂಸಾರ

ಜಯಜಯ ಪರಮೇಶ್ವರ ಪರಮದೇವ
ಮಹನೀಯ ಚರಿತ್ರ ಮಹಾನುಭಾವ
ನಿರ್ದೋಷ ನಿರಂಜನ ನಿರ್ವಿಕಾರ
ನಿರ್ದ್ವಂದ್ವ ನಿರತ್ಯಯ ನಿರ್ವಿಚಾರ
ಜಯ ನಿರ್ಮಲ ನಿರ್ಮದ ನಿರಪವಾದ
ಜಯ ನಿಷ್ಕಲ ನಿಶ್ಚಲ ನಿರ್ವಿಭೇದ
ಸರ್ವಜ್ಞ ಸರ್ವಗತ ಸರ್ವಸ್ವರೂಪ
ಸರ್ವಾಮರವಂದಿತ ವಿಗತಪಾಪ
ಜಯ ಸೂಕ್ಷ್ಮ ಸ್ಥೂಲ ಜ್ಞಾನನಿರತ
ಜಯ ಪರಮ ಪರಂಪರ ಜನ್ಮವಿರತ

1 ಅ (ಗಜ) 2 ನಮ (ಗಟತ) 3 ಕಿ (ಚಜಟತ) 4 ರವಂತಾಶ (ಚ) 5 ತಿ (ಗಚಜ) 6 ಜಿ (ಗಚ)

ಜಯಪುಣ್ಯಜನಾರ್ಚಿತ[1]ಪಾದನಿಧೇ[1]
ರತ್ನತ್ರಿತಯಾಕರವಾರಿನಿಧೇ
ಜಯ ಸಕಲ ಸುರಾಸುರಲೋಕಗುರೋ
ಕಲ್ಪಾಮರನಾಯಕ ಕಲ್ಪತರೋ
ಜಯೋತ್ತುಂಗಸಿಂಹಾಸನಾಸೀನಮೂರ್ತೇ
ಜಗಚ್ಚಕ್ರ ವಿಖ್ಯಾತ ತೀರ್ಥೇಶತೀರ್ತೇ
ಜಯ ದ್ರೋಹಮೋಹಾಹಿತೋತ್ಪಾತಕೇತೋ
ಮಹಾಘೋರಕರ್ಮಾರಿಸಂಹಾರಹೇತೋ
ಜಯ ತ್ರಿಲೋಕಮಂಡನ
ಪ್ರಚಂಡಕರ್ಮಖಂಡನ
ಪ್ರಜಾನುರಾಗವರ್ಧನ
[2]ತ್ರಿಲೋಕಸೇವ್ಯ ನಿರ್ಧನ[2]
ಪ್ರಶಾಂತಾಂತರಂಗ ಪ್ರಭಾಭಾಸ್ವರಾಂಗ
ಪ್ರಸಿದ್ಧಾಭಿಧಾನ ಪ್ರಮೋಕ್ಷಪ್ರಧಾನ
ಪ್ರಣಷ್ಟಪ್ರಮಾ[3]ದ ಪ್ರಕೃಷ್ಟಪ್ರಮೋದ[3]
ಪ್ರಧೃಷ್ಯದ್ಗಭಸ್ತೇ ನಮಸ್ತೇ ನಮಸ್ತೇ
ವರಭಾವಲಯಂ ಪರಭಾವಲಯಂ
ಪರಿಭಾವಿಭವಂ ಪ್ರತಿಭಾವಿಭವಂ
ಹಿತಹೃತ್ತನಯಂ ಪರಿವೃತ್ತನಯಂ
ವರತೀರ್ಥಕರಂ ರುಚಿರಾರ್ಥಕರಂ
ಭವತಾಪಹರಂ ದುರಿತಾಪಹರಂ
ವಿಗಳದ್ವೃಜಿನಂ ಪ್ರಣಮಾಮಿ ಜಿನಂ
ಜಯ ಜಿನೇಂದ್ರ ನರಸುರೇಂದ್ರ
ದುರಿತದೂರ ದಳಿತಮಾರ
ಹತವಿಕಾರ ಭುವನಸಾರ
ವಿಹತಮೋಹ ಚರಮದೇಹ
ಗುಣವಿಲಾಸ ಸುಖನಿವಾಸ
ಭವ್ಯಶರಣ ಶಾಂತಕರಣ
ವಿದಿತತತ್ವ ವಿಪುಲಸತ್ವ

1 ವಾದವಿದಿತ (ಚ) 2 ಇಲ್ಲ (ಗಚಜ) 3 ದ (ಗಚ)

ವಿಶದ[1]ವೃತ್ತ ವಿಮಲಚಿತ್ತ[1]
ಸಮವಿಧಾನ ಮದವಿಹೀನ
ಬೋಧನಿಲಯ ಕರ್ಮವಿಲಯ
ಗತಕಷಾಯ ರುಚಿರಕಾಯ
ಸುಭಗರೂಪ ರಹಿತ[2]ಕೋಪ[2]
ಕಾಲಕಾಲ ಧರ್ಮಶೀಲ
ಶುದ್ಧಭಾವ ಪುಣ್ಯಜೀವ
ಸರ್ವಭವ್ಯ ಲೋಕಸೇವ್ಯ
ಪರಮಪುಣ್ಯ ಜಯಶರಣ್ಯ
ಸ್ವಸ್ತಿ ಸಕಲಾಮರ ನರೋರಗಜನಾಧೀ
ಶಸ್ತುತಪದದ್ವಯ ಸಮಸ್ತವಿದುಷಾಂ ವ
ಸ್ತುಸ್ತವನತೋ [3]ಗುಣಗಣ[3]ಸ್ತವನತೋ ರೂ
ಪಸ್ತವನತೋ ಭವತು ಮಂಗಳಮಹಾಶ್ರೀಃ
ಜಯ [4]ನರಸುರ[4] ಮೌಳಿಸ್ಥೂಲ ಮಾಣಿಕ್ಯಮಾಲಾ
ಕಿರಣಗಣ ವಿಲಾಸ ಪ್ರೋಲ್ಲಸತ್ಪಾದಪೀಠ
ತ್ರಿದಶಶಿಖರಿಚೂಡಾರತ್ನತ್ರಯಾಲಂ
ಕರಣಗುಣ ವಿಶುದ್ಧಾ ತೀರ್ಥಕೃತ್ ತ್ವಾಂ ನಮಾಮಿ

ಎಂದು ನಾನಾ ಛಂದೋಬಂಧದಿನಮರವೃಂದಂಬೆರಸಮರೇಂದ್ರಂ ಜಿನೇಂದ್ರ ವೃಂದಾರಕನನಾನಂದದಿನಭಿವಂದಿಸಿ

ಸುರಪತಿ ಬೆಸಸೆ ಸಮುಗ್ರಾ
ದರದಿಂದಂ ಸ್ವಾಪತೇಯಪತಿ ಸಕಲ ಜಗ
ದ್ಗುರುಗೆ ಜಗನ್ಮಂಡನಮಂ
ವಿರಚಿಸಿದಂ ಸಮವಸರಣಭೂಮಂಡಲಮಂ ೧೬

ಬಳಸಿದ ನೀರ್ಗಾದಿಗೆಗಳ
ಬಳೆದ ಮುಗಿಲ್ಗಳ ಬೆಡಂಗು ವಳಯಾಕೃತಿಯಿಂ

1 ವೃತ್ತ (ಅ) ವೆತ್ತ (ಜ) 2 ಕಾಮ (ಚ) 3 ಗುಣ (ಕಗಚಜ) 4 ಸುರನರ (ಚಜ)

ಜಳಧಿದ್ವೀಪಾಕೃತಿಗಳ
ಬೆಳಗುವುನಿಱಿ[3]ಸಿದುವು [1]ಸಮವ[1]ಸೃತಿಮಂಡಲದೊಳ್ ೧೭

ಪೆರ್ವೀದಿಗಳಿಂ ನೇಸಱು
ಮಿರ್ವಡಗಲುವೆಸೆಯೆ ಬೀದಿಬೀದಿಗಳೆಲ್ಲಂ
ಸರ್ವಮಣಿತೋರಣಂಗಳ್
ಪರ್ವಿಗೆ ಸೊಗಯಿಪುದು ಸಮವಸರಣವಿಲಾಸಂ ೧೮

ಕೊಳಗಳ ಮಾನಸ್ತಂಭಾ
ವಳಿಯ ಮಹಾಧ್ವಜದ ನಾಟ್ಯಶಾಲೆಯ ಕೋಷ್ಠಂ
ಗಳ ರಚನೆಯಿಂದೆ ಧನದಂ
ವಿಳಾಸಮಂ ಮೆಱೆಯೆ ಬಣ್ಣಿಸಲ್ಕೆನ್ನಳವೇ ೧೯

ಶ್ರೀಮದಶೋಕಪ್ರಾಸಾ
ದಾಮರತರು [2]ಚೈತ್ಯ[2]ವೃಕ್ಷಸಿದ್ಧಾರ್ಥಮಹಾ
ಸಾಮಜರಿಪುವಿಷ್ಟರ ಲ
ಕ್ಷ್ಮೀಮಂಟಪ ಗಂಧಕುಟಿಯದೇನೊಪ್ಪಿದುದೋ ೨೦

ಅದೆಂತೆಂದೊಡೀಮಹೀತಳದಿಂ ತೊಟ್ಟು ಮೇಲೆ ಪಂಚಸಹಸ್ರ ಚಾಪೋತ್ಸೇಧದಿಂ ಗಗನತಲದೊಳ್ ದ್ವಾದಶಯೋಜನಸಮವೃತ್ತಸಂಸ್ಥಾನಮುಮೇಕಖಂಡಾಖಂಡಲ ನೀಲೋಪಲ[3]ವಿನಿ[3]ರ್ಮಿತಮುಂ ಪ್ರಥಮಾದಿ ದಿಕ್ಚತುಷ್ಟಯ ಪ್ರತ್ಯೇಕ ಶೋಭಮಾನಪಾದಲೇಪೌಷಧಿ ಸಾಮರ್ಥ್ಯ ಸಂಪನ್ನ ದಿವಿ[4]ಜ ಮನುಜ[4] ತಿರ್ಯಗ್ಜಾತಿ ಭವ್ಯ ಜೀವಸುಖಾರೋಹಣೋಚಿತ ವಿಚಿತ್ರ ರತ್ನಮಯ ವಿಂಶತಿಸಹಸ್ರಸೋಪಾನ ವಿರಾಜಮಾನಮುಮಲ್ಲಿಂ ಪೊಱಗೆ ಮಕರತೋರಣಾಲಂಕೃತಮುಂ ಮಣಿಮಯಸೋಪಾನ ಬಹುವಿಧಧ್ವಜರಾಜಿವಿರಾಜಿತಮುಂ [5]ಬಾಹ್ಯಾಂತರ[5] ಜಗತೀತಲಯುಗಳಪ್ರತಿಷ್ಠಾಪಿತ ಪ್ರತ್ಯೇಕಾಷ್ಟೋತ್ತರಶತ ಕಾಳ ಮಹಾಕಾಳ ಪಾಂಡುಕ ಪಿಂಗಳ ನೈಸರ್ಪ ಪದ್ಮ ಮಾಣವಕ ಶಂಖ ಸರ್ವರತ್ನ ನವನಿಧಿ[6]ಪರಿಪೂರ್ಣಮುಂ[6] ಜ್ಯೋತಿಷ್ಕ ದ್ವಾರಪಾಲಕ ಸಮನ್ವಿತಮುಮಪ್ಪ ನಾಲ್ಕುಂ ಕನಕಮಯ ಗೋಪುರದ್ವಾರದಿಂದಮೊಪ್ಪುವ ಸರ್ವ

---

1 ಸಮ (ಗಜ) 2 ಚೈತ್ರ (ಕ) 3 ನಿ (ಗಚಜ) 4 ಜ (ಕಟ) 5 ಬಾಹ್ಯತರ (ಕಗಜ) ಬಹುತಲ (ಟ) 6 ಸಂಪೂರ್ಣನಂ (ಗಚ) ಸಂಪೂರ್ಣಮುಂ (ಗಚ)

ರತ್ನಚೂರ್ಣಘಟಿತಮುಮಂ ಮಣಿಮಯಾಟ್ಟಾಳಕಾಳಂಕೃತಮುಮಪ್ಪ ಧೂಳೀಪ್ರಾಕಾರ ದಿಂದಮಲ್ಲಿಂದೊಳಗೆ ನಾಲ್ಕುಂ ಪೆರ್ವೀದಿಗಳ ನಡುವೆ ಮೊದಲ ಗೋಪುರದ್ವಾರಕ್ಕೆ ಗಾವುದದಂತರ[1]ದೊಳು ಬೇಱಿಬೇಱಿ ತಪನೀಯ ಗೋಪುರದ್ವಾರದಿಂ ರತ್ನಚೂರ್ಣ ಘಟಿತಮುಮಂ ಮಣಿಮಯಾಟ್ಟಾಳಕಾಳಂಕೃತಮುಮಪ್ಪ ಪ್ರಾಕಾರದಿಂದಮಲ್ಲಿಂದೊಳಗೆ ನಾಲ್ಕು ಪೆರ್ವೀದಿಗಳ ನಡುವೆಯೊಂದು ಗೋಪುರದ್ವಾರಕ್ಕೆ ಗಾವುದದಂತರದೊಳು[1] ರಜತ ಚತುಷ್ಟಯ ಪ್ರಾಕಾರತ್ರಯಂಗಳೊಳ್ ಪ್ರಥಮಪ್ರಾಕಾರದೊಳಗಣ ಮಹಾ ವೀದೀಭಾಗದೊಳಮರ[2]ನಾಥ ಮಹಿಷನಾಥ[2] ಸರಿನ್ನಾಥ ಧನನಾಥ ಸನಾಥಮಪ್ಪ ದಿಕ್ಪಾಲರ ಕೇಳೀಪ್ರಾಸಾದಂಗಳಿಂದಂ ದ್ವಿತೀಯ ಪ್ರಾಕಾರದೊಳಗಣ ಬನದ ನಡುವಣ ವೀದೀಭಾಗದೊಳಗಣ ನೈರುತಿಪವಮಾನೇಶಾನಕತಾರ ರಮ್ಯ ಹರ್ಮ್ಯಂಗಳಿಂದ ಮಿಂತಷ್ಟಲೋಕಪಾಲನಿಲಯಂಗಳಿಂದಂ ತ್ರಿಕೋಣ ಚತುಷ್ಕೋಣ ಸಮವೃತ್ತಂ ಗ[3]ಳಪ್ಪ[3] ಬಾವಿಗಳಿಂದೊಪ್ಪುವೆರಡುಂ ಬನದಿನತ್ತ ತೃತೀಯ ಪ್ರಾಕಾರದೊಳಗೆ ವೈಡೂರ್ಯಮಯಮುಮಂ ಕಾಂಚನಮಯಮುಮಂ ಸ್ವರ್ಣರತ್ನಮಯಮುಮಾಗಿ ಯಥಾ ಕ್ರಮದಿನೆಂಟುಂ ನಾಲ್ಕುಂ ನಾಲ್ಕುಂ ಬಳ್ಳಿಡಿಯಮಪ್ಪ ಮೂಱುಂ ಪೀಠಂಗಳ ಮೇಗ ನರ್ಘ್ಯ ರತ್ನಮಯ ಜಿನಪ್ರತಿಮಾಚತುಷ್ಟಯಾಲಂಕೃತ ಚತುರಸ್ರಮೂಲಭಾಗ ದೊಳಂ ಸಮವೃತ್ತಮಪ್ಪಗ್ರಭಾಗದ ಮೇಗೆ ರತ್ನಫಲಂಗಳ ನಾಲ್ಕುಂ ದೆಸೆಯೊಳ ಮಮರೇಂದ್ರಾಭಿಷಿಕ್ತಮಾಗಿರ್ದ ಜಿನಬಿಂಬಂಗಳೊಳಮಾಲೋಲಕೇತು[4]ಜಾಲ ಘಂಟಾ ಜಾಲ[4] ಚಾಮರಮಾಲೆಗಳೊಳಂ ವಿಚಿತ್ರಾತಪತ್ರತ್ರಯಾಲಂಕೃತಶಿಖರಂಗಳೊಳಂ ನೆಱೆದು ಕನಕಮಯ ಮಣಿಮಯ ಮಾನಸ್ತಂಭ ಚತುಷ್ಟಯಪ್ರಾಕಾರಂಗಳೊಳಗೆ ಮರುಜ್ಜನಮಜ್ಜನೋಚಿತಂಗಳುಂ ರತ್ನಮಯ ಸೋಪಾನಂಗಳುಂ ಕನಕಮಯ[5]ತಟಂ[5] ಗಳುಮಪ್ಪ ನಂದೆಯುಂ ನಂದೋತ್ತರೆಯುಂ ನಂದಾವತಿಯುಂ ನಂದಿಘೋಷೆಯುಂ ವಿಜಯೆಯುಂ ವೈಜಯಂತೆಯುಂ ಜಯಂತೆಯುಮಪರಾಜಿತೆಯುಮಶೋಕೆಯುಂ [6]ಸುಪ್ರಬುದ್ಧೆಯುಂ[6] ಕುಮುದೆಯುಂ ಪುಂಡರೀಕೆಯುಂ ಆನಂದೆ[7]ಯುಂ ಮಹಾನಂದೆ ಯುಂ[7] ಸುಪ್ರತಿಷ್ಠೆಯುಮೆಂದಿಂತು ಪೂರ್ವಾದಿಯಾಗೊಂದೊಂದು ಮಾನಸ್ತಂಭಕ್ಕೆ ನಾಲ್ಕುಗೆಯ್ದು ಸಮಚತುರಸ್ರಂಗಳಪ್ಪ ಪದಿನಾ[8]ಱು[8] ಬಾವಿಗಳಿಂದಮವಱ ಪೊಱಗಣ ಕೋಣ್ಗಳೊಳ್ ಪಾದಪ್ರಕ್ಷಾಲನೋಪಯೋಗ್ಯಮಾಗಿರ್ದ ಕನಕಕುಂಡಯುಗದಿ ನೊಪ್ಪಿ ನೃತ್ಯನ್ನಿಳಿಂಪಸುಂದರೀಜನಂಗಳಿಂದಮನೇಕಸ್ತುತಿಶತಮುಖರಾ ಶತಮುಖ ಪ್ರಮುಖ ಸುರೇಂದ್ರವೃಂದಾರಕರಿಂದಲಂಕರಿಸಿ [9]ಮಿಥ್ಯಾ[9]ಜ್ಞಾನಿಯ ಮಾನಮಂ

---

1 ದೊಳು (ಚ) 2 ನಾಥ (ಚಟ) 3 ಳಿಂದೊಪ್ಪುವ (ಗಚಜ) 4 ಜಾಲ (ಕಟ) 5 ಕವಾಟಂ (ಚ) 6 ಸುಭದ್ರೆಯುಂ (ಚ) 7 ಯುಂ (ಕಟ) 8 ಲ್ಕು (ಚ) 9 ಮಿಥ್ಯಾ ದರ್ಶನ (ಚ)

ಸ್ತಂಭಿಸುವ ಮಾನಸ್ತಂಭಂಗಳಿನೊಂದು ಮಾನಸ್ತಂಭದಿನಾ ಮಾನಸ್ತಂಭಂಬರಮೇಕೈಕ ಜಿನಗೃಹಾಂತರಿತ ವಾಪೀಕೂಪ ಕಮಲಾಕರಮಂಡಿತ ವನಷಂ[1]ಡ[1] ಮಧ್ಯಗತ ಪಂಚ ಪಂಚಪ್ರಾಸಾದಪಂಕ್ತಿಗಳಿಂದಂ ಮಾನಸ್ತಂಭದಿರ್ಕೆಲದೊಳಿರ್ದ ಮಣಿತೋರಣಶತಂ ಗಳಿಂದಂ ಮಾನಸ್ತಂಭದಿಂ ಕಿಱಿದಂತರಂಬೋದಲ್ಲಿ ಮುಂ ಪೇೞ್ದ ತೆಱದೊಳ್ ರತ್ನಮಯ ಸೋಪಾನ ನಾನಾವಿಧ ಪತಾಕಾಭಿರಾಮ ಬಹಿರಂತರ್ಜಗತೀತಲಂಗಳೊಳ್ ನಿಱಿಸಿದಷ್ಟ ಮಂಗಳ ನವನಿಧಿಪರೀತಮುಂ ಜ್ಯೋತಿಷ್ಕ ದೌವಾರಿಕ ಸಮೇತಮುಮಪ್ಪ ರಜತಮಯ [2]ಗೋಪುರ[2]ದ್ವಾರದ ಶಾಂತಕುಂಭವೇದಿಕಾಭ್ಯಂತರದೊಳ್ ವಿಸ್ಫುರಿತ ಸ್ಫಟಿಕಮಣಿವಿಲ ಸದುಭಯತಟಘಟಿತ ಹಾಟಕ ಸೋಪಾನಶ್ರೇಣಿಯಿಂದಂ ಸಲಿಲಕೇಳೀ ನಿರತ ನಿಳಿಂ ಪಖಚರಯುವತೀಜನಮನೋಹರಮುಮಖಿಳ ಜಲಚರ ಜಲಕುಸುಮ ಸಂದೋಹ ಸುಂದರಮುಮಹೀಯಮಾನ ವಿಮಲಸುರಭಿಜಲಭರಿತಮುಮಪ್ಪ ನೀರ್ಗಾದಿಗೆಯಿಂದ ಮೆರಡನೆಯ ಗೋಪುರದ್ವಾರದಿಂ ಮಣಿತೋರಣಶತದಿಂದೊರ್ಗಾವುದದಂತರದೊಳ್ ಮುನ್ನೆ ಪೇೞ್ದಂತೆ ಸೋಪಾನ ವಿವಿಧ ಧ್ವಜಾಷ್ಟಮಂಗಳ ನವನಿಧಿಜ್ಯೋತಿಷ್ಕದಂಡಧರ ಪರಿವೃತ ಸರ್ವರತ್ನರಚಿತಮಪ್ಪ ರೌಪ್ಯಮಯ ಗೋಪುರದ್ವಾರದ ಕನಕಮಯ ವೇದಿಕೆ ಯಿಂದೊಳಗೆ ಬಕುಳತಿಳಕಪುನ್ನಾಗ ಸಹಕಾರಕರ್ಣಿಕಾರ ವಿಚಕಿಲನಿಚಯ ಮಂದಮಕ ರಂದಸಮಾಸಕ್ತ ಮತ್ತಮಧುಕರ[3]ವಾಳಕೀರ[3] ಕೋಕಿಳಮುಖರ ಸಕಲರವರಮಣೀ ಯಮುಂ ನಿಳಿಂಪದಂಪತೀಶತಕೇಳೀವಿಳಾ[4]ಸಾಕೃತ[4]ಕೃತಕಗಿರಿಶತಕಮನೋಹರ ಮುಮಪ್ಪ ವಲ್ಲೀವನಂಗಳಿಂದಂ ಮೂಱನೆಯ ಗೋಪುರದ್ವಾರದಿಂದತ್ತ ಮಣಿತೋರಣ ಶತಸಮೇತಯೋಜನಾಂತರದೊಳುನ್ನತ ಸೋಪಾನ ವಿಚಿತ್ರವಸ್ತ್ರಧ್ವಜಾಷ್ಟಮಂಗಳ ನವ ನಿಧಿಪರ್ಯಂತಮುಂ ಕುಬೇರಕುಮಾರಪ್ರತಿಹಾರಕರಕ್ಷಿತಮುಮಪ್ಪ ರೂಪ್ಯಗೋಪುರ ದ್ವಾರದಿಂ ಕಾರ್ತಸ್ವರಪ್ರಾಕಾರದಿಂದೊಳಗೆ ಅಶೋಕ ವಕುಳ ತಿಲಕ ಹಿಂತಾಲ ತಮಾಲ ಜಂಬು ಜಂಬೀರ ಲವಂಗ ನಾರಂಗಾದ್ಯನೇಕಾನೋಕಹಾನೀಕ ಕಮನೀಯಮುಮನೇಕ ಕೃತಕಗಿರಿ ಕೃತಕನದೀಪುಳಿನತಳಕೇಳೀವಿಳಸಿತ ಕಳಹಂಸಚೈತ್ಯವೃಕ್ಷೋಪಲಕ್ಷಿತಂಗಳಾಗಿ ನಾಲ್ಕುಂ ದೆಸೆಯೊಳ್ ಅಶೋಕವನ ಸಪ್ತಪರ್ಣವನ ಚಂಪಕವನ ಚೂತವನಂಗ ಳಿಂದಂ ಮಣಿತೋರಣಶತದಿನೆಸೆವ ಮಹಾವೀಥಿಯಿರ್ಕೆಲದೊಳಂ ಒಂದೊಂದು ನೆಲಂಗ ಳೊಳ್ ಮೂವತ್ತೆರಡುಗೆಯ್ದ [5]ನಾಟಕಶಾಲೆಯೊಂದೊಂದು ನಾ[5]ಟಕಂಗಳೊಳ್ ಮೂವತ್ತಿರ್ವರು ನರ್ತಿಸುತಿರ್ಪ ಸುರೇಂದ್ರ[6]ಸೌಂ[6]ದರಿಯರಿಂದೊಪ್ಪುವ ಮೂಱು ಮೂಱು ನೆಲೆಯ ಧವಳವರ್ಣದೆರಡೆರಡು ನಾಟಕಶಾಲೆಗಳಿಂದಮವಱ ಮುಂದಣಿರ್ಕೆ ಲದೆರಡು ಧೂಪಘಟಂಗಳಿಂದಂ ನಾಲ್ಕನೆಯ ಗೋಪುರದ್ವಾರದಿಂದೊಳಗೆ ಯೋಜನಾಂ

---

1 ಡ ಮಂಡಿತ (ಚ) 2 ಪುರ (ಗಚಜ) 3 ವಾಚಾಳ (ಕಟ) ವಾಳಕಿರಣ (ಚ) ವಾಳ ಕೀರಕ (ಜ) 4 ಸಾ (ಗಚ) 5 ನಾ (ಕ) 6 ಸುಂ (ಗಚ)

ತರದೊಳ್ ಸರ್ವರತ್ನಘಟಿತ ರತ್ನಮಯ ಸೋಪಾನ ನಾನಾ ಧ್ವಜಾಷ್ಟಮಂಗಳ ನವ ನಿಧಿಪರೀತಮುಂ ಯಕ್ಷದೌವಾರಿಕರಕ್ಷ್ಯಮುಮಪ್ಪ ರಜತಗೋಪುರದ್ವಾರದ ಕನಕ ಮಯವೇದಿಕಾಭ್ಯಂತರದೊಳ್ ಪಂಚವಿಂಶತಿಚಾಪಾಂತರಮಾಗಿ ಧ್ವಜಂ ಗರುಡ ಗಜೇಂದ್ರ ಮೃಗೇಂದ್ರ ಹಂಸಮಯೂರ ಕಮಲಮಾಲಾಚಕ್ರವಸ್ತ್ರ ಗಜಲಾಂಛನ ಮಪ್ಪ ದಶವಿಧದಿನೆಸೆದು ದಶಾರ್ಧ ರತ್ನಮಯಸ್ತಂಭಾಗ್ರದೊಳಷ್ಟಾಶೀತ್ಯಂಗಳಿಂದಂ ನೂಱೆಂಟಾಗಿ ಸಾಸಿರದೆಂಬತ್ತೆಕ್ಕಂ ಅವೆಲ್ಲಂ ನಾಲ್ಕುಂ ದೆಸೆಯೊಳವಾಗಿ ನಾಲ್ಸಾಸಿ ರದ ಮುನ್ನೂಱಿಪ್ಪತ್ತು ಮಹಾಧ್ವಜಂಗಳಿಂದಮೊಂದೊಂದರ್ಕೆ ನೂಱೆಂಟಾಗಿ ನಾಲ್ಕುಲಕ್ಕೆಯುಂ[1]ಮಱುವತ್ತು[1]ಸಾಸಿರದಯ್ನೂಱಱುವತ್ತು ಪರಿವಾರಧ್ವಜಂಗಳಿಂದಂ ಐದನೆಯ ಗೋಪುರದ್ವಾರದಿಂದೊಳಗೆ ಮಣಿತೋರಣ ಶತಸಹಿತ ಯೋಜನಾಂ ತರದೊಳ್ ಪೂರ್ವೋಕ್ತ ವರ್ಣನೋಪೇತ ಜ್ಯೋತಿರಂಗ ಪ್ರದೀಪಾಂಗ ತೂರ್ಯಾಂಗ ವಸ್ತ್ರಾಂಗ ಭೋಜನಾಂಗ ಮಧ್ಯಾಂಗ ಭೂಷಣಾಂಗ ಗೃಹಾಂಗ ಮಾಲ್ಯಾಂಗ ಭಾಜ ನಾಂಗಮುಮೆಂಬ ದಶವಿಧ ಕಲ್ಪವೃಕ್ಷಾಲಂಕೃತಮುಂ ಪ್ರಾಕಾರಾಭ್ಯಂತರ ಪೀಠತ್ರ ಯಾಧಿಷ್ಠಿತಮುಮಪ್ಪ ನಾಲ್ಕುಂ ದೆಸೆಯ ನಮೇರು ಮಂದಾರ ಪಾರಿಜಾತ ಮಹಿ ಜಾತ ಮೂಲಸ್ಥಿತ ಭಗವದಭಿಮುಖ ಕಾರ್ಯೋತ್ಸರ್ಗ ಸಿದ್ಧಪ್ರತಿಮೆಗಳಿಂದಂ[2]ಅನರ್ಘ್ಯ ರತ್ನ[2]ತೋರಣಶತಶೋಭಿತ [3]ವೀಥೀ[3]ವಿಭಾಗೋಭಯ ಪಾರ್ಶ್ವಸ್ಥಿತಾ [4]ಶ್ವೇತ[4]ಧವಳಂ ಗಳಿಂ ದ್ವಾತ್ರಿಂಶತ್ಪ್ರೇಕ್ಷಣಿಕ ಪ್ರೇಕ್ಷಣೀಯಮುಮಪ್ಪನೇಕನಾಟ್ಯಶಾಲಾದ್ವಯಂಗ ಳಿಂದಮವಱ ಮುಂದಣೆಕ್ಕೆಲದೊಳಂ ಅತಿಬಹಳ ಸುರಭಿ ಪರಿಮಳ ಕಾಳಾಗರುಧೂಪ ಧೂಮ ಶ್ಯಾಮಳಿತ [5]ಶೇ[5]ಖರಂಗಳಪ್ಪೆರಡುಂ ಧೂಪಘಟಂಗಳಿಂ[6]ದೆಯುಮಾ[6]ಱನೆಯ ಗೋಪುರದ್ವಾರದಿಂದೊಳಗೆ ಯೋಜನಾಂತರಂಬೋದಲ್ಲಿ ರತ್ನಮಯಸೋಪಾನಧ್ವಜ ಮಂಗಳ ನವನಿಧಿಸಮೇತಮುಂ ರತ್ನದಂಡಧರ ರತ್ನೇಂದ್ರರಕ್ಷಿತಮುಮಪ್ಪ ರಜತ ಗೋಪುರದ್ವಾರದ ಹೇಮಮಯ ವೇದಿಕಾಭ್ಯಂತರದೊಳ್ ವಜ್ರಾಧಿಷ್ಠಾನ ಬಂಧ ಬಂಧುರಮುಂ ಶಾತಕುಂಭಕುಂಭಸ್ತಂಭಸಂಭೃತಮುಂ ಚಂದ್ರಕಾಂತೋಪಲ ಭಿತ್ತಿ ಕಾಂತಮುಂ ದ್ವಿತಲ ತ್ರಿತಲ ಚತುಸ್ಥಲ ಸಪ್ತಸ್ಥಲಾದ್ಯಲಂಕೃತ ಜಿನಾಭಿಷೇಕ ಜಿನ ಚರಿತ ಗೀತನರ್ತನವಿನೋದದಿಂ ನಿರಂತರ ಸುರಮಿಥುನಶತಸನಾಥಮುಂ [7]ಮರು[7] ದಾಂದೋಳಿತಾನೇಕ ಪತಾಕಾಕೀರ್ಣಕಮುಂ ಸ್ವಸ್ತಿಕ ಸರ್ವತೋಭದ್ರವಲಂಭಿಚ್ಛಂದ ನಾನಾಚ್ಛಂದಸುಂದರಮುಮಪ್ಪ ಮಹಾ[8]ಪ್ರಾ[8]ಸಾದಪರಂಪರೆಯಿಂದಂ ಮಹಾವೀಥೀ ಮಧ್ಯದೊಳ್ ಮಣಿತೋರಣ ಶತಾಂತರಿತಂಗಳುಂ ವಿಚಿತ್ರಛತ್ರತ್ರಯಂಗಳುಂ ಚಂಚ

---

1 ಮುವತ್ತಾರು (ಗಚಜ) 2 ರತ್ನ (ಕಟ) 3 ಮಹಾವೀಧಿ (ಗಜ) ಮಹಾವಿಧ (ಚ) 4 ತ್ರೇತ (ಕಗಚ) ತ್ವೇತ (ಟ) 5 ಶಿ (ಗಚಜ) 6 ದಮೂ (ಕ) ದಾ (ಗಚ) 7 ಮಂ (ಕಗಚಜ) 8 ಪ್ರ (ಕಚಟ)

ಸ್ತಂಭಿಸುವ ಮಾನಸ್ತಂಭಂಗಳಿನೊಂದು ಮಾನಸ್ತಂಭದಿನಾ ಮಾನಸ್ತಂಭಂಬರಮೇಕೈಕ ಜಿನಗೃಹಾಂತರಿತ ವಾಪೀಕೂಪ ಕಮಲಾಕರಮಂಡಿತ ವನಷಂ[1]ಡ[1] ಮಧ್ಯಗತ ಪಂಚ ಪಂಚಪ್ರಾಸಾದಪಂಕ್ತಿಗಳಿಂದಂ ಮಾನಸ್ತಂಭದಿರ್ಕೆಲದೊಳಿರ್ದ ಮಣಿತೋರಣಶತಂಗಳಿಂದಂ ಮಾನಸ್ತಂಭದಿಂ ಕಿಱಿದಂತರಂಬೋದಲ್ಲಿ ಮುಂ ಪೇೞ್ದ ತೆಱದೊಳ್ ರತ್ನಮಯ ಸೋಪಾನ ನಾನಾವಿಧ ಪತಾಕಾಭಿರಾಮ ಬಹಿರಂತರ್ಜಗತೀತಲಂಗಳೊಳ್ ನಿಱಿಸಿದಷ್ಟ ಮಂಗಳ ನವನಿಧಿಪರೀತಮುಂ ಜ್ಯೋತಿಷ್ಕ ದೌವಾರಿಕ ಸಮೇತಮುಮಪ್ಪ ರಜತಮಯ [2]ಗೋಪುರ[2]ದ್ವಾರದ ಶಾಂತಕುಂಭವೇದಿಕಾಭ್ಯಂತರದೊಳ್ ವಿಸ್ಫುರಿತ ಸ್ಫಟಿಕಮಣಿವಿಲಸದುಭಯತಟಘಟಿತ ಹಾಟಕ ಸೋಪಾನಶ್ರೇಣಿಯಿಂದಂ ಸಲಿಲಕೇಳೀ ನಿರತ ನಿಳಿಂಪಖಚರಯುವತೀಜನಮನೋಹರಮುಮಖಿಳ ಜಲಚರ ಜಲಕುಸುಮ ಸಂದೋಹ ಸುಂದರಮುಮಹೀಯಮಾನ ವಿಮಲಸುರಭಿಜಲಭರಿತಮುಮಪ್ಪ ನೀರ್ಗಾದಿಗೆಯಿಂದ ಮೆರಡನೆಯ ಗೋಪುರದ್ವಾರದಿಂ ಮಣಿತೋರಣಶತದಿಂದೊರ್ಗಾವುದದಂತರದೊಳ್ ಮುನ್ನೆ ಪೇೞ್ದಂತೆ ಸೋಪಾನ ವಿವಿಧ ಧ್ವಜಾಷ್ಟಮಂಗಳ ನವನಿಧಿಜ್ಯೋತಿಷ್ಕದಂಡಧರ ಪರಿವೃತ ಸರ್ವರತ್ನರಚಿತಮಪ್ಪ ರೌಪ್ಯಮಯ ಗೋಪುರದ್ವಾರದ ಕನಕಮಯ ವೇದಿಕೆಯಿಂದೊಳಗೆ ಬಕುಳತಿಳಕಪುನ್ನಾಗ ಸಹಕಾರಕರ್ಣಿಕಾರ ವಿಚಕಿಲನಿಚಯ ಮಂದಮಕರಂದಸಮಾಸಕ್ತ ಮತ್ತಮಧುಕರ[3]ವಾಳಕೀರ[3] ಕೋಕಿಳಮುಖರ ಸಕಲರವರಮಣೀಯಮುಂ ನಿಳಿಂಪದಂಪತೀಶತಕೇಳೀವಿಳಾ[4]ಸಾಕೃತ[4]ಕೃತಕಗಿರಿಶತಕಮನೋಹರಮುಮಪ್ಪ ವಲ್ಲೀವನಂಗಳಿಂದಂ ಮೂಱನೆಯ ಗೋಪುರದ್ವಾರದಿಂದತ್ತ ಮಣಿತೋರಣಶತಸಮೇತಯೋಜನಾಂತರದೊಳುನ್ನತ ಸೋಪಾನ ವಿಚಿತ್ರವಸ್ತ್ರಧ್ವಜಾಷ್ಟಮಂಗಳ ನವನಿಧಿಪರ್ಯಂತಮುಂ ಕುಬೇರಕುಮಾರಪ್ರತಿಹಾರಕರಕ್ಷಿತಮುಮಪ್ಪ ರೂಪ್ಯಗೋಪುರದ್ವಾರದಿಂ ಕಾರ್ತಸ್ವರಪ್ರಾಕಾರದಿಂದೊಳಗೆ ಅಶೋಕ ವಕುಳ ತಿಲಕ ಹಿಂತಾಲ ತಮಾಲ ಜಂಬು ಜಂಬೀರ ಲವಂಗ ನಾರಂಗಾದ್ಯನೇಕಾನೋಕಹಾನೀಕ ಕಮನೀಯಮುಮನೇಕ ಕೃತಕಗಿರಿ ಕೃತಕನದೀಪುಳಿನತಳಕೇಳೀವಿಳಸಿತ ಕಳಹಂಸಚೈತ್ಯವೃಕ್ಷೋಪಲಕ್ಷಿತಂಗಳಾಗಿ ನಾಲ್ಕುಂ ದೆಸೆಯೊಳ್ ಅಶೋಕವನ ಸಪ್ತಪರ್ಣವನ ಚಂಪಕವನ ಚೂತವನಂಗಳಿಂದಂ ಮಣಿತೋರಣಶತದಿನೆಸೆವ ಮಹಾವೀಥಿಯಿಕ್ಕೆಲದೊಳಂ ಒಂದೊಂದು ನೆಲಂಗಳೊಳ್ ಮೂವತ್ತೆರಡುಗೆಯ್ದ [5]ನಾಟಕಶಾಲೆಯೊಂದೊಂದು ನಾ[5]ಟಕಂಗಳೊಳ್ ಮೂವತ್ತಿರ್ವರು ನರ್ತಿಸುತಿರ್ಪ ಸುರೇಂದ್ರ[6]ಸೌಂ[6]ದರಿಯರಿಂದೊಪ್ಪುವ ಮೂಱು ಮೂಱು ನೆಲೆಯ ಧವಳವರ್ಣದೆರಡೆರಡು ನಾಟಕಶಾಲೆಗಳಿಂದಮವಱ ಮುಂದಣೆಕ್ಕೆಲದೆರಡು ಧೂಪಘಟಂಗಳಿಂದಂ ನಾಲ್ಕನೆಯ ಗೋಪುರದ್ವಾರದಿಂದೊಳಗೆ ಯೋಜನಾಂ

---

1 ಡ ಮಂಡಿತ (ಚ) 2 ಪುರ (ಗಚಜ) 3 ವಾಚಾಳ (ಕಟ) ವಾಳಕಿರಣ (ಚ) ವಾಳಕೀರಕ (ಜ) 4 ಸಾ (ಗಚ) 5 ನಾ (ಕ) 6 ಸುಂ (ಗಚ)

ತರದೊಳ್ ಸರ್ವರತ್ನಘಟಿತ ರತ್ನಮಯ ಸೋಪಾನ ನಾನಾ ಧ್ವಜಾಷ್ಟಮಂಗಳ ನವ ನಿಧಿಪರೀತಮುಂ ಯಕ್ಷದೌವಾರಿಕರಕ್ಷ್ಯಮುಮಪ್ಪ ರಜತಗೋಪುರದ್ವಾರದ ಕನಕ ಮಯವೇದಿಕಾಭ್ಯಂತರದೊಳ್ ಪಂಚವಿಂಶತಿಚಾಪಾಂತರಮಾಗಿ ಧ್ವಜಂ ಗರುಡ ಗಜೇಂದ್ರ ಮೃಗೇಂದ್ರ ಹಂಸಮಯೂರ ಕಮಲಮಾಲಾಚಕ್ರವಸ್ತ್ರ ಗಜಲಾಂಛನ ಮಪ್ಪ ದಶವಿಧದಿನೆಸೆದು ದಶಾರ್ಧ ರತ್ನಮಯಸ್ತಂಭಾಗ್ರದೊಳಷ್ಟಾಶೀತ್ಯಂಗಳಿಂದಂ ನೂಱೆಂಟಾಗಿ ಸಾಸಿರದೆಂಬತ್ತೆಕ್ಕುಂ ಅವೆಲ್ಲಂ ನಾಲ್ಕುಂ ದೆಸೆಯೊಳಮಾಗಿ ನಾಲ್ವಾಸಿ ರದ ಮುನ್ನೂಱಿಪ್ಪತ್ತು ಮಹಾಧ್ವಜಂಗಳಿಂದಮೊಂದೊಂದರ್ಕೆ ನೂಱೆಂಟಾಗಿ ನಾಲ್ಕುಲಕ್ಕೆಯು[1]ಮಱುವತ್ತು[1]ಸಾಸಿರದಯ್ನೂಱಱುವತ್ತು ಪರಿವಾರಧ್ವಜಂಗಳಿಂದಂ ಐದನೆಯ ಗೋಪುರದ್ವಾರದಿಂದೊಳಗೆ ಮಣಿತೋರಣ ಶತಸಹಿತ ಯೋಜನಾಂ ತರದೊಳ್ ಪೂರ್ವೋಕ್ತ ವರ್ಣನೋಪೇತ ಜ್ಯೋತಿರಂಗ ಪ್ರದೀಪಾಂಗ ತೂರ್ಯಾಂಗ ವಸ್ತ್ರಾಂಗ ಭೋಜನಾಂಗ ಮದ್ಯಾಂಗ ಭೂಷಣಾಂಗ ಗೃಹಾಂಗ ಮಾಲ್ಯಾಂಗ ಭಾಜ ನಾಂಗಮುಮೆಂಬ ದಶವಿಧ ಕಲ್ಪವೃಕ್ಷಾಲಂಕೃತಮುಂ ಪ್ರಾಕಾರಾಭ್ಯಂತರ ಪೀಠತ್ರ ಯಾಧಿಷ್ಠಿತಮುಮಪ್ಪ ನಾಲ್ಕುಂ ದೆಸೆಯ ನಮೇರು ಮಂದಾರ ಪಾರಿಜಾತ ಮಹಿ ಜಾತ ಮೂಲಸ್ಥಿತ ಭಗವದಭಿಮುಖ ಕಾರ್ಯೋತ್ಸರ್ಗ ಸಿದ್ಧಪ್ರತುಮೆಗಳಿಂದಂ [2]ಅನರ್ಘ್ಯ ರತ್ನ[2]ತೋರಣಶತಶೋಭಿತ [3]ವೀಥೀ[3]ವಿಭಾಗೋಭಯ ಪಾರ್ಶ್ವಸ್ಥಿತಾ [4]ಶ್ವೇತ[4]ಧವಳಂ ಗಳಿಂ ದ್ವಾತ್ರಿಂಶತ್ಪ್ರೇಕ್ಷಣಿಕ ಪ್ರೇಕ್ಷಣೀಯಮುಮಪ್ಪನೇಕನಾಟ್ಯಶಾಲಾದ್ವಯಂಗ ಳಿಂದಮವಱ ಮುಂದಣಿಕ್ಕೆಲದೊಳಂ ಅತಿಬಹಳ ಸುರಭಿ ಪರಿಮಳ ಕಾಳಾಗರುಧೂಪ ಧೂಮ ಶ್ಯಾಮಳಿತ [5]ಶೇ[5]ಖರಂಗಳಪ್ಪೆರಡುಂ ಧೂಪಘಟಂಗಳಿಂ[6]ದೆಯುಮಾ[6]ಱನೆಯ ಗೋಪುರದ್ವಾರದಿಂದೊಳಗೆ ಯೋಜನಾಂತರಂಬೋದಲ್ಲಿ ರತ್ನಮಯಸೋಪಾನಧ್ವಜ ಮಂಗಳ ನವನಿಧಿಸಮೇತಮುಂ ರತ್ನದಂಡಧರ ರತ್ನೇಂದ್ರರಕ್ಷಿತಮುಮಪ್ಪ ರಜತ ಗೋಪುರದ್ವಾರದ ಹೇಮಮಯ ವೇದಿಕಾಭ್ಯಂತರದೊಳ್ ವಜ್ರಾಧಿಷ್ಠಾನ ಬಂಧ ಬಂಧುರಮುಂ ಶಾತಕುಂಭಕುಂಭಸ್ತಂಭಸಂಭೃತಮುಂ ಚಂದ್ರಕಾಂತೋಪಲ ಭಿತ್ತಿ ಕಾಂತಮುಂ ದ್ವಿತಲ ತ್ರಿತಲ ಚತುಸ್ಥಲ ಸಪ್ತಸ್ಥಲಾದ್ಯಲಂಕೃತ ಜಿನಾಭಿಷೇಕ ಜಿನ ಚರಿತ ಗೀತನರ್ತನವಿನೋದದಿಂ ನಿರಂತರ ಸುರಮಿಥುನಶತಸನಾಥಮುಂ [7]ಮರು[7] ದಾಂದೋಳಿತಾನೇಕ ಪತಾಕಾಕೀರ್ಣಕಮುಂ ಸ್ವಸ್ತಿಕ ಸರ್ವತೋಭದ್ರವಲಂಭಿಚ್ಛಂದ ನಾನಾಚ್ಛಂದಸುಂದರಮುಮಪ್ಪ ಮಹಾ[8]ಪ್ರಾ[8]ಸಾದಪರಂಪರೆಯಿಂದಂ ಮಹಾವೀಥೀ ಮಧ್ಯದೊಳ್ ಮಣಿತೋರಣ ಶತಾಂತರಿತಂಗಳುಂ ವಿಚಿತ್ರಛತ್ರತ್ರಯಂಗಳುಂ ಚಂಚ

---

1 ಮುವತ್ತಾರು (ಗಚಜ) 2 ರತ್ನ (ಕಟ) 3 ಮಹಾವೀಥಿ (ಗಜ) ಮಹಾವಿಥ (ಚ) 4 ತ್ರೀತ (ಕಗಚ) ತ್ವೇತ (ಟ) 5 ಶಿ (ಗಚಜ) 6 ದಮೂ (ಕ) ದಾ (ಗಚ) 7 ಮಂ (ಕಗಚಜ) 8 ಪ್ರ (ಕಚಟ)

ಚ್ಚಮರರುಹಮಣಿ ಕಿಂಕಿಣೀಮಾಳಿಕಾಳಂಕೃತ ಜಿನಸಿದ್ಧಬಿಂಬಕದಂಬ ಸಂಕೀರ್ಣಂಗಳು ಮಪ್ಪ ಸಕಳ ಭವ್ಯಜನಾಭ್ಯರ್ಚಿತ ಶೋಣಮಾಣಿಕ್ಯಮಯಸ್ತೂಪಂಗಳಿಂದಮೆಸೆ ನೆಯ ಗೋಪುರದ್ವಾರ*ದಿಂದಮೊಳಗರ್ಧ ಯೋಜನಾಂತರದೊಳ್ ಸೋಪಾನ ಧ್ವಜ ಮಂಗಳ ನವನಿಧಿರಮಣೀಯಮುಂ ಮಣಿಖಚಿತದಂಡಧರ ಕಲ್ಪಾಮರ ದಂಡಧರ ಕಲ್ಪಾಮರ ಪರಿಪಾಳಿತಮುಮಪ್ಪ ಮರಕತಮಣಿಮಯ* †ಗೋಪುರದ್ವಾರ ಕಾಶಸ್ಫಟಿಕ ಮಯಭಿತ್ತಿಗಳೊಳಂ ಉಭಯೋಭಯ ವೀಥ್ಯಂತರಾ†ಳಂಗಳೊಳ್ ನವಮವೇದಿಕೆಯಿಂ ತೊಟ್ಟು ಪ್ರಾಕಾರಾಭ್ಯಂತರದೊಳ್ ಶ್ರೀಮಂಟಪಮಿರ್ದುದಾಕಾಶಸ್ಫಟಿಕಮಯ ನವಮ ವೇದಿಕೆಯಿಂ ತೊಟ್ಟು ಧೂಳೀಪ್ರಾಕಾರಂಬರಂ ನೀಳ್ದ ಮಹಾವೀಥಿಗಳಿಕ್ಕೆಲದೊಳಂ ಕ್ಷುಲ್ಲಕ ದ್ವಾರರಾಜಿವಿರಾಜ ವಿಮಳ ಸ್ಫಟಿಕಭಿತ್ತಿಗಳೊಳಂ ಉಭಯೋಭಯ ವೀಥ್ಯಂತ ರಾಳಂಗಳೊಳ್ ನವಮವೇದಿಕೆಯಿಂ ತೊಟ್ಟಾಕಾಶಸ್ಫಟಿಕ ಪ್ರಾಕಾರಂಬರಂ ಬಳೆದೆರಡಾ ಕಾಶಸ್ಫಟಿಕಭಿತ್ತಿಗಳೊಳಂ ವಿಭಾಗಂಬಡೆದ ಪನ್ನೆರಡು ಕೋಷ್ಠಂಗಳೊಳ್ ದಕ್ಷಿಣಾನು ಕ್ರಮದೊಳೆ ಸಿಂಹಸೇನ ಪ್ರಮುಖ ಗಣಧರಗಣಮುಂ ಕಲ್ಪಾಮರಕಾಂತಾಸಂ[1]ತತಿಯು ಮುಪಾಸಕಾಂಗ[1]ನಾಸಂಗತ ಗಣನೀಗಣಮುಂ ಜ್ಯೋತಿರಮರಯುವತಿ[2]ಸಮಿ[2]ತಿಯುಂ ವಾನವ್ಯಂತರ ನಿತಂಬಿನೀ ನಿಕುರಂಬಮುಂ ಭವನವಾಸಿಕವನಿತಾ ಸಮೂಹಮುಂ [3]ಭನ ಜ[3] ಸಂಕುಲಮುಂ ಜ್ಯೋತಿರ್ದೇವ ಸಮೂಹಮುಮಯಮುಂ ಕಲ್ಪದಿವಿಜಸಮುದಯ ಮುಂ ಮಾನವನಿವಹಮುಂ ತಿರ್ಯಕ್ತತಿಯುಂ ಎಂಬೀ ದ್ವಾದಶಗುಣಂಗಳಿಂ ನೆಱೆ ದನುಕ್ರಮದೊಳಿರ್ದ ಸಮವಸರಣಮಂಡಲದೊಳ್ ತೀರ್ಥಕರ ಪರಮದೇವರ ದೇಹೋ ತ್ಸೇಧ ದ್ವಾದಶಗುಣೋತ್ಸೇಧಂಗಳಪ್ಪ ಗೋಪುರಮಾನಸ್ತಂಭಪ್ರಾಸಾ[4]ದ ಚೈತ್ಯಾಲಯ[4] ಚೈತ್ಯವೃಕ್ಷತ್ರಿಕ ಸರ್ವಧ್ವಜಸ್ತಂಭಮುಂ ಸಿದ್ಧಾಯತನಪಾದಪಸ್ತೂಪಲಕ್ಷ್ಮೀಮಂಟಪಾ ಶೋಕವೃಕ್ಷಂಗಳೆಂಬಿವಱಿಂ ತೀರ್ಥಕರ ಚತುರ್ಗುಣೋತ್ಸೇಧಮುಂ ಕ್ರಮಹಾನಿಯು ಮಪ್ಪ ಮಹಾಪ್ರಾಕಾರಂಗಳಿಂ ಸಮರುಂದ್ರಮಪ್ಪ ವೇದಿಕೆಗಳಿಂ ಅವಕ್ಕೆ ಸಾತಿರೇಕಂ ಗಳಪ್ಪ ತೋರಣಂಗಳಿಂದಷ್ಟಮ ಗೋಪುರದ್ವಾರದಿಂದೊಳಗೆ ಗವ್ಯೂತ್ಯಂತರಾಳದೊಳಿರ್ದ ವೈಡೂ[5]ರ್ಯಕನಕ[5]ಸರ್ವರತ್ನಮಯಂಗಳುಮಾಗಿ ಯಥಾಕ್ರಮದಿನೆಂಟುಂ ನಾಲ್ಕುಂ ನಾಲ್ಕು ದಂಡೋಚ್ಛ್ರಿತಂಗಳುಂ ಪಂಚಾಶದಧಿಕ ಸಪ್ತಶತಸಾರ್ಧಸಪ್ತಶತಂ ಸಹ ಸ್ರಾರ್ಧ ಚಾಪವಿಷ್ಕಂಭಂಗಳುಮಪ್ಪವರ ಮೇಗಣನುಕ್ರಮದೊಳೆ ನಾಲ್ಕುಂ ದೆಸೆಯೊ ಳೇಕ ಚಾಪೋತ್ಸೇಧ ಧರ್ಮಚಕ್ರಧರ ಯಕ್ಷಕುಮಾರರಿಂದಂ ದಶವಿಧ ಮಹಾಧ್ವಜಂ ಗಳಿಂದಮಷ್ಟಮಂಗಳ ನವನಿಧಿಗಳಿಂದಮೊಪ್ಪುವ ಮೂಱುಂ ಪೀಠಂಗಳಿಂದಂ ತೃತೀಯ

---

1 ಮುಪಾಸನಕಾಂಚ (ಚ) 2 ಮ (ಕಟತ) 3 ವನಜ (ಕ) ಭವನಚಸಮಾಜಮುಂ ನವಜ (ಗಜ) ಭವನಚ ಸಮಾಜಮುಂದವಜ (ಚ) 4 ದ (ಚ) 5 ರ್ಯ (ಗಚಜ)

*—* 'ಚ' ಪ್ರತಿಯಲ್ಲಿಲ್ಲ, †—† 'ಕ ಚ' ಪ್ರತಿಗಳಲ್ಲಿಲ್ಲ.

ಪೀಠದ ಮೇಲೆ ಷಡ್ದಂಡ ಶತವಿಸ್ತಾರಮುಂ ನವದಂಡ ಶತೋತ್ಸೇಧಮುಮಪ್ಪ ಗಂಧ ಕುಟಿಯ ಮಧ್ಯಭಾಗಮನಲಂಕರಿಸಿ ನಾನಾ ರತ್ನಮಯಮಪ್ಪ ಪೀಠಮನುತ್ತುಂಗ ಸಿಂಹಾಸನಮುಮಂ ನಾಲ್ವೆರಲಂತರಮುಮಂ ಮುಟ್ಟದೆ ಪಂಚಾಶದಧಿ[1]ಕ ಚತುಶ್ಶತ[1] ಚಾಪೋತ್ಸೇಧನುಂ ಸಮಚತುರಸ್ರ ಶರೀರ ಸಂಸ್ಥಾನನುಮಷ್ಟೋತ್ತರ ಶತಲಕ್ಷಣನುಂ ನವಶತವ್ಯಂಜನಾಲಂಕೃತನುಂ ಅಖಿಲ ಭುವನಭವ್ಯಜನ ನಯನಕುವಲಯವನ ಶರದ ಮೃತಕರ ನಿಕಾಯಮಾನ ಶಾತಕುಂಭವರ್ಣನುಂ ಪ್ರಭಾವಳಯವಿರಚಿತ ಸಕಲ ಜ್ಯೋತಿರ್ಲೋಕವಿಕಳಸದಂಶುಮಾಲಿಮಂಡಳನುಂ ಜಗತ್ತ್ರಯಾಶ್ಚರ್ಯಪ್ರಕಾಶನ ಕರಾತಪತ್ರತ್ರಯನುಂ ಯಕ್ಷಕುಮಾರ ಕರತಳಾಂದೋಳಿತ ಕ್ಷೀರಾಂಭೋಧಿವೀಚೀ ನಿಚಯ ರುಚಿರ ಚತುಷ್ಷಷ್ಟಿ ಚಂಚಚ್ಚಾರುಚಾಮೀಕರ ಚಾಮರಕಲಾಪನುಂ ಸಕಲ ವಿನೇಯಜನ ವಿಲೋಚನ ಚಂಚರೀಕನಿಚಯ .ನಿಚಿತಾಶೋಕನೋಕಹನುಂ ಸಾನಂ [2]ದ[2]ವೃಂದಾರಕ ವೃಂದವಂದ್ಯಮಾನ ಮಂದ್ರನಿನದ ಗಂಭೀರದುಂದುಭಿಯುಂ ಶೂನ್ಯೀ ಕೃತ ತ್ರಿಭುವನೋದ್ಯಾನ ಮಧುಕರ ನಿಕರಾರಬ್ಧ ಮಧುಸುಧಾಪಾನಕಸಂತಾನಕ ಪ್ರಕೃತಿ ಸುರತರು ಕಸುಮಸಾರನುಂ ಅಶೇಷಭಾಷಾಸ್ವಭಾವ ಸರ್ವಾರ್ಧಮಾಗಧೀ ಯಪ್ರರಾ[3]ರ್ಥ್ಯ[3]ಭಾಷಾಸುಧಾಸಾರಸಂ[4]ತತ[4] ಸಂತರ್ಪಿತ ದಿವಿಜ ಮನುಜ ತಿರ್ಯಗ್ವಿ ನೇಯನುಮಾವಿರ್ಭೂತ ಚತುಸ್ತ್ರಿಂಶದತಿಶಯನುಮಮರಪತಿ ಸಹಸ್ರ ಚಕ್ಷುರಪರ್ಯಾ ಪ್ತಸೌಂದರ್ಯಾವಲೋಕನುಮಹಮಹಮಿಕಾಪ್ರಣಮದಮರಕೋಟಿ ಮಕುಟ ಸಂಘಟ್ಟ ವಿಘಟ್ಟಮಾನ ಮುಕ್ತಾಮಣಿ ಪ್ರಕರವಿಹಿತಪಾದಪೀ[5]ಠ ತಟೋಪ[5]ಕಂಠತಳ ಮಹೀತ ಲೋಪಹಾರನುಮಾಗಿ ಧನಪತಿವಿನಿರ್ಮಿತ ಸಮವಸರಣಮಂಡಲಮನಲಂಕರಿಸಿ

ವಿಲಸತ್ಕೈವಲ್ಯಬೋಧಾಧಿಗತ ಸಕಲತತ್ತ್ವಾರ್ಥನಾರ್ಹಂತ್ಯಲಕ್ಷ್ಮೀ
ನಿಲಯಂ ಸರ್ವಾಮರಾಧೀಶ್ವರ ಮಕುಟಮಣಿಜ್ಯೋತಿರೌಘಪ್ರಸೂನಾ
ವಲಿಮಾಲಾಭ್ಯರ್ಚಿತಾಂಘ್ರಿದ್ವಯನಪಗತಘಾತಿದ್ವಿಷದ್ವೀರ್ಯನಿರ್ದಂ
ಕಲಧೌತಕ್ಷ್ಮಾಧರಂಬೊಲ್ ಸಮವಸರಣದೊಳ್ ಧರ್ಮತೀರ್ಥಾಧಿನಾಥಂ ೨೧

ಇದು ಸಕಲ ಮುನೀಂದ್ರವೃಂದ ವೃಂದಾರಕ ಶ್ರೀಮದಜಿತಸೇನ ಭಟ್ಟಾರಕ ಶ್ರೀ ಪಾದಪದ್ಮ ಪ್ರಸಾದಾಸಾದಿತ [6]ರತ್ನ[6]ತ್ರಯಾಲಂಕೃತ ಶ್ರೀಮದಭಿನವ ಕವಿಚಕ್ರವರ್ತಿ

---

1 ಕ (ಕ) 2 ದವೃಂದ (ಗಚಟ) 3 ರ್ಥ್ಯ (ಟಜ) 4 ತ (ಜಟತ) 5 ಠೋಪ ಕಂಠೋಪ (ಕ) 6 ಶ್ರೀರತ್ನ (ಟತ)

ಕವಿರತ್ನ ವಿರಚಿತ ಶ್ರೀದಾನಚಿಂತಾಮಣಿ [1]ನಿ[1]ರ್ಮಾಪಿತ ಶ್ರೀಮದಜಿತತೀರ್ಥಕರ ಪುರಾಣತಿಲಕದೊಳ್

## ಸಮವಸರಣವರ್ಣನಂ

## ಸಪ್ತಮಾಶ್ವಾಸಂ

1 ನಿನಿ (ಕಟತ)

# ಅಷ್ಟಮಾಶ್ವಾಸಂ

ಶ್ರೀಸಮವಸರಣಲಕ್ಷ್ಮೀ
ಭಾಸುರನಮರಾಸುರಾರ್ಚನಾವ್ಯಾಪಿತ ಸಿಂ
ಹಾಸನನವನತ ಸಕಲ ಸು
ರಾಸುರನಭಿವಂದ್ಯಚರಿತನಪಗತದುರಿತಂ ೧

ಅಂತೆನಿಸಿರ್ದಶೇಷಜಗದತಿಶಯಾವಹ ಪುಣ್ಯಪುಂಜಾಯಮಾನಮೂರ್ತಿಯನಮರ [1]ಪತಿ[1]ಸಂಗೀತಕಸಂಗೀಯಮಾನಕೀರ್ತಿಯಂ ಜಿನೇಂದ್ರವೃಂದಾರಕನಂ ಶ್ರೀಮದಜಿತ ಭಟ್ಟಾರಕನನಮರಾಧೀಶ್ವರನನೇಕ ಸ್ತುತಿಶತಸಹಸ್ರಂಗಳಿಂ ಸ್ತುತಿಯಿಸಲ್ ಬಗೆದು ಬದ್ಧಾಂಜಲಿಯಾಗಿ

ಶ್ರೀಸಕಲ ಸುರಾಸುರಪತಿ
ಭಾಸುರಮಣಿಮಕುಟ ಘಟ್ಟಿತಾಂಘ್ರಿದ್ವಯ ಸಿಂ
ಹಾಸನಶಿಖ[2]ರ[2]ಸ್ಥಿತಚರ
ಣಾ ಸಕಲಜನಕ್ಕೆ ನೀನೆ ಕಲ್ಪಾಂಘ್ರಿಪನೈ ೨

ದಿವದಿಂದಂ ನೀಂ ಗರ್ಭ
ಕ್ಕವತರಿಸದ ಮುನ್ನೆ ಮೂಱು ಕೋಟಿಯುಮರೆಯುಂ
ದಿವಸಕ್ಕಂ ಕಱಿ[3]ವೊಂ ವೈ
ಶ್ರವಣಂ ಜಿನ[3]ನೀಂಬೊ[3]ಲಧಿಕ ಪುಣ್ಯರುಮೊಳರೇ ೩

ಅನಿಮಿಷ ಸುಂದರಿಯರ್ ನಿಜ
ಜನನಿಗೆ ಜಿನ ಮಾಡಿ ಗರ್ಭಸಂಶೋಧನಮಂ
ವಿನಯಂಬೆರಸೋಲಗಿಸುವ
ರೆನಿಸಿದ ಪುಣ್ಯಮನಗಣ್ಯಮಂ ಬಣ್ಣಿಪರಾರ್ ೪

---

1 ಪರಿ (ಕಗ) 2 ರದ ಯ (ಕ) 3 ನಿಮ್ಮೊ (ಟ)

ದಿವಿಜರ್ ಮಜ್ಜನವಳ್ಳಿರ್
ದಿವಿಜನಗಂ ಪೀಠಮಾಗೆ ದಧಿಘೃತದುಗ್ಧಾ
ರ್ಣವಷಂಡಕಾಂಡಮಾದು
ತ್ಸವಮನದೇವೊಗೞ್ವುದಘಬಲಾಹಕಪವನಾ ೫

ಬಱಿದಾದುದು ಜಲಧಿಜಲಂ
ಕಿಱಿದಿರ್ದುದು ಮೇರು ನಿನ್ನ ಭರದಿಂ ಸುಯ್ಯೊಳ್
ತಱಿಗೆಲೆಗಳಂತೆ ಪಾಱಿದ
ರಱಿಕೆಯ ಸುರರೇಂ ಕುಮಾರಚರಿತಂ ನಿನ್ನಾ ೬

ಈ ವಯಸದೊಳೀ ರೂಪಿನೊ
ಳೀ ವಿಭವದೊಳಜಿತ ನೀನೆ ತೊಱೆದೈ ರಾಜ್ಯ
ಶ್ರೀವಲ್ಲಭೆಯಂ ತೊಱೆಯಲ್
ದೇವ ಪೆಱರ್ ತರಳಚಿತ್ತರೇಂ ನೆಱೆದಪರೇ ೭

ಕುಲತಿಲಕ ಸಕಲ ಜಗತೀ
ತಲತಿಲಕ ಕುಬೇರರಚಿತಮುಚಿತಶ್ರೀಯಂ
ಕಳಕಳಿಪುದು ಸಕಲ ಶ್ರೀ
ವಿಳಾಸಮಂ ನಿನ್ನ ಸಮವಸರಣ ವಿಲಾಸಂ ೮

ನಯನತ್ರಯಯುತ ರತ್ನ
ತ್ರಯನಿಧಿ ಯೋಕತ್ರಯಂ [1]ಸ[1]ಲೋಕಿತ[2]ತಾಳ[2]
ತ್ರಯ ಪಾಂಡುರಾತಪತ್ರ
ತ್ರಯಮಿವು ನಿನಗಲ್ಲದಜಿತ ಪೆಱರ್ಗೊಪ್ಪುಗುಮೇ ೯

ಕ್ಷಿತಿಯೊಳಗೆಲ್ಲಂ ಧರ್ಮಾ
ಮೃತಮಂ ಕಱೆಯುತ್ತಮಿರ್ಪ ನಿನಗೆ ನಿಳಿಂಪ

1 ಸು (ಬ) 2 ಕಾಳ (ಬ)

ಪ್ರತತಿ ಸುರಪುಷ್ಪವೃಷ್ಟಿಯ
ನತಿಶಯಮೆನೆ ಕಱಿಕಿವುದೆಂಬುದೊಂದಚ್ಚರಿಯೇ ೧೦

ವನಬರ್ಹಿಗಳಂ ಮೇಘ
ಧ್ವನಿ ತಣಿಪುವ ತೆಱ[1]ದೆ ದೇವ[1] ನಿನ್ನಯ ದಿವ್ಯ
ಧ್ವನಿ ತಣಿಪಿದಪುದು ವಿಷ್ಟಪ
ಜನಮಂ ಸಕಲ ತ್ರಿವಿಷ್ಟಪೈಕಾಧಿಪತೀ ೧೧

ಭೂಮಂಡಲದೊಳ್ ನಿನ್ನಿಂ
ಭಾಮಂಡಲಮೆಸೆದು ಪಸರಿಸಿರೆ ನಕ್ಷತ್ರ
ಗ್ರಾಮಣಿಗಳ್ ನೆಗೞ್ದ ಹಿಮಕ
ರಾಮೃತಕರರೆಸೆಯಲಜಿತ ಪೇೞಾರ್ತಪರೇ ೧೨

ದುಂದುಭಿಗಭೀರರವ ಸುರ
ದುಂದುಭಿಗ[2]ಳ್ ಗಗನತ[2]ಳದೊಳೆಸೆದಪು[3]ವು[3] ಜನಾ
ನಂದಕರಂಗಳ್ ನೀನಘ
ಸಂದೋಹಮನಿಕ್ಕೆ ನೆಗೞ್ದ ಜಯದುಂದುಭಿವೊಲ್ ೧೩

ನೆರೆದಿಕ್ಕುವ ಯಕ್ಷರ್ಕಳ
ಕರತಲದೊಳ್ ಪೊರೆದು ಚಾರುಚಾಮೀಕರ ಚಾ
ಮರಚಾಮರಾಳಿ ಚಾಮೀ
ಕರರುಚಿರಚ್ಛಾಯೆ ನಿನಗದೇನೆಸೆದಪುದೋ ೧೪

ಜನಕಜನಜನಿತ ಶೋಕೋ
ಪನುದನವಾಶೋಕವೃಕ್ಷಮೆಸೆದಪುದು ನಮ
ಜ್ಜನಮನಶೋಕಂ ಮಾೞ್ಪವೊ
ಲನೇಕ[4]ಶಾಖಾ[4]ನಿಶೀರ್ಣ ಕಿಸಲಯ[5]ಚಯದಿಂ[5] ೧೫

---

1 ದೇ (ಚ) 2 ಗ್ಗಳನತ (ಕಗಜ) ಗ್ಗಳನತುಳ (ಚ) 3 ದು (ಟ) 4 ಶೋಕಾ (ಜ)
5 ದಿಂ (ಚ)

ನಿನಗನಘ ತುಂಗಸಿಂಹಾ
ಸನಮೆಸೆವುದು ದುರಿತ ಗಜಘಟಾಸಿಂಹ ಕನ
ತ್ಕನಕಮಣಿನಿಚಯು[1]ಖ[1]ಚಿತಂ
ಕನಕಮಹಾಶಿಖರಿಶಿಖರಲಂಘನಸಿಂಹಾ ೧೬

ದೇವಕೃತಂಗಳುಮಂ ಸ್ವಾ
ಭಾವಿಕಮುಮನಜಿತ ನೀನೆ ತಾಳ್ದಿದೆ ಜನಚೋ
ದ್ಯಾವಹಮಿವು ನಿನಗಲ್ಲದೆ
ದೇವ ಚತುಸ್ತ್ರಿಂಶದತಿಶಯಂ ಪೆಱಗೊರ್ಳವೇ ೧೭

ನಾಕಾವತರಣ ಭವದಭಿ
ಷೇಕಂ ನಿಷ್ಕ್ರಮಣಕೇವಲೋದಯಮಾಯ್ತಿಂ
ತೀ ಕಲ್ಯಾಣ ಚತು[2]ಷ್ಕಂ[2]
ಪ್ರಾಕಟ ಕಲ್ಯಾಣಮಿದರ್ಱಿದಿಂ ನಿರ್ವಾಣಂ ೧೮

ಅನಲಂಕಾರಮುಮುಜ್ಜನ
ಮನಂಬರಶ್ರೀವಿಳಾಸ[3]ಮು[3]ಕುಸುಮಮುವಿಲೇ
ಪನಮೆನಿಪ ನಿನ್ನ ರೂಪೊ
ಪ್ಪಿನ ಪೂ ಪೆಱರುಟ್ಟ ತೊಟ್ಟ ರೂಪೊಪ್ಪುಗು[4]ಮೇ[4] ೧೯

ಪದಿನೆಣ್ಬಾಸಿರ ಶೀಲದ
ಮೊದಲಿಗನೆಂಬತ್ತುನಾಲ್ಕು ಲಕ್ಕೆ ಗುಣಕ್ಕಂ
ಮೊದಲಿಗನೆನೆ ನಿನ್ನಯ ಶೀ
ಲದ ಗುಣದುನ್ನತಿಯನಜಿತ ಕಾಣ್ಬೆಮೆ ಪೆಱರೊಳ್ ೨೦

ನಿನಗಹಮಿಂದ್ರರುಮಿಂದ್ರರು
ಮುನಿಬರುಮಾ ಲೋಕಪಾಲರುಂ ಫಣಿಪತಿಗಳ್
ಜನಪತಿಗಳೆಲ್ಲಮೆಱಗುವ
ರೆನೆ ನಿನ್ನಡಿಗಜಿತ ಜಗದೊಳೆಱಗದರೊಳರೇ ೨೧

---

1 ರ (ಚ) 2 ಷ್ಟಂ (ಕ) ಷ್ಟ (ಗಚಜ) 3 ಸ (ಕ) ಸನ (ಗಚಜ) 4 ಮೋ (ಕ)

*ದೊರೆಗಾಣೆಂ ನಿನಗೆ ಜಿನೇ
ಶ್ವರ ಪೆಱರಂ ನಿನಗೆ ನೀನೆ ದೊರೆಯೆನಿಪೈ ಮಂ
ದರಗಿರಿಗೆ ಮಂದರಾದ್ರಿಯೆ
ದೊರೆ ಜಲಧಿಗಗಾಧಜಲಧಿ ದೊರೆ ಪೆಱವೊಳವೇ ೨೨

ಗುಣನಿಳಯ ಮೇರುಚೂಡಾ
ಮಣಿ ಶರಣಾಗತ ಜಗತ್ತ್ರಯೀಜನರಕ್ಷಾ
ಮಣಿ [1]ವಿನೆ[1]ಯ ದಾನಚಿಂತಾ
ಮಣಿ ಚೂಡಾಮಣಿಮರೀಚಿರಂಜಿತ ಚರಣಾ ೨೩

ಕವಿರತ್ನನ ವರವಸ್ತು
ಸ್ತವ ರೂಪಸ್ತವ ಗುಣಸ್ತವಾಭರಣಂ ಭೂ
ಭುವನದ ಭವ್ಯಜನಂಗ
ಳ್ಗಿವಲ್ತೆ ಕಂಠಸ್ಥಮಾಗೆ ಕಂಠಾಭರಣಂ ೨೪

ಎಂದು ಸಹಸ್ರಲೋಚನನುತ್ಪನ್ನ ಕೇವಲ ವಿಲೋಚನನನನೇಕ ಸ್ತುತಿಗಳಿಂ ಸ್ತುತಿಯಿಸಿ ಕಾಶ್ಯಪಗೋತ್ರನುಂ ಪ್ರಜಾಪತಿಯುಂ ಸ್ವಯಂಭುವುಂ ಸರ್ವಜ್ಞನುಂ ಸರ್ವದರ್ಶಿಯುಂ ಸರ್ವಗತನುಂ ತ್ರಿಣೇತ್ರನುಂ ತ್ರಿಲೋಕಸ್ವಾಮಿಯುಮಿವು ಮೊದಲಾಗಜಿತಂಗಷ್ಟೋತ್ತರ ಸಹಸ್ರನಾಮಮುಮನನ್ವರ್ಥಂ ಮಾಡೆ

ಭರತಂ ಮುನ್ನಾದಿತೀರ್ಥೇಶ್ವರನ ಚರಣಮಂ ತೀರ್ಥಭೂಪಾಲನತ್ಯಾ
ದರದಿಂ ಬಂದರ್ಚಿಯಿಂ ಪೂಜಿಸಿವುರುತರ ಪುಣ್ಯಾರ್ಜನಂಗೆಯ್ದನಾನುಂ
ಪುರು ಪುಣ್ಯೋಪಾರ್ಜನಂ ಕೂಡುವೆ[2]ನೆನಗೆನುತುಂ[2] ಭಾವಸಂಶುದ್ಧಿ ಮೆಯ್ವೆ
ತ್ತಿರೆ ತೀರ್ಥಕ್ಷತ್ರಿಯಂ ಪೂಜಿಸಿದನಜಿತತೀರ್ಥೇಶನಂ ಸತ್ಯಭಾಮಂ ೨೫

[3]ಅಂತಾ ಸ[3]ತ್ಯಭಾ[4]ಮ[4]ನೆಂಬ ತೀರ್ಥಕ್ಷತ್ರಿಯನುಂ ರೋಹಿಣಿಯೆಂಬ ಯಕ್ಷಿಯುಂ ಮಹಾಯಕ್ಷನೆಂಬ ಯಕ್ಷನುಂ ಸಿಂಹಸೇನಂ ಮೊದಲಾಗೆ ತೊಂಬ[5]ದಿಂಬರ್[5]ಗಣಧರರುಂ ಮೂಸಾಸಿರದೇೞ್ನೂರಯ್ವ[6]ದಿಂಬರ್[6] ಪೂರ್ವಧರರುಮಿರ್ಪತೆಣ್ಛಾಸಿರದ ನೂಱ

1 ನಿಸ (ಕ) ನಿಪ (ಗಜ) 2 ನಿನಗೆನುತುಂ (ಕಟ) ನಿನಗಿನಿತುಂ (ಗಚಜ) 3 ಸ (ಜ)
4 ಮ (ಗಚಜ) 5 ತಿಬ್ಬರು (ಗಜ) 6 ತ್ತುಬರ್ಪ (ಗಜ) * 'ಗಚ' ಪ್ರತಿಗಳಲ್ಲಿಲ್ಲ

ಪದಿಂಬರ್ ಶಿಕ್ಷಕರುಮೈಸಾಸಿರ[1]ದಱುನೂಱ[1]ವಧಿಜ್ಞಾನಿಗಳುಮಿರ್ಪತ್ತು ಸಾಸಿರ್ವರ್ ಕೇವಲಿಗಳುಮಿರ್ಪತ್ತು ಸಾಸಿರದ ನಾನೂರ್ವರ್ ವಿಕ್ರಿಯರ್ಧಿಸಂಪನ್ನರುಂ ಪನ್ನಿಚ್ಛಾಸಿರದಯ್ವದಿಂಬರ್ ಮನಃಪರ್ಯಯಜ್ಞಾನಿಗಳುಂ ಪನ್ನಿಚ್ಛಾಸಿರದನಾಲ್ನೂರ್ವರ್ ವಾದಿಗಳುಂ ಪ್ರಾಕ್ಕುಬ್ಜಾರ್ಯಿಕೆಯರ್ ಮೊದಲಾಗೆ ಮೂಱು ಲಕ್ಕೆಯುಮಿರ್ಪತ್ತುಸಾಸಿರ್ವರಜ್ಜಿಕೆಯರುಂ ಮೂಱು ಲಕ್ಕೆ ಶ್ರಾವಕರುಮೈದು ಲಕ್ಕೆ ಶ್ರಾವಕಿಯರುಮಸಂಖ್ಯಾತ ದೇವರುಂ ದೇವಿಯರುಂ ಸಂಖ್ಯಾತ ತಿರ್ಯಗ್ಜಾತಿಯುಂ ಬೆರಸಜಿತನಾಥಂ ದ್ವಾದಶಗಣಪರಿವೃತನಾಗಿ ಧರ್ಮಕ್ಷೇತ್ರಂಗಳೊಳ್ ಭವ್ಯಸಮಿತಿಗೆ ಧರ್ಮಾಮೃತಮಂ ಕಱೆ[3]ವುತ್ತುಂ ಪಶ್ಚಿಮ ಸಮುದ್ರ ಸಮೀಪದೊಳ್ ಒಂದೊಂದು ಲಕ್ಕೆ ಪೂರ್ವಕಾಲದಿನಗಮನಮುಮುಪಸರ್ಗಭಾವಮುಂ [2]ವಿಗತಾಹಾರತ್ವಮುಮ[2]ಚ್ಛಾಯತ್ವಮುಂ ಅಪಕ್ಷಸ್ಪಂದತ್ವಮುಂ ಗವ್ಯೂತಿ ಶತಚತುಷ್ಟಯ ಸುಭಿಕ್ಷತ್ವಮುಂ ಚತುರಾಸ್ಯತ್ವಮುಂ ಪ್ರಾಣಿವಧವಿಹೀನತ್ವಮುಂ ಸಮಪ್ರಸಿದ್ಧ ನಖಕೇಶತ್ವಮುಮನಂತಜ್ಞಾನತ್ವಮುಮೆಂಬ ಘಾತಿಕ್ಷಯಂಗಳಪ್ಪ ದಶಗುಣಂಗಳುಂ ಆದರ್ಶತಳ ಪ್ರತಿಮರತ್ನಮಹೀತಳತ್ವಮುಂ ತೃಣಧೂಳಿಶರ್ಕರಾಕಂಟಕಾದಿರಹಿತ ಮಹೀತಳದೊಳ್ ವಾತಕುಮಾ[3]ರ ಸಂಸ್ತರಣಮುಂ[3] ಮೇಘಕುಮಾರಸುರಭಿಜಳಸೇಚನಮುಂ ಕುಬೇರ ಕುಮಾರ ಕುಸುಮವೃಷ್ಟಿಪಾತಮುಂ ಸುರಭಿಮೃದು[4]ಶೀತ[4] ಪ[5]ವನ[5]ವಿಜೃಂಭಣಮುಮಾಶಾವಲಯ ನಿರ್ಮಳತ್ವಮುಂ ಸರ್ವಭಾಷಾತ್ಮಕಾರ್ಧಮಾಗಧತ್ವಧ್ವನಿ ನಿರ್ಗಮನಮುಂ ಸಮವಸರಣಮಂಡಲಗತನೈಯಾಮಯ[6]ವ್ಯದಾಪಾ[6]ಹ್ವಾನಮುಂ ವಿವಿಧ ವಿಷಯ ಗೋಚರಾನಂದಮುಂ [7]ಶಾಲಿ[7]ವ್ರೀಹಿಯವಗೋಧೂಮಾದಿ ಪ್ರಕೃಷ್ಟ ಸಸ್ಯನಿಷ್ಪತ್ತಿಯುಂ ಸರ್ವರ್ತುಕ ಕುಸುಮಫಲಪಲ್ಲವಭರಿತ ತರುವನ ಪರಿಣಾಮಮುಂ ಭಗವಚ್ಚರಣಕಮಲ ವಿನ್ಯಾಸಾ[8]ಪರ[8]ಸ್ಪಷ್ಟ ಕನಕಕಮಲ ಸಪ್ತಕ ಸನ್ನಿಧಾನಮುಮಷ್ಟವಿಧ ಮಂಗಳ[9]ದ್ರವ್ಯಾಧಾರಿ[9] ವಿಷಯಜನ ಪ್ರತ್ಯುದ್ಗಮಮುಂ ಧರ್ಮಚಕ್ರ ಪುರಸ್ಸರಜನಪ್ರತಿ ಸದ್ಧರ್ಮ[10]ಪ್ರೋ[10]ಷಣೆಯುಮೆಂಬ ದೇವಕೃತ ಚತುರ್ದಶಾತಿಶಯಮುಮಂ ತಾಳ್ದಿ ಚತುಸ್ತ್ರಿಂಶದತಿಶಯ ಸಮನ್ವಿತನಾಗಿ ಸಮ್ಮೇದಾಚಲಕ್ಕೈವರೆ

ನೆಗೞ್ದಿರ್ದಾದಿಜಿನೇಂದ್ರನಿಂದ್ರನಮಿತಂ ಕೈಲಾಸದೊಳ್ ಮುನ್ನ ಮು
ಕ್ತಿಗೆ ಸಂದಂದಜಿತಂ ದುರಂತದುರಿತ ಪ್ರಧ್ವಂಸಿ ಬಂದಿಲ್ಲಿ ಮು

---

1 ದಱುನೂರ್ವರ (ಕ) ದೈನೂರ್ವರ (ಗಚಜ) 2 ಮುಮ (ಗಚ) ಘ (ಜ) 3 ರಸ್ತರಣಮುಂ (ಕ) ರಾವಸ್ತರಣ (ಟ) 4 ಸಿತ (ಜ) 5 ದ (ಗ) 6 ಪಾ (ಕ) ವ್ಯಾಪಾ (ಚ) 7 ಸ್ವಾತಿ (ಗಜ) 8 ಮರ (ಗಜ) 9 ದ್ರವ್ಯದಾರಿ (ಕ) ದ್ರವ್ಯದಿದಾರಿ (ಟ) 10 ಘೋ (ಚ)

ಕ್ತಿಗೆ ಸಲ್ವಂ ಗಡ ಬರ್ದೆನೆನ್ನ ದೊರೆಗಿಲ್ಲದ್ರೀಂದ್ರಮೆಂದುತ್ಸವಂ
ಮಿಗೆ ಸಮ್ಮೇದಮುದಗ್ರಮಾದುದೆನಿಸಿತ್ತುತ್ತುಂಗ ಕೂಟಂಗಳಿಂ ೨೬

ಪಿರಿದುಂ ಕೀರ್ತಿಗೆ ನೋಂತುದಾ ಗಿರಿ ಕುಳಾದ್ರೀಂದ್ರಂಗಳಿರ್ದಂತೆ ದೇ
ವರದೇವಂ ನೆಗಟ್ದಿರ್ದುಪಾದ್ಯ ಜಿನತೀರ್ಥಾಧೀಶನಂತಲ್ಲಿಗಾ
ಸರದಿಂ ಬರ್ಕುಮತರ್ಕ್ಯಮಂತದರಿದೇ ಸೈಪುಳ್ಳೊಡಂತಾ ಮನೋ
ಹರ ಸಮ್ಮೇದನಗಕ್ಕೆ ಸಮ್ಮದಹರಂ ಬರ್ಪಂತದೇಂ ಸಮ್ಮದಂ ೨೭

ಆದಂ ಕೃತ ಸುಃದಂಪತಿ
ಮೋದಂ ನವಸುರಭಿಕುಸುಮ ಪರಿಮಳ ಬಹಳಾ
ಮೋದಂ ವಿಯಚ್ಚರೇಂದ್ರವಿ
[1]ನೋದ[1]ಕೃತಾಹ್ಲಾದಮೊಪ್ಪುಗುಂ ಸಮ್ಮೇದಂ ೨೮

ಅಂತೊಪ್ಪುವ ಸಮ್ಮೇದಾವನೀಧರಕ್ಕೆ ಕೃತ ಸಕಳ ಮೇದಿನೀ ವಿಹರಣನೊಂದು ತಿಂಗಳ್ ವಿಹರಣವಿಧಿಯಂ ಮಾಣ್ದು ಬಂದಜಿತನಾಥಂ ಧ್ಯಾನವಿಧಾನದಿಂ ಕರ್ಮಂಗಳಂ ಕಿಡಿಸಿದನಾ ಧ್ಯಾನಯೋಗಮರ್ಹತ್ಸಮಯದೊಳ್ ಧ್ಯಾನಾಧ್ಯೇಯಂ ಧ್ಯಾತೃ ಫಲಮೆಂದು ಚತುರಂಗಮಕ್ಕುಮವಱೊಳ್ ಚಿಂತಾಪ್ರಬಂಧ ಲಕ್ಷಣಂ ಧ್ಯಾನ ಮೆಂಬುದು ಯಥಾವಸ್ಥಿತ ವಸ್ತುಸ್ವರೂಪಂ [2]ಧ್ಯೇಯ[2]ಮೆಂಬುದು ಕಷಾಯ ಕಲುಷಿತನುಂ ಗುಪ್ತಿತ್ರಯನುಂ ಧ್ಯಾತೃವೆಂಬೊಂ ಸಂಸಾರಭ್ರಮಣಮುಂ ಸ್ವರ್ಗಾ ಪವರ್ಗಮುಂ ಫಲಮೆಂಬುದಕ್ಕುಂ ಇಂತೀ ಚತುರಂಗಧ್ಯಾನಮಪ್ರಶಸ್ತಂ ಪ್ರಶಸ್ತ ಮೆಂದಿತ್ತೆಱನಕ್ಕುಂ ಅವಱೊಳಪ್ರಶಸ್ತಮಾರ್ತಮೆಂದು ರೌದ್ರಮೆಂದುಮಿತ್ತೆಱನಕ್ಕುಂ ಅವಱೊಳ್ ಆರ್ತಧ್ಯಾನಂ ಬಾಹ್ಯಾಧ್ಯಾತ್ಮಿಕಭೇದದಿಂ ದ್ವಿಃಪ್ರಕಾರಮಕ್ಕುಂ ಅಲ್ಲಿ ಪರಾನುಮೇಯಮಪ್ಪ ಬಾಹ್ಯವಿಲಪನ ಪರಿದೇವನ ತಾಪನ ಪರಿಭವ ವಿಸ್ಮಯ ವಿಷಯ ಸಂಗಾದಿ ಚಿಹ್ನಮಕ್ಕುಂ ಸ್ವಸಂವಿದ್ಯೋತಿತಾರ್ಥಮ ಮನೋಜ್ಞ ಸಂಪ್ರಯೋಗಾನು ತ್ಪತ್ತಿ ಸಂಕಲ್ಪಾಧ್ಯವಸಾನಮೆಂದುಮುತ್ಪನ್ನವಿನಾಶಸಂಕಲ್ಪಾಧ್ಯವಸಾನಮೆಂದುಂ ಮನೋಜ್ಞ* ವಿಪ್ರಯೋಗಾನುತ್ಪತ್ತಿಸಂಕಲ್ಪಾಧ್ಯವಸಾನಮೆಂದುಂ ಉತ್ಪನ್ನಾವಿನಾಶ ಸಂಕಲ್ಪಾಧ್ಯವಸಾನಮೆಂದುಂ ಚತುರ್ವಿಧಮಕ್ಕುಂ ಮನೋಜ್ಞ*ಮೆಂಬುದು ದುಃಖ

1 ನೋದಾ (ಗಜ) 2 ಧಯ (ಕಟ) ದ್ಧ್ಯಯ (ಜ)
*—* ಜ- ಪ್ರತಿಯಲ್ಲಿಲ್ಲ.

ಸಾಧನಂ. ಆ ದುಃಖಹೇತುವುಂ ಬಾಹ್ಯಾಧ್ಯಾತ್ಮಿ[1]ಕ[1]ಮೆಂದೆರಡು ತೆಱನಕ್ಕುಂ ಅಲ್ಲಿ ಬಾಹ್ಯಮೆಂಬು[2]ದು ಚೇತನಾಚೇತನಕೃತಮೆಂದುಮಿತ್ತೆಱನಕ್ಕುಂ ಅವಱೊಳ್ ಚೇತನಕೃತಮೆಂಬುದು ದೇವಮನುಷ್ಯತಿರ್ಯಕ್ಸಂಪಾದಿತಾಸಾತಮಕ್ಕುಂ. ಅಚೇತನ ಕೃತಮೆಂಬುದು ವಿಷಕಂಟಕಶೃಣಶೀತೋಷ್ಣಾದಿಜನಿತ ದುಃಖಮಕ್ಕುಂ ಆಧ್ಯಾತ್ಮಿಕ ಕಾರಣಮುಂ ಶಾರೀರಮಾನಸಿಕಮೆಂದು [3]ದ್ವಿಭೇದ[3]ಮಕ್ಕುಂ ಅವಱೊಳ್ ಶಾರೀರ ಮೆಂಬುದು ವಾತಪಿತ್ತದೋಷ ವಿಶೇಷವೈಷಮ್ಯ ಸಮುದ್ಭವಮಪ್ಪ ಶರೀರಾಕ್ಷಿ ಕುಕ್ಷಿದಂತ ಶೂಲಾ[4]ದಿ[4]ಜನಿತಮಕ್ಕುಂ ಮಾನಸಿಕಮೆಂಬುದು ರತ್ಯರತಿ ಶೋಕಭಯಜುಗುಪ್ಸಾ ವಿಷಾದ ದೌರ್ಮನಸ್ಯಾದಿ ಜನಿತಮಕ್ಕುಂ ಇಂತೀ ಪೇೞ್ದ ಮನೋಜ್ಞಾದಿ ಸಂಪ್ರಯೋಗ ಮೆನಗೆ ಪುಟ್ಟದಿರ್ಕೆಂಬ ಚಿಂತಾಪ್ರಬಂಧಮೆ ಸಂಕಲ್ಪಂ ಅವಱೊಳ್ ತೀವ್ರ ಕಷಾಯಾನುರಂಜನೆ ಮಧ್ಯಮಾವಸಾನಮಿಂತಿದ ಮನೋಜ್ಞ ಸಂಪ್ರಯೋಗಾದುತ್ಪತ್ತಿ ಸಂಕಲ್ಪಾಧ್ಯವಸಾನಮೆಂಬುದಕ್ಕುಂ ಪ್ರಥಮಾರ್ತಧ್ಯಾನಮಿಾ ಪೇೞ್ದ ಮನೋಜ್ಞಂ ತಾನೇನಾದೊಡಿವಾಗದಿರ್ಕೆವರ್ಕೆಂಬ ಸಂಕಲ್ಪಾಧ್ಯವಸಾನಮುತ್ಪನ್ನ ವಿನಾಶ ಸಂಕಲ್ಪಾಧ್ಯವಸಾನಮೆಂಬುದಕ್ಕುಂ ದ್ವಿತೀಯಾರ್ತಧ್ಯಾನಂ ಮನೋಜ್ಞಮೆಂಬುದು ಧನಧಾನ್ಯವಸ್ತುವಾಹನವಸ್ತ್ರಮಾತ್ಯ ಚಂದನನಂದನವಧೂಜನಾದಿ ಸುಖಸಾಧನ ಮವು ಬೇಱಾಗಿರ್ಪುದಾದೆನಗಾಗದಿರ್ಕೆಂಬ ಸಂಕಲ್ಪಾಧ್ಯವಸಾನಂ ಮನೋಜ್ಞ ವಿಪ್ರಯೋಗಾನುತ್ಪತ್ತಿ ಸಂಕಲ್ಪಾಧ್ಯವಸಾನಮೆಂಬುದಕ್ಕುಂ ತೃತೀಯಾರ್ತಧ್ಯಾನಂ ಈ ಸುಖಸಾಧನಂಗಳ್ ತನಗಾದೊಡಿವು ಕಿಡದಿರ್ಕೆಂಬ ಸಂಕಲ್ಪಾಧ್ಯವಸಾನಂ ಉತ್ಪನ್ನಾವಿನಾಶ ಸಂಕಲ್ಪಾಧ್ಯವಸಾನಮೆಂಬುದಕ್ಕುಂ ಚತುರ್ಥಾರ್ತಧ್ಯಾನಮಿಂತೀ ಚತುರ್ವಿಧಾರ್ತಧ್ಯಾನಂ ಕೃಷ್ಣನೀಲಕಪೋತಲೇಶ್ಯಾ ಬಲಾಧಾನಮುಂ ಪ್ರಮಾದಾ ಧಿಷ್ಠಾನಮುಂ ಅಪ್ರಮತ್ತನಿಂದಿತ ಷಡ್ಗುಣಸ್ಥಾನಭೂಮಿಕಮುಂ ಪರೋಕ್ಷಜ್ಞಾನ ಮುಮಪ್ಪುದಱಿಂ ಕ್ಷಾಯೋಪಶಮಿಕ ಭಾವಮುಮಂತರ್ಮುಹೂರ್ತಕಾಲಮು ಪರಿತಿರ್ಯಗ್ಗತಿಫಲಸಂವರ್ತನೀಯಮುಮಪ್ಪುದು ರೌದ್ರಧ್ಯಾನಮುಂ ಬಾಹ್ಯಾಧ್ಯಾ ತ್ಮಿಕಮೆಂದಿತ್ತೆ[5]ಱ[5]ನಕ್ಕುಂ ಅಲ್ಲಿ ಪರಾನುಮೇಯಮಪ್ಪ ಬಾಹ್ಯಂ ನಿಷ್ಠುರಾಕ್ರೋಶನ ನಿಶಾತನ ವದನತಾಡನಪೀಡನ ಪರದಾರಾತಿಕ್ರಮಣಾದಿ ಲಕ್ಷಣಮಕ್ಕುಂ ಸ್ವಸಂವೇದ್ಯ ಮಪ್ಪಾಧ್ಯಾತ್ಮಿಕಮುಂ ಹಿಂಸಾನಂದ ಮೃಷಾನಂದ ಸ್ತೇಯಾನಂದ ಸಂರಕ್ಷಣಾನಂದ ಮೆಂದುಂ ಚತುರ್ವಿಧಮಕ್ಕುಂ ಅವಱೊಳ್ [6]ಸ[6]ರಂಭಸಮಾರಂಭಾರಂಭಲಕ್ಷಣಮುಂ ಪರಪೀಡಾಸ್ವರೂಪಮಪ್ಪ ಹಿಂಸೆ ತಥ್ಯಾರ್ತಸಂಕಲ್ಪಾಧ್ಯವಸಾನಂ ಹಿಂಸಾನಂದಮೆಂಬು ದಕ್ಕುಂ ಪ್ರಥಮರೌದ್ರಧ್ಯಾನಂ ಸ್ವಮತಿವಿಕಲ್ಪಿತ ಮತಂಗಳಿಂ ಪೆಱರ್ ನಂಬುವರೆಂದ

1 ಕಕಾರಣ (ಟ) 2 ದು (ಗ) 3 ದ್ವಿವಿಧ (ಚಜ) 4 ದ (ಕಗಚಜ) 5 ಮ (ಗಚಜತ) 6 ಸಾ (ಗಜ) ಸಂ (ಚ)

ವರಂ ಬಂಚಿಸವೆಂದು ನುಡಿವ ಮೃಷಾವಚನದೊಳಪ್ಪ ಸಂಕಲ್ಪಾಧ್ಯವಸಾನಂ ಮೃಷಾ
ನಂದವೆಂಬುದಕ್ಕುಂ ದ್ವಿತೀಯ ರೌದ್ರಧ್ಯಾನಂ ಬಲ್ಲಾಳ್ತನದೊಳಕ್ಕೆ ಮೇಣ್ ತೆಱಪಿಂ
[1]ಪಾರ್ದಕ್ಕ[1]ಪಹರಣದೊಳಪ್ಪ ಸಂಕಲ್ಪಾಧ್ಯವಸಾನಂ ಸ್ತೇಯಾನಂದವೆಂಬುದಕ್ಕುಂ
ತೃತೀಯ ರೌದ್ರಧ್ಯಾನಂ ಚೇತನಾಚೇತನ ಲಕ್ಷಣಮಪ್ಪ ನಿಜಪರಿಗ್ರಹದೊಳಿದೆನ್ನೊ
ಡವೆಯಾನಿದರ್ಕೊಡೆಯನೆನೆಂಬಾಗ್ರಹದಿಂ ಕಾಯಲೆಂದದಂ ಕೊಳ್ವವರ್ಗೆ ಪೀಡೆಯಂ
ಮಾಡಲು ಕಾಪಿನೊಳಪ್ಪ ಸಂಕಲ್ಪಾಧ್ಯವಸಾನಂ ಸಂರಕ್ಷಣಾನಂದವೆಂಬುದಕ್ಕುಂ
ಚತುರ್ಥರೌದ್ರಧ್ಯಾನಂ ಕೃಷ್ಣನೀಲಕಪೋತಲೇಶ್ಯಾಬಳಾದಾನಮುಂ ಪ್ರಮಾದಾಧಿಷ್ಠಾ
ನಮುಂ ಪ್ರಮತ್ತನಿಂದೆತ್ತ ಪಂಚಗುಣಸ್ಥಾನಭೂಮಿಕಮುಂ ಪರೋಕ್ಷಜ್ಞಾನಮುಮ
ಪ್ಪುದಱಿಂ ಕ್ಷಾಯೋಪಶಮಿಕ ಭಾವಮುಂ ಕಷಾಯಪ್ರಧಾನಮಪ್ಪುದಱಿಂ ಔದಾಯಿಕ
ಭಾವಮುಮಂತರ್ಮುಹೂರ್ತಕಾಲ ಪರಿವರ್ತನಮುಂ ನರಕಗತಿಸಂವರ್ತನೀಯಮು
ಮಪ್ಪುದು ಈ ಪೇೞ್ದೆರಡುಮಪಧ್ಯಾನಮಂ ಪತ್ತುವಿಟ್ಟು ಮೋಕ್ಷಕಾಂಕ್ಷಿಗಳಪ್ಪ ಭಿಕ್ಷು
ಗಳ್ ಪರೀಷಹಬಾಧಾಸಹಿಷ್ಣು ಶಕ್ತಿ[2]ಮುಂತರಾಗಿ[2] ಉತ್ತಮಸಂಹನನಾ[3]ನ್ವಿತ[3] ಪ್ರಶಸ್ತ
ಧ್ಯಾನಮಂ ಧ್ಯಾನಿಸುವಾಗಳ್ ಗಿರಿಗುಹೋದರಕಂದರ ವಿಟಪಿಕೋಟರ ನದನದೀವಿಪುಳ
ಪುಳಿನತಲ ಪಿತೃವನ ಜೀರ್ಣದ್ವಾರ ಶೂನ್ಯಗೃಹಾದಿಗಳೊಳಾವುದಾನುಮೊಂದೆಡೆಯೊಳ್
ವ್ಯಾಳಮೃಗ ಪಶು[4]ಪಂಡಕ ಪಕ್ಷಿ[4]ಮನುಷ್ಯಾದಿಗಳ್ಗಗೋಚರಮುಂ ತದ್ಭವಾಗಂತುಕ
ಸೂಕ್ಷ್ಮಜಂತುಪರಿವರ್ಜಿತಮುಂ ನಿರ್ಜಂತುಕಮುಮತ್ಯುಷ್ಣ ಶೀತವಾತಾವ[5]ಘಾತ[5] ಪರ
ಹಿತಮುಮಿಂದ್ರಿಯಮನೋವಿಕ್ಷೇಪಚಾರಾ[6]ಸಿರಾ[6]ಕರಣಭೂತಮುಂ ಸಮನುಕೂಲ
ಸ್ಪರ್ಶಮುಮಪ್ಪ ಭೂತ[7]ದೊಳ್[7] ಯಥಾಸುಖಮುಮಧಿಷ್ಠಾನಾನುಬದ್ಧಪರ್ಯಂಕಾ
ಸನನುಮಾಗಿ [8]ನಿಜಾಂಕ[8]ತಳದೊಳ್ ವಾಮಪಾಣಿತಳದ ಮೇಗುತ್ತ್ರಳಮಾಗೆ ದಕ್ಷಿಣ
ಕರತಲಮನಿಟ್ಟು ಶರೀರಯಷ್ಟಿಯನಚಲಿತಂ ಕಟ್ಟಿ ಹೃದಯಕಂದರಕಂಠತ್ರಯಮುಮ
ನಸ್ತಬ್ಧಮುಂ ಸಮಮುಮಾಗೆ ಸಮಂಮಾಡಿ ನಿಱಿಸಿ ವಿಲೋಚನಂಗಳನತ್ಯುನ್ಮೀಲಿ
ತಂಗಳುಮತಿ ನಿಮೀಲಿತಂಗಳುಮಾಗಲೀಯದೆ ದಂತಾಗ್ರಮೊಂದೊಂದಂ ಮುಟ್ಟಿ
ನಿಲ್ವಿನಂ ಪ್ರಾಣಾಪಾನಪ್ರಚುರಾತ್ಯಂತನಿಗ್ರಹದಿಂ ತೀವ್ರದುಃಖಾಕುಳ ಚಿತ್ತಗೇ[9]ಕಾ
ಕಾರಪರಿಣಾಮಂ ಪುಟ್ಟುವುದಱಿಂ ಮಂದಮಂದಪ್ರಾಣಾಪಾನಪ್ರವೇಶದಿಂ ದ್ರವ್ಯಕ್ಷೇತ್ರ
ಕಾಲಭಾವ ಶುದ್ಧಿಯೊಳ್ ಕೂಡಿ ಕೃತಸಂಸ್ಕಾರನಾಗಿ ನಾಭಿಯಿಂ ಮೇಗೆ ಹೃದಯ
ಲಲಾಟ ಮಸ್ತಕಂಗಳೊಳಕ್ಕೆ ಪೆಱಿತೊಂದೆಡೆಯೊಳಕ್ಕೆ ಮೇಣಾವೃತ್ತಿಯಂ ಕೃತಾಭ್ಯಾಸ
ಮಪ್ಪಲ್ಲಿ ನಿಱಿಸಿ ಪರಮಯೋಗಿ ಜಿನಂ ಧ್ಯಾನಿಸುವ ಸಂಸ್ಕೃತಿಲ[1]ತಾ[1]ಮೂಲಚ್ಛೇದ

1 ಪಾದರ್ಕ (ಚ) 2 ಮುಂತಾಗಿ (ಗಜ) 3 ಸ್ವಿತಂ (ಕ) ಗಿ (ಚ) 4 ಪಂಡನಕ (ಚ) ಪುಂಡರೀಕ (ಟ) 5 ದೂತ (ಟ) 6 ಕರಣನಿರಾ (ಗ) ಕರನಿರಾ (ಚಜ) 7 ಳದೊಳ್ (ಚಜ) 8 ನಿಜಾಂತ (ಕ) ನಿತಾಂತ (ಚ) ನಿತಾಂಕ (ಜ) 9 ಕ್ಷಾ (ಚ)

ಮೂಲಹೇತುಭೂತಪ್ರಶಸ್ತಧ್ಯಾನಂ ಧರ್ಮಶುಕ್ಲಭೇದದಿಂದಿತ್ತೆರನಕ್ಕುಂ ಅಲ್ಲಿ ಧರ್ಮ ಧ್ಯಾನಂ ಬಾಹ್ಯಾಧ್ಯಾತ್ಮಿಕಭೇದದಿಂ ದ್ವಿವಿಧಮಕ್ಕುಂ ಅಲ್ಲಿ ಪರಾನುಮೇಯಮಪ್ಪ ಬಾಹ್ಯಸೂತ್ರಾರ್ಥಗವೇಷಣಮುಂ ದೃಢವ್ರತಶೀಲಗುಣಾನುರಾಗಮುಂ ಹಸ್ತಪಾದ ವದನ ದೇಹ ಪರಿಸ್ಪಂದರಹಿತಮುಂ ವಾಯುವ್ಯಾಪಾರ ಜಂಭಜೃಂಭೋದ್ಗಾರಕ್ಷವಥು ಪ್ರಾ[1]ಣಾ[1]ಪಾನೋದ್ರೇಕಾದಿ ವಿರಮಣಲಕ್ಷಣಮಪ್ಪುದು ಸ್ವಸಂವೇದ್ಯಮತ್ತಾಧ್ಯಂ ಅಪಾಯವಿಚಯಮುಪಾಯವಿಚಯಂ ಜೀವವಿಚಯಮಜೀವವಿಚಯಂ ವಿಪಾಕವಿಚ ಯಂ ವಿರಾಗವಿಚಯಂ ಭವವಿಚಯಂ ಸಂಸ್ಥಾನವಿಚಯಮಾಜ್ಞಾವಿಚಯಂ ಹೇತು ವಿಚಯಮೆಂದು ದಶವಿಧಮಕ್ಕುಮವಱೊಳಪಾಯ[2]ದಿಂದ[2]ಪ್ಪ ಮೀಮಾಂಸೆ ಯಾವು ದೆಂದು ಶುಭಧ್ಯಾನದೊಳಃದಪಾಯವಿಚಯಮೆಂಬುದುಱಿದವರ್ಕೆಲ್ಲಮಿಂತಿನಿತು ಗೆಯ್ವುದೀ ದಶವಿಧಮುಂ ದೃಷ್ಟಶ್ರುತಾನುಭೂತದೋಷವರ್ಜಿತನುಂ ಮಂದ[3]ತ್ವ[3] ಕಷಾಯನುಮಪ್ಪ ಭವ್ಯವರ ಪುಂಡರೀಕಂಗಕ್ಕುಮುಪಾಯವಿಚಯಮೆಂಬುದನಾದಿ ಸಂಸಾರದೊಳ್ ಯಥೇಷ್ಟಾಚಾರಿಯಾಗಿ ಮನೋವಾಕ್ಕಾಯಪ್ರವೃತ್ತಿಯಿಂ ನೆರಪಿದ ಕರ್ಮಮಂ ಬೇರ್ಕೆಯ್ಯಲೆನಗೆಂತಕ್ಕುಮೆಂಬ ಸಂಕಲ್ಪಂ ಪ್ರಥಮಧರ್ಮಂ ಉಪಾಯವಿಚ ಯಮೆಂಬುದತಿಪ್ರಶಸ್ತ ಮನೋವಾಕ್ಕಾಯ ಪ್ರವೃತ್ತಿ ವಿಶೇಷಮನಾನೆಂತುಮವಶ್ಯಂ ಮಾಳ್ಪೆನೆಂಬ ಸಂಕಲ್ಪದಿಂ ದ್ವಿತೀಯಧರ್ಮಂ ಜೀವವಿಚಯಮೆಂಬುದು ಜೀವನುಪ ಯೋಗ ಲಕ್ಷಣಮು[4]ಮಾದ್ಯಂತಮುಮ[4]ಸಂಖ್ಯೇಯ ಪ್ರವೇಶಮುಂ ಸುಕೃತ ದುಷ್ಕೃತ ಫಲೋಪಭೋಗಿಯುಂ ಶರೀರಾದ್ಯಚೇತನೋಪಕರಣಮುಂ [5]ಗತ್ಯಾದಿ[5] ನಾಮಾದಿ ನಿರ್ದೇಶಾದಿ ಸದಾದಿಪ್ರಮಾಣ ನಯ ನಿಕ್ಷೇಪಗೋಚರಮುಮಪ್ಪ ವಿನಶ್ವರಭಾವಾನು ಚಿಂತನಂ ತೃತೀಯಧರ್ಮಂ ಅಜೀವ ವಿಚಯಮೆಂಬುದು *ಜೀವವಿಲಕ್ಷಣಮುಮ ಚೇತನನುಮಪ್ಪ ಪುದ್ಗಲ ಧರ್ಮಾಧರ್ಮಕಾಳಾಕಾಶಮನಂತವಿಕಲ್ಪ ಪರ್ಯಾಯ ಮೆಂಬ ತದೀಯ ಸ್ವಭಾವಾನುಚಿಂತನಂ ಚತುರ್ಥಧರ್ಮಂ ವಿಪಾಕವಿಚಯ ಮೆಂಬುದು* [6]ಗುಡ[6]ಖಂಡಶರ್ಕರಾಮೃತ ಮಧುರವಿಪಾಕಮುಂ ನಿಂಬಕಾಂಜೀರವಿಷ ಹಾಳಾಹಳಕಟುಕವಿಪಾಕಮುಂ ದ್ರವ್ಯ ಭಾವಲಕ್ಷಣಮುಂ ಚತುರ್ವಿಧ ಬಂಧ[7]ನಮುಂ[7] ಲತಾದಾರ್ವಸ್ಥಿಶೈಲಭಾವಮುಂ ಮೂಲೋತ್ತರೋತ್ತರ ಪ್ರಕೃತಿ ವಿಕಲ್ಪವಿಸ್ತೃತಮು ಮಪ್ಪ ವಿವಿಧ ಕರ್ಮಂಗಳೊಳಾವ ಯೋನಿಯೊಳಾವವಸ್ಥೆಯೊಳ್ ಜೀವಂಗಳ್ಗೆ ವಿಷಯಮಕ್ಕುಮೆಂಬ ವಿಪಾಕಾನುಚಿಂತನಂ ಪಂಚಮಧರ್ಮಂ ವಿರಾಗವಿಚಯ ಮೆಂಬುದು ಶರೀರಂ ವಿನಶ್ವರ ಸ್ವಭಾವಮುಂ ಅನಿತ್ಯಮುಮಪವಿತ್ರಮುಮಶು

---

1 ಣೋ (ಗಚ) 2 ದೊಳ (ಕಚಜ) 3 ತರ (ಗಚಜಟ) 4 ಮಂ (ಚ) ಮ (ಜ)
5 ಗತ್ಯಾದಿ (ಟ) 6 ಗುಳ (ಕಟತ) 7 ಮುಂ (ಕಗಚಜ)
*—* ಇಲ್ಲ (ಛ)

ಚಿಯುಂ ತ್ರಿದೋಷಾಧಿಷ್ಠಿತಮುಂ ಸಪ್ತಧಾತುಮಯಮುಂ ಬಹುಮಲ ಪರಿಪೂರ್ಣ
ಮುಮನವರತನಿಷ್ಯಂದ ಶ್ರೋತಾಖಿಲಗಂಧಿಯುಂ ಅತಿ[1]ಭೀಭತ್ಸವುಂ[1] ಅನಾದೇಯ
ಶೋಚ್ಯಮುಂ ಸಮ್ಯಗ್ಜ್ಞಾನ ವೈರಾಗ್ಯ ಹೇತುಭೂತಮುಮಪ್ಪುದಿದಱಿಳೊಳ್
ಕರ್ಮನಿಯಮಮೆಂದದಿಲ್ಲಂ ಇಂದ್ರಿಯಸುಖಂಗಳುಂ ಪ್ರಮುಖಸುಖರಸಿಕಂಗಳುಂ
ಕ್ರಿಯಾವಸಾನ ವಿರಸಂಗಳುಂ ಕಿಂಪಾಕ ವಿಪಾಕಂಗಳುಂ ಪರಾಧೀನಂಗಳುಮಾಸ್ಥಾನ
ಭಂಗುರಂಗಳುಮಪ್ಪುವೆನಿತೆನಿತನನುಭವಿಸುವಂತನಿತನಿತೆ ತೃಷ್ಣಾಪ್ರಸಂಗಮನವಸ್ಥೆ
ಮಕ್ಕುಂ ಅಗ್ನಿಗಿಂಧನಂಗಳಿಂದಂ ಸಮುದ್ರಕ್ಕೆ ಸರಿತ್ಸಹಸ್ರಂಗಳಿಂದಂ ತೃಪ್ತಿಯಿಲ್ಲ
ದಿಂತಿದಱಿಂದಾರ್ಗಮುಪಶಾಂತಿಯುಮಿಲ್ಲ ಐಹಿಕಾಮುಷ್ಮಿಕ ವಿನಿಪಾತಹೇತುಗಳಂ
ದೇಹಿಗಳ್ ಸುಖಮೆಂದೇ ಬಗೆವರ್ ಅವು ಮಹಾದುಃಖಕಾರಣಂಗಳ್ ಆತ್ಮಜಂ ಸುಖ
ಮಪ್ಪುದಱಿನಿಷ್ಟಮಾಗಿಯುಂ ನೆಗಟಿತ್ತವೆಂಬ ವೈರಾಗ್ಯಕಾರಣ ವಿಶೇಷಾನುಚಿಂತನಂ
ಷಷ್ಠಮ ಧರ್ಮ್ಮಂ ಭವವಿಚಯಮೆಂಬುದು ಜೀವಂಗೆ ಚೇತನಾಚೇತನಂಗಳೊಳ್ ಅವಿ
ನಾಭಾವಿ ಸಹಾಯಮೊಂದುಮಿಲ್ಲಂ ಜೀವನ್ನೋರ್ವನೆ ತನ್ನ ನೆರಪಿದ ಕರ್ಮಫಲಮಂ
ಪ್ರತಿಕೂಲಮನಕ್ಕೆ ತಾನೆಯನುಭವಿಸುಗುಂ ಅನಾದಿಸಂಸಾರದೊಳು ದ್ರವ್ಯಕ್ಷೇತ್ರಕಾಲ
ಭಾವಭವಭೇದಂಗಳೊಳ್ ಜೀವಕ್ಕೆ ಗುಣವಿಶೇಷಮಂ ಕಾಣಲುಬಾರದದಱಿಂ ಭವ
ಸಂಕ್ರಮಣಂ ನಿರರ್ಥಕಮೆಂದಿವು ಮೊದಲಾಗೆ ಭವಸಂಕ್ರಾಂತಿದೋಷಾನುಚಿಂತನಂ
ಸಪ್ತಮಧರ್ಮಂ ಸಂಸ್ಥಾನವಿಚಯಮೆಂಬು[2]ದಧಸ್ತಿ[2]ರ್ಯಗೂರ್ಧ್ವಭೇದಭಿನ್ನಲೋಕ
ಸ್ವಭಾವಪರಿಣಾಹಪರಿಣಾಮ ಸಂಸ್ಥಾನ ಚಿಂತನಮಷ್ಟಮಧರ್ಮಂ ಆಜ್ಞಾವಿಚಯಮೆಂ
ಬುದತೀಂದ್ರಿಯವಿಷಯಜ್ಞಾನಂ ವಿಷಯಮನಱಿಯಲುಂ ಬಾರದದಱಿಳೊಳುಂ ಬುದ್ಧಿ
ಶಕ್ತಿಯಿಲ್ಲದುದಱಿಂ ಪರಲೋಕಬಂಧಮೋಕ್ಷ ಲೋಕಾಲೋಕಸದಸದ್ವಿದ್ಯಾಕ ಸಪ್ತರ್ಧಿ
ಪ್ರಭಾವಧರ್ಮಕಾಲದ್ರವ್ಯಾದಿಗಳೊಳ್ ಸರ್ವಜ್ಞ ಪ್ರಮಾಣತೆಯಿಂ ತತ್ಪ್ರಮಾಣ
ತಾಗಮದೊಳ್ ಪೇಟ್ದುವೆಲ್ಲಂ ಅವಶ್ಯಂ ತಪ್ಪುವುವಲ್ಲೆಂದು ಸಮ್ಯಗ್ದರ್ಶನಸ್ವಭಾವ
ದಿನಪ್ಪ ನಿಶ್ಚಯಚಿಂತನಂ ನವಮಧರ್ಮಂ ಹೇತುವಿಚಯಮೆಂಬುದಾಗಮದಿಂ ಪ್ರತೀ
ತಿಯೊಳ್ ನಯ ವಿಶೇಷಗುಣ ಪ್ರಧಾನ ಭಾವೋಪನಯದರ್ಥಮಂ ಸ್ಯಾದ್ವಾದಪ್ರಕೃತಿ
ಯನವಲಂಬಿಸಿರ್ದ ತರ್ಕಾನುಸಾರಿರುಚಿಯಪ್ಪ ಪುರುಷನಾತ್ಮ ಸಮಯಗುಣಪರಸಮ
ಯದೋಷವಿಶೇಷ ಪರಿಚ್ಛೇದದಿನಾವುದೊಂದು ಗುಣ ಬಹಳಮವಱಿಳೊಳಭಿನಿವೇಶಂ
ಶ್ರೇಯಮೆಂದೀಯಂದದಿಂ ಸ್ಯಾದ್ವಾದತೀರ್ಥಕರಪ್ರವಚನಪೂರ್ವಾಪರ ವಿರೋಧ
ಹೇತು ವಿಗ್ರಹಣ ಸಾಮರ್ಥ್ಯದಿಂ ಸಮವಸ್ಥಾನಗುಣಾನುಚಿಂತನಂ [3]ದಶಮ[3]ಧರ್ಮಂ

1 ವಿಭವಸ್ಫುಟಂ (ಗಚಜ) 2 ದುಷ್ಠ್ಯ (ಗಚ) ದಡಷ್ಠ್ಯ (ಜ) ದು ತಿ (ಟ) 3 ದಶ
(ಚಜ)

ಇಂತೀ ಪೇೞ್ದ ಧರ್ಮ್ಯಧ್ಯಾನಂ ಪೀತಪದ್ಮಶುಕ್ಲಲೇಶ್ಯಾ ಬಳಾದಾನಮುಂ ಅಪ್ರಮತ್ತಂ ಪರದ್ರವ್ಯಭಾವಲಕ್ಷಣ ಪ್ರಕೃತಿಕರಣಮುಮಂತರ್ಮುಹೂರ್ತಕಾಲಮುಂ ಪರಿವರ್ತನಮುಂ ಪರೋಕ್ಷಜ್ಞಾನತ್ವದಿಂ ಕ್ಷಾಯೋಪಶಮಿಕಭಾವಮುಂ ಸ್ವಭಾವವೊಲಂ ಗತಿಫಲವರ್ತನೀಯಮುಂ ದ್ರವ್ಯಭಾವಾತ್ಮಕಶೇಷೈಕವಿಂಶತಿ ಮೋಹನೀಯೋಪಶಮಕ್ಷಯ ಹೇತುಭೂತಮುಮಕ್ಕುಂ ಶುಕ್ಲಧ್ಯಾನಮುಂ ಶುಕ್ಲಪರಮಶುಕ್ಲಮೆಂದಿತ್ತೆಱನಕ್ಕುಂ [1]ಅವಱೊಳ್[1] ಶುಕ್ಲಮೆಂಬುದು ಪೃಥಕ್ತ್ವ ವಿತರ್ಕ ವಿಚಾರ[2]ಮುಂ ಏಕತ್ವ ವಿತರ್ಕ ವಿಚಾರಮುಂ[2] ಎಂದೆರಡು ತೆಱನಕ್ಕುಂ ಪೃಥಕ್ತ್ವಮೆಂಬುದು ಸೂಕ್ಷ್ಮಕ್ರಿಯಾಪ್ರತಿಪಾತಿಯುಂ ಸಮುಚ್ಛಿನ್ನ ಕ್ರಿಯಾನಿವೃತ್ತಿಯುಮೆಂದೆರಡು ತೆಱನಕ್ಕುಂ ಅವಱೊಳ್ ಮತ್ತಂ ಶುಕ್ಲಂ ಬಾಹ್ಯಾಧ್ಯಾತ್ಮಿಕಭೇದದಿನಿತ್ತೆಱನಕ್ಕುಂ ಅಲ್ಲಿ ಬಾಹ್ಯಮೆಂಬುದು ಗಾತ್ರನೇತ್ರ ಪರಿಸ್ಪಂದವಿರಹಿತಮುಂ ಜಂಭಜೃಂಭೋದ್ಗಾರಾದಿ ವರ್ಜಿತಮುಂ ಅನಭಿವ್ಯಕ್ತ ಪ್ರಾಣಾಪಾನ ಪ್ರಚಾರಮುಂ ಸಮುಚ್ಛಿನ್ನಪ್ರಾಣಾಪಾನ ಪ್ರಚಾರಮುಂ ಅಪರಾಧಿತತ್ವಮುಮಾಗಿ ಪರಾನುಮೇಯಮಪ್ಪುದಱಿಂ ಬಾಹ್ಯಂ ಸ್ವಸಂವೇದ್ಯಮಪ್ಪಾಧ್ಯಾತ್ಮಿಕಂ ಪೃಥಕ್ತ್ವ ವಿತರ್ಕವಿಚಾರಧ್ಯಾನದೊಳ್ ಪೃಥಕ್ತ್ವಮೆಂಬುದು ನಾನಾತತ್ವಂ ವಿತರ್ಕಮೆಂಬುದು ದ್ವಾದಶಾಂಗಶ್ರುತಂ ವಿಚಾರಮರ್ಥವ್ಯಂಜನ ಯೋಗ ಸಂಕ್ರಮಣಂ ವ್ಯಂಜನಮೆಂಬುದು ಶಬ್ದಂ ತದ್ವಿಷಯಮರ್ಥಮೆಂಬುದು ಮನೋವಾಕ್ಕಾಯ ಪರಿಸ್ಪಂದಲಕ್ಷಣಂ ಸಂಕ್ರಾಂತಿಯೆಂಬುದುಮದನ್ಯೋನ್ಯಪರಿವರ್ತನಮಕ್ಕುಂ ಅನಾದಿಸಂಭೂತದಿಂ ದೀರ್ಘ ಸಂಸಾರಸ್ಥಿತಿಸಾಗರಪಾರಮನೆಯ್ದುವ ಮುಮುಕ್ಷುಗಳ್ ಸ್ವಭಾವಜೃಂಭಿತ ಪುರುಷಾಕಾರ ಸಾಮರ್ಥ್ಯದಿಂ ದ್ರವ್ಯಭಾವ ಪರಮಾಣುಗಳೊಂದೊಂದನವಲಂಬಿಸಿ ಸಂವೃತಾವಿಕ್ಷೇಪನುಂ ಮಹಾಸಂವರ ಸಂವೃತನುಮಾಗಿ ಕರ್ಮಸ್ಥಿತ್ಯನುಭಾವಂಗಳನುಪಶಮಿಸುತ್ತುಂ ಬರಲ್ ಬಹುಕರ್ಮನಿರ್ಜರನಾಗಿ ಯೊರ್ಮೊರ್ಮೆ ಪರಿವಿಡಿಯಿಂ ದ್ರವ್ಯಪರ್ಯಾಯಮನುವರ್ತದೊಳವಱೊಳ್ ವ್ಯಂಜನಮುಂ ವ್ಯಂಜನದೊಳರ್ಥಮುಂ ಯೋಗದಿಂ ಯೋಗಾಂತರಮುಂ ವ್ಯಂಜನದಿಂ ವ್ಯಂಜನಾಂತರಮುಂ ಪರ್ಯಾಯದಿಂ ಪರ್ಯಾಯಾಂತರಮುಂ ಸಂಕ್ರಮಿಸುವುದು ಮತ್ತಂ ಜೀವಾದಿ ಪದಾರ್ಥಂಗಳ್ಗೆ ವಿಜ್ಞಾನ ವರ್ಣಗತಿಸ್ಥಿತಿವರ್ತನಾವಗಾಹನಾದಿಗಳವಱ ವಿಕಲ್ಪಂಗಳ್ ಪರ್ಯಾಯಂಗಳರ್ಥದೊಳುೞಿದುದಂ ಬಿಸುಟ್ಟೊಂದನೆ ನೆನೆವುದು ಅರ್ಥಾಂತರಗುಣಪರ್ಯಾಯಂಗಳ್ಗವಿಂತೆಯಕ್ಕುಂ ಅಂತರ್ಥಮರ್ಥಾಂತರಂ ಗುಣಂ ಗುಣಾಂತರಂ ಪರ್ಯಾಯಂ ಪರ್ಯಾಯಾಂತರಂ ಎಂಬೀಯಾಱಱೊಳ್ ಮೂಱು ಯೋಗದಿನಿರ್ದಾತ್ಮಂ ಸಂಕ್ರಮಿಸೆ ಪದಿನೆಂಟು ಭಂಗಮಕ್ಕುಂ ಅರ್ಥದೊಳಿರ್ದ ಗುಣಾಗುಣಾಂತರದೊಳ್

---

1 ಪರೋಕ್ಷಜ್ಞಾನವುಂ (ಚ) 2 ಮುಂ (ಕಟ)

ಪರ್ಯಾಯ ಪರ್ಯಾಯಾಂತರದೊಳ್ ಸಂಕ್ರಮಿಸೆ ಪನ್ನೆರಡುಮರ್ಥಾಂತರಕ್ಕಮಾಯಿಂದ ದೊಳೆ ಪನ್ನೆರಡಕ್ಕುಂ ಇಂತು ನಾಲ್ವತ್ತೆರಡುಂ ಭೇದಂ ಪ್ರಥಮಶುಕ್ಲಧ್ಯಾನಂ ಅದುಪಶಾಂತಕ್ಷೀಣಕಷಾಯನಪ್ರಮತ್ತ್ರಕಾಳಂಬರಮಕ್ಕುಂ ಅದು ಶುಕ್ಲೇತರಲೇಶ್ಯಾ ಬಳಾದಾನ[1]ಮುಮಂ[1]ತರ್ಮುಹೂರ್ತಕಾಲಪರಿವರ್ತನಮುಂ ಕ್ಷಾಯೋಪಶಮಿಕಭಾ್ರ ವಮುಂ ಉಪಾತ್ತಾರ್ಥವ್ಯಂಜನಯೋಗ ಸಂಕ್ರಮಣತ್ವದಿಂದಮವಿಚಾರಮುದಱಿ ನೇಕತ್ವವಿತರ್ಕಮುಂ ನವದಶಚತುರ್ದಶ ಪೂರ್ವರಪ್ಪ ಯತಿವೃಷಭ ನಿಷೇವ್ಯಮುಂ ಸ್ವರ್ಗಾಪರ್ವಗಗತಿಫಲಪರ್ಯಾಯಮುಮಪ್ಪುದದು ಶುಕ್ಲದೆರಡನೆಯೇಕತ್ವವಿತರ್ಕ ವಿಚಾರದೊಳೇಕತ್ವದಿಂದಂ ವಿತರ್ಕಮಾದುದೊಂದನೇಕತ್ವವಿತರ್ಕಮುಪಗತಾರ್ಥ ವ್ಯಂಜನಯೋಗ ಸಂಕ್ರಮತ್ವದಿಂದವಿಚಾರಮುದಱಿನೇಕತ್ವವಿತರ್ಕಾವಿಚಾರಮಕ್ಕುಂ ಮುಂ ಪೇೞ್ದವಱೊಳ್ ಭವಪರಿಮಾಣುವನೊಂದನೆ ಕೊಂಡು ವ್ಯಂಜನೀಯು ಯತ್ರೈಕಯೋಗಬಲಾದಾನಮುಮಂತೆ ಪೂರ್ವಧರಯತಿವೃಷಭ ನಿಷೇವ್ಯಮುಮ [2]ಪಾ[2]ರ್ಥವ್ಯಂಜನಯೋಗಮುಂ ಸಂಕ್ರಮಣವಿಷಯ ಚಿತ್ತನಿಕ್ಷೇಪ ವಿರಹಿತತ್ವದಿಂ ಬಹುತರಾಸ್ರವಸಂವರಕರ್ಮ ನಿರ್ಜರಮಶೇಷ ಘಾತಿಕರ್ಮರಜಃಪರಿಪಾತನ ಸಮರ್ಥ ಮುಮುತ್ತಪ್ತ ತಪೋತಿಶಯರೂಪಮುಂ ಕ್ಷೀಣಕಷಾಯಾವಶಿಷ್ಟಕಾಳಭೂಮಿಕ ಮುಮಂತರೀಯಶುಕ್ಲಧ್ಯಾನದೊಳ್ ದ್ರವ್ಯಭಾವ ಸ್ವರೂಪಘಾತಿಗಳಂ ಕತಿಪಯ ಘಾತಿ ಭಾವಂಗಳ್ಗ ಮವಸಾನಮಾಗಲೊಡಂ ಕ್ಷಾಯಿಕಂ ಧ್ಯಾನ ದರ್ಶನ ಸಮ್ಯಕ್ ಚಾರಿತ್ರ [3]ವೀರ್ಯಾ[3]ತಿಶಯಶಕ್ತಿ ಗಭಸ್ತಿಪ್ರಜ್ವಲಿತ ಕೇವಲಿಜಿನಭಾಸ್ಕರೋದಯ ವ್ಯತಿಕ್ರಾಂ ತಚ್ಛದ್ಮಸ್ಥ ಜ್ಞಾನದರ್ಶನ ಶರೀರಭಾಷಾಂತಃಕರಮಕ್ಕುಂ ಕೇವಳಿಜಿನಕುಂಜರಂ ತೀರ್ಥಕರನಕ್ಕೆ ಮೇಣಿತರನಕ್ಕೆ ಕೃತಕೃತ್ಯನುಂ ಸಿದ್ಧಸಾಧ್ಯನುಂ ಬುದ್ಧಬೋಧ್ಯನುಮ ತ್ಯಂತನುಮಪುನರ್ಭವ ಲಕ್ಷ್ಮೀಪಟ್ಟ ನಿಷ್ಠಿತಾಂತನುಮಚಿಂತ್ಯ ಜ್ಞಾನವೈರಾಗ್ಯೈಶ್ವರ್ಯ [4]ಮಾಹಾತ್ಮ್ಯನುಂ[4] ಲೋಕೇಶ್ವರರಿಂದಭಿಗಮನೀಯನುಂ ಅರ್ಚನೀಯನುಮಭಿವಂದ ನೀಯನುಮಾಗಿ ಬೞಿಯುಮುತ್ಕೃಷ್ಟದಿಂದೀಶಾನಪೂರ್ವಕೋಟಕಾಲಮನುಭವಿ ಸುತ್ತುಂ [5]ಅಂತರ್ಮು[5]ಹೂರ್ತ ಶೇಷಾಯು[6]ಷ್ಯ[6]ನಾಗೆ ಸಮಸ್ಥಿತಿವೇದ್ಯನಾಮಗೋತ್ರ ನಪ್ಪಾಗಳ್ ಬಾದರ ಮನೋವಚನೋಚ್ಛ್ವಾಸಂಗಳುಂ ಬಾದರಾಯುಯೋಗಮುಮಂ ನಿರೋಧಂಗೆಯ್ದು ಸೂಕ್ಷ್ಮಮನೋವಚನೋಚ್ಛ್ವಾಸನುಂ ಸೂಕ್ಷ್ಮಕಾಯಯೋಗನು ಮಾಗಿ ನಿರೋ[7]ಧಕ್ರಿಯಾ[7]ಹೇತುವಪ್ಪ ಸೂಕ್ಷ್ಮಕ್ರಿಯಾಪ್ರತಿಪಾದನುಮಕ್ಕುಂ ಅದು ಶುಕ್ಲಸಾಮಾನ್ಯದಿಂ ತೃತೀಯಂ ಪರಮಶುಕ್ಲಾಪೇಕ್ಷೆಯಿಂ ಪ್ರಥಮಮಂತರ್ಮು ಹೂರ್ತ ಶೇಷಾಯುಸ್ಥಿತಿಯುಂ ತದಧಿಕಸ್ಥಿತಿ ಶೇಷಕರ್ಮತ್ರಯನುಮಾ[8]ದ[8]ಸಯೋಗಿ

---

1 ನುಂ (ಕಚ) 2 ಶೇಷಾ (ಚಜ) 3 ವಿಪರ್ಯಾ (ಗಜ) 4 ನುಂ (ಜ) 5 ಮು (ಚಜ) 6 ಷ್ಕ (ಕಗಚಜ) 7 ಧ (ಗಚಜ) 8 ಗಿ (ಗಚಜ)

ಭಟ್ಟಾರಕನಾತ್ಮೋಪಯೋಗಾತಿಶಯನುಂ ಕರ್ಮಾರಾತಿ ಸಾಧನಸಮರ್ಥ ಸಾಮಯಿಕ ಸಮುತ್ಪಾತ[1]ಖಲ[1] ಸಹಾಯನುಂ ವಿಶಿಷ್ಟಕರನುಂ ಮಹಾಸಂವರಸಂವೃತಲಘುಕರ್ಮ ಪರಿಪಾ[3]ತಿತನುಂ[2] ಆಗಿ ಶೇಷಕರ್ಮರೇಣು ಪರಿಪಾತನಶಕ್ತಿಸ್ವಭಾವದಿಂ ಸಮಯೇಕಖಂಡ ಕಮಪ್ಪ ನಾಲ್ಕುಂ ಸಮಯದೊಳ್ ದಂಡಕವಾಟಪ್ರಕರಣ ಲೋಕಪೂರಣೆಗಳಿಂ [3]ಸ್ವಾ[3]ತ್ಮಪ್ರದೇಶವಿಸರ್ಪಣಮಾಗೆ ಮತ್ತಮನಿತೆ ಸಮಯದಿಂದುಪಸಂಹೃತಪಾನ ಪ್ರಚಾರ ಸರ್ವಕಾಯ ವಾಗ್ಮನೋಯೋಗಪ್ರದೇಶ[4]ಪರ್ಯಾಯ ಪ್ರ[4]ದೇಶದಿನೆಸಿ ತಾನುಂ ಸಮೀಕೃತಾಘಾತಿಸ್ಥಿತಿಚತುಷ್ಟಯನುಂ ನಿರ್ವರ್ತಿತ ಸಮುದ್ಘಾತತ್ರಿತಯನುಂ ಪೂರ್ವಶರೀರವಿರಮಣನುಮಾಗಿ ಚರಮದೊಳ್ ಪರಮಶುಕ್ಲಧ್ಯಾನಮುಂ ಕಡೆಯೆ ಯ್ದಿಸಿ ತತ್ಸಮಯದೊಳ್ ದ್ವಿತೀಯ ಪರಮಶುಕ್ಲಪರಮ ಪ್ರಾರಂಭನಕ್ಕುಂ ಪ್ರಾಣಾ ಪಾನಪ್ರಚಾರ ಸರ್ವ ಕಾಯವಾಗ್ಮನೋಯೋಗಪ್ರದೇಶ ಪರ್ಯಾಯ ವ್ಯಾಪಾರಂಗಳ್ ಸಮುಚ್ಛಿನ್ನ ಕ್ರಿಯಾನಿವೃತ್ತಿಯೆಂಬುದು ಆ ಧ್ಯಾನದೊಳ್ ಸರ್ವಾಸ್ರವನಿರೋಧ ಮಾಗೆ ಸರ್ವಶೇಷಕರ್ಮಪರಿಪಾಕ ಸಾಮರ್ಥ್ಯೋತ್ಪತ್ತಿಯನ್ನುಳ್ಳ ಯೋಗಿ ಕೇವಳಿ ಸಂಪೂರ್ಣ ಶೀಲಗುಣನುಂ ಸರ್ವಸಂಸಾರದುಃಖಜ್ವಲನಜ್ವಾಲಾಪರಿಷ್ವಂಗನುಮಕ್ಕುಂ ಆ ಕೇವಳಿಯುಮಾಗಳ್ ವಿಶುದ್ಧಧ್ಯಾನಾನಲ ನಿರ್ದಗ್ಧ ಸರ್ವಮಲಕಲಂಕೇಂಧನನುಂ [5]ನಿರಸ್ತಪೃಷ್ಟ[5]ಪಾಷಾಣ ಜಾತ್ಯಕನಕದಂತೆ ಲಬ್ಧಾತ್ಮಸ್ವಭಾವನುಮಾಗಲೊಡಂ ಪೂರ್ವ ಪ್ರಯೋಗದಿಂದಾವಿದ್ಧಕುಲಾಲಚಕ್ರದಂತಸಂಗತತ್ವದಿಂದೇರಂಡಬೀಜದಂತೆ ಬಂಧ ಚ್ಛೇದನದಿಂದಪಗತಲೇಪಾಲಾಂಬುವಿನಂತೆ ಊರ್ಧ್ವಗತಿಸ್ವಭಾವದಿನಗ್ನಿಶಿಖಿಯಂತೂ ರ್ಧ್ವಲೋಕಾಂತಂಬರಂ ಸಲ್ಗುಂಗತ್ಯುಪಗ್ರ[6]ಹಪ[6]ಕಾರಣ ಧರ್ಮಾಸ್ತಿಕಾಯಭಾವದಿಂ ನರಲೋಕಕ್ಕೆ ಸಲ್ವಂ ಧರ್ಮ ಶುಕ್ಲಂಗಳೆಂಬ ಷಡ್ದ್ರವ್ಯಂ*ಧ್ಯೇಯಮಪ್ಪುದಱಿಂ ವಿಷಯಂ ಪ್ರತಿಭೇದಮಿಲ್ಲಪ್ಪುದಱಿಂ ವೀತರಾಗನಪ್ಪಜಿತಸ್ವಾಮಿಗಳಿಂ ಅಜಿತಜಿತಂ ಕಾಲಾವಸ್ಥಾಯಿಗಳಪ್ಪುದಱಿಂ ಭೇದಮಿಲ್ಲೆಂದಿಂತು ಪೇೞ್ದ ಚತುರ್ವಿಧಧ್ಯಾನಂ*ಗ ಳೊಳ್ ಪರಮಶುಕ್ಲಧ್ಯಾನದಿಂ ಶ್ರೀಮದಜಿತಭಟ್ಟಾರಕಂ ಜ್ಞಾನಾವರಣೀಯಂ ದರ್ಶನಾ ವರಣೀಯಂ ಮೋಹನೀಯಮಂತರಾಯಮೆಂಬ ಘಾತಿಚತುಷ್ಕಮುಮನಾಯುಷ್ಯ ನಾಮಗೋತ್ರವೇದನೀಯಮೆಂಬ ಘಾತಿಚತುಷ್ಕಮುಮನುಂ ನಿಶ್ಶೇಷಂ ಕಿಡಿಸಿ ಚೈತ್ರ ಶುದ್ಧ ಪಂಚಮಿಯ ಪೂರ್ವಾಹ್ಣದೊಳ್ ಪ್ರಥಮಯೋಗದೊಳಿರ್ದಂ

---

1 ಖಳ್ಗ (ಕಗಜ) ಖಡ್ಗ (ಟ) 2 ತನುಂ (ಕಗಚಜ) ಕನುಂ (ಟ) 3 ಸಾ (ಗಜ) 4 ಪ್ರ (ಗಚಜ) 5 ನಿರಾಸ್ಪೃಕೃಷ್ಟ (ಕ) ನಿರಸ್ತಕೃಷ್ಟ (ಗಜ) ನಿರಸ್ತಕೃಷ್ಟಿ (ಚ) 6 ಹ (ಗಜ) ಹಣ (ಚ)

*—* 'ಚ' ಪ್ರತಿಯಲ್ಲಿಲ್ಲ.

ಕೃತಮೋಹದ್ರೋಹವಿಧ್ವಂಸನನಧಿಗತ ಕೈವಲ್ಯಬೋಧೋದಯಂ ಸಾ
ಧಿತ ಕರ್ಮಾರಾತಿವರ್ಗಂ ಜಯಜಯನಿನದಂ ತೀವೆ ದೇವೇಂದ್ರರಿಂ ದಿ
ಕ್ತ್ರತಿಯಿಂದಂದಾನಕಂ ಭೋರ್ಗರೆವಿನಮದಜಿತಸ್ವಾಮಿ ದೇವಾಧಿದೇವಂ
ಕೃತಕೃತ್ಯಂ ಬುದ್ಧಬೋಧ್ಯಂ ಶಿವ[1]ಪದಸುಖಮಂ[1] ಪೊರ್ದಿದಂ ಸಿದ್ಧಸಾಧ್ಯಂ
೨೯

ಇದು ಸಕಲ ಮುನೀಂದ್ರವೃಂದ ವೃಂದಾರಕ ಶ್ರೀಮದಜಿತಸೇನ ಭಟ್ಟಾರಕ ಶ್ರೀ ಪಾದಪದ್ಮ ಪ್ರಸಾದಾಸಾದಿತ ರತ್ನತ್ರಯಾಲಂಕೃತ ಶ್ರೀಮದಭಿನವ ಕವಿಚಕ್ರವರ್ತಿ ಕವಿರತ್ನ ವಿರಚಿತ ಶ್ರೀದಾನಚಿಂತಾಮಣಿ [2]ನಿ[2]ರ್ಮಾಪಿತ ಶ್ರೀಮದಜಿತತೀರ್ಥಕರ ಪುರಾಣತಿಲಕದೊಳ್

ಪರಿನಿರ್ವಾ[3]ಣಕಲ್ಯಾಣ[3] ವರ್ಣನಂ

ಅಷ್ಟಮಾಶ್ವಾಸಂ

1 ಸುಖಪದಮಂ (ಕಗಚಜ) 2 ವಿನಿ (ಟತ) 3 ಣ (ಕಚತ)

# ನವಮಾಶ್ವಾಸಂ

ಶ್ರೀಮದಜಿತಂ ತ್ರಿಲೋಕ ಶಿ
ಖಾಮಣಿ ಸುಖಮಯಶರೀರನಾದಂ ಸಿದ್ಧ
ಗ್ರಾಮಶಿಖಾಮಣಿ ಭವ್ಯಜ
ನಾಮೃತಮಯ ಚಾರುಚರಿತನಪಗತದುರಿತಂ ೧

ನೆಗಟ್ದಜಿತ ಪಂಚಕಲ್ಯಾ
ಣಗಣ[1]ದೊಳೋರಂತೆ[1] ರೋಹಿಣೀನಕ್ಷತ್ರಂ
ನೆಗಟ್ದುದಱಿಂ ಶುಭಕಾರ್ಯಾ
ದಿಗೆ ತಾನೆ ಪವಿತ್ರಮಾದುದಾ ನಕ್ಷತ್ರಂ ೨

ಜನಕಂ ಶ್ರೀಜಿತಶತ್ರು ತಾಯ್ ವಿಜಯಸೇನಾದೇವಿ ಸಂದಿರ್ದಯೋ
ಧ್ಯೆ ನಿಜಾವಾಮ್ನಾಯದ ರಾಜಧಾನಿ ಮಹಿಜಂ ಸಪ್ತಚ್ಛದಂ ದಂತಿಲಾಂ
ಛನಮಾ ರೋಹಿಣಿ ತಾರೆ ಯಕ್ಷಿ ತನಗಾ ಯಕ್ಷಂ ಮಹಾಯಕ್ಷನೆಂ
ಬಿನೆಗಂ ಸಂದಜಿತಂ ಜಿತಾರಿ ಪಡೆದಂ ಸಮ್ಮೇದದೊಳ್ ಮುಕ್ತಿಯಂ ೩

ಅಂತಜಿತಜಿನವಲ್ಲಭಂ ಸಕಲ ಕರ್ಮನಿರ್ಮೂಲನಂಗೆಯ್ದು ಮೋಕ್ಷಲಕ್ಷ್ಮೀವಲ್ಲಭನುಂ ತ್ರಿಲೋಕೈಕಚೂಡಾಮಣಿಯುಂ ಅನಂತಜ್ಞಾ[2]ನಾನಂತವೀರ್ಯಾನಂತದರ್ಶ[2]ನಾನಂತಸುಖಸ್ವರೂಪನುಂ ಈಷತ್ಪ್ರಾಗ್ಭಾರಶಿಖರಿಶೇಖರನುಮಾಗಿರ್ದನಿತ್ತ ದೇವೇಂದ್ರನಿಕಾಯಂ [3]ಅಗ್ನೀಂದ್ರ[3]ಮಕುಟಾಮಲೋದ್ದೀಪಿತ ದೀಪಧೂಪಸುರಭಿ ಮಾಲ್ಯಾದಿಗಳಿಂ ಜಿನನಿರ್ವಾಣಕ್ಷೇತ್ರ ಪೂಜಾವಿಧಿಯಂ ನಿರ್ವರ್ತಿಸಿ ತದೀಯರೂಪ ಪವಿತ್ರ ಭೂಮಿಯಿಂ ಪಂಚಕಲ್ಯಾಣಭೂತಿಭಾಗಿಗಳಪ್ಪೆಮಕ್ಕೆಂದು ಹೃದಯಕಂಠಮುರ ಭುಜದ್ವಯಲಲಾಟಪ್ರದೇಶಂಗಳೊಳ್ ಮುಟ್ಟಿ ಸೌಧರ್ಮೇಂದ್ರಂ ಪರಿನಿರ್ವಾಣಕಲ್ಯಾ

1 ಗಳೊಳಗೋರಂತೆ (ಗ) ಗಳೊಳೋರಂತೆ (ಚ) ಗಳೊಳಗೋವಂತೆ (ಜ) 2 ನಾನಂತದರ್ಶ (ಗ) ನಮನಂತದರ್ಶಸ್ಪರ್ಶ (ಚಜ) 3 ಮದ್ಗಿರೀಂದ್ರ ಅಗ್ನೀಂದ್ರ (ಚ) ಮದ್ಗಿರೀಂದ್ರ (ಗಜ)

ಱದೊಳ್ ಆನಂದನೃತ್ಯಮುಂ ಮಾಡಿ ಪೂಜಿಸಿ ಪೊಡೆವಟ್ಟು ಪೋದನಿತ್ತ ಶೋಕಾಕು ಲೀಕೃತಚಿತ್ತರಾದ ಜಿತಶತ್ರುಮಹಾರಾಜನುಮಂ ವಿಜಯಸೇನಾದೇವಿಯುಮಂ ಅಜಿತ ಸೇನಕುಮಾರಕನುಮಂ ಸಿಂಹಸೇನಾಖ್ಯಗಣಧರಮುಖ್ಯರ್ ಸಂಸಾರಸ್ವರೂಪಮುನ ಱಿ[1]ಪಿ[1] ಸದ್ಧರ್ಮೋಪದೇಶಂಗೆಯ್ದು ನಮಗುಂ ನಿಮಗುಮಾ ಪರಮೇಶ್ವರನಿರ್ದ ವಿನ ಶ್ವರಪ್ರದೇಶಮೆ ನಿವಾಸಮಕ್ಕುಮೆಂದು ಸಂತೈಸೆ ಬಂದನಿಬರುಮಯೋಧ್ಯಾಪುರಮಂ ಪೊಕ್ಕು ಮಹಾಮಹಾಮಹಿಮೆಗಳಪ್ಪ ಜಿನಪೂಜೆಗಳಂ[2]ಮಾಡಿಸುತ್ತುಂ[2] ಮಹೋ ತ್ತುಂಗತೋರಣಂಗಳಪ್ಪ ಚೈತ್ಯಾಲಯಂಗಳಂ ಮಾಡಿಸಿಯುಂ ಮಹಾಧ್ವಜಮನೆತ್ತಿಸಿ ಯುಂ ಮಹಾದಾನಮಂ ನೆಗಱ್ಚಿಯುಮನೇಕ ರತ್ನಪ್ರತಿಮೆಗಳಂ ಮಾಡಿಸಿಯುಂ ರತ್ನತ್ರಯಮಂ ಕೊಂಡಾಡಿಯುಂ ದಾನಚಿಂತಾಮಣಿಯಂತೆ ಧರ್ಮಪ್ರಭಾವನೆಯುಂ ಮಾಡುತ್ತುತ್ಕೃಷ್ಟ ಚಾರಿ[3]ತ್ರದಿಂ[3] ಚರಿತಾರ್ಥರುಮಾಗೆ

ಎರಡನೆಯ ತೀರ್ಥನಾಥನ
ಚರಿತದೊಳೆರಡನೆಯ ಚಕ್ರನಾಥನ ಚರಿತಂ
ಬರೆ ಬಣ್ಣಿಸಲಜಿತಜಿನೇ
ಶ್ವರಭಕ್ತಂ ಸಗರಚಕ್ರವರ್ತಿಯೆ ತಕ್ಕಂ ೪

ಅದೆಂತೆಂದೊಡೀ ಸಗರನೆಂಬೆರಡನೆಯ ಚಕ್ರವರ್ತಿ ತನ್ನ ಮುನ್ನಿನ ಮೂಱನೆಯ ಜನ್ಮದೊಳ್ ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ ತೆಂಕಣತಡಿಯ ವತ್ಸ ಕಾವತೀವಿಷಯದ ಪೃಥ್ವೀನಗರಮನಾಳ್ವಂ ಜಯಸೇನನೆಂಬರಸನಾದನಾತನ ಮಹಾ ದೇವಿಯುಂ ವಿಜಯಸೇನೆಯೆಂಬವಳವರ್ಗೆ ರತಿಷೇಣನುಂ ಧೃತಿಷೇಣನುಮೆಂಬರಿರ್ವರ್ ತನಯರಾದರವರೊಳಗೆ ರತಿಷೇಣನುಂ ಸ್ವರ್ಣಪಾಷಾಣದಂತೆ ಕೃತಾಂತದಂತಾಂತರ ವಜ್ರಘಾತಜರ್ಝರೀಕೃತನಾಗೆ ಜಯಸೇನಮಹಾರಾಜಂ ನಿಜಪ್ರಿಯತನೂಜ ಶೋಕಾನ ಲಾತ್ಯಂತ [4]ಸಂತಪ್ತ[4]ಚಿತ್ತನಾಗೆ

ವಿನಯಜಲಧೀ ಹಾ ಹಾ ಹಾ ಬಂಧುವತ್ಸಳ ಗೋತ್ರಮಂ
ಡನ ನಿಧಿಯೆ ಹಾ ಹಾ ಹಾ ಹಾ ರಾಜವಂಶಶಿಖಾಮಣೀ
ಮನಸಿಜವಧೂಲೀಲಾಶೃಂಗಾರವಾರವಧೂಮನೋ
ವನಜತರಣೀ ಹಾ ಹಾ ಹಾ ಪುತ್ರ ಹಾ ರಣಕೇಸರೀ ೫

1 ದ(ಕ) ಠಲ್ (ಚಜ) 2 ತೋಱಮಾಡಿಸುವುದು (ಕಬ) 3 ತ್ರ (ಗಚಜ) 4 ತಪ್ತ(ಜ)

ಎಂದೆನಿಸಿತಾನುಮಂದದಿಂ ಬಾಯಱಿದು ವಿಪ್ರಲಾಪಂಗೈವ *ಜಯಸೇನಮಹಾರಾಜನ ಕರುಣಾರುತವಮಂ ಮಹಾರುತನೆಂಬರಸನ ಮೈದು[1]ನಂ[1] ಮಾಣಿಸಿ

ತನಯವ್ಯಾಮೋಹದಿಂದಂ ಮಱುಗಿದೊಡೆಮ[2]ಗಿಂ[2]ಬರ್ಕುಮೇ ಸದ್ವಿವೇಕಂ
ಮನದಿಂ ಗೆಂಟಾಯ್ತು ಕಾಲಾನಲಕಬಳಿತರಾರಾರ್ಗೆದಾರಾರ್ಗೆ ಶೋಕಾಂ
ಧನೆಯಪ್ಪೈ ಖೇದಮಂ ನಂಬದೆ ಜಿನಮತಮಂ ನಂಬು ನೀನೆಯ್ದೆ ಧರ್ಮಂ
ನಿನಗಾರ್ಮಂ ನೀನುಮಾನುಂ ತಳರ್ವಮೊಡನೆ ಸಂಸಾರಕಾಂತಾರದಿಂದಂ ೬

ಎಂದು ತನ್ನ ಭಾವಂಗೆ ಸಂಸಾರಸ್ವರೂಪಮನಾ ಮಹಾನುಭಾವನಱಿಪುವ್ರದುಮಾತನ ಮಾತಂ ಕೇಳ್ದಪಗತಶೋಕನುಮುಪಗತ ವಿವೇಕನುಮಾಗಿ ಧೃತಿಯಂ ತಾಳ್ದೀ ಧೃತಿಷೇಣಂಗೆ ರಾಜ್ಯಾಭಿಷೇಕಪುರಸ್ಸರಂ ಸಾಮ್ರಾಜ್ಯಪದವಿಯಂ ಕೊಟ್ಟು ಬಾಹ್ಯಾಭ್ಯಂತರಪರಿಗ್ರಹ ಪರಿತ್ಯಾಗಂಗೆಯ್ದು ಪರಮತಪಸ್ಸಂಯಮಧರರಪ್ಪ ಯಶೋಧರಗುರುಗಳ ಪಕ್ಕದೆ ತಮ್ಮ ಮೈದುನಮಹಾರುತನುಂ ತಾನುಂ ಮತ್ತಂ ಪಲಂಬರರಸುಮಕ್ಕಳ್ವೆರಸು ಪರಮಜಿನದೀಕ್ಷೆಯಂ ತ್ರಿಸಾಕ್ಷಿಕನಾಗಿ ಕೆಯ್ಕೊಂಡು ಕಾಲಾವಸಾನದೊಳ್ ಸನ್ಯಸನಮರಣದಿನಾರಣಮೆಂಬ ಪದಿನೈದನೆಯ ಕಲ್ಪದೊಳ್ ರತ್ನತ್ರಯೋತ್ಸೇಧನುಂ ದ್ವಾವಿಂಶತಿಸಹಸ್ರವರ್ಷ ಸಂಕಲ್ಪ ವಿಕಲ್ಪಿತಾಮೃತಾಹಾರನುಮೇಕಾದಶಮಾಸನಿರ್ಯತ್ಸುರಭಿನಿಶ್ವಾಸನುಮಣಿಮಾದ್ಯಷ್ಟ ಗುಣೋಪೇತನುಮಾಗಿಯುಂ ಮಹಾಬಲನೆಂಬಂ ದೇವನಾಗಿ ಪುಟ್ಟೆ ವೈಮಾನಿಕ ಸುಂದರೀವದನಾರವಿಂದ ವಿಲೋಕ ವಿಲಾಸ[3]ಮಣಿದ[3]ರ್ಪಣಾಯಮಾನ ವಿಮಲಕಪೋಲ ಪುಳಕನಾದಂ ಮಹಾರುತನುಮಾಕಲ್ಪದೊಳೆ ಮಣಿಕೇತುವೆಂಬೊಂ ದೇವ[4]ನಾದನಾಗಿ[4] ಸುರಲೋಕ ಸರೋವರ ಪರಿಸರೋತ್ತಂಸರಾಜನಾದನಂತವರಿರ್ವರುಂ ಗೀರ್ವಾಣಸುಖಮನನುಭವಿಸುತ್ತುಮಿರ್ದೊಂದು ಸಮಯದೊಳೆಮ್ಮ ನಮ್ಮಿರ್ವರೊಳಗಾರ್ ಮುನ್ನಂ ಮನುಷ್ಯಲೋಕಕ್ಕೆ ಪೋದರವರಂ ದೇವಲೋಕದೊಳಿದ್ದವರ್ ಪೋಗಿ ತಮ್ಮ ಬಲ್ಲಂದದಿಂ ಪ್ರತಿಬೋಧಿಸಿ ವಿಷಯಸುಖಾನುಮುಖರಂ ದೀಕ್ಷಾಭಿಮುಖರಂ ಮಾಳ್ಪುದೆಂದು* ಮಹಾಬಲಮಣಿಕೇತುಗಳ್ ಕೃತಕಸಂಕೇತಂ ಮಾಡೆ ಜಯಸೇನಚರ ಮಹಾಬಳಂ ದಿವಿಜಂ ದಿವಿಜಲೋಕಸುಖಮನನುಭವಿಸಿ ಬಂದು ಜಂಬೂದ್ವೀಪದ ಭರತಕ್ಷೇತ್ರದ ಕೌಶಲ[5]ದೇಶದ[5]ಯೋಧ್ಯಾಪುರಮನಾಳ್ವ

1 ನನಂ (ಚ) 2 ಗಂ (ಕಚಜ) 3 ದ (ಚಜ) 4 ನಾಗಿ (ಚಜ) 5 ವಿಷಯದ (ಕಗಚಜ)

* ಇಲ್ಲಿಂದ ಈ ವಚನದ 'ಮಾಳ್ಪುದೆಂದು' ಎಂಬವರೆಗೂ 'ಗ' ಪ್ರತಿಯ ಪತ್ರ ಲುಪ್ತ

ಇಕ್ಷ್ವಾಕುವಂಶದ ಗುಣಮಣಿಸಮುದ್ರನೆನಿಸಿದ ಸುಭದ್ರವಿಜಯಂಗಂ ಶೃಂಗಾ[1]ರ[1] ಸಮುದ್ರವೇಲಾಲೀಲೆಯೆನಿಸಿದ ಸುವೇಲಾದೇವಿಗಮತಿಕರಾಳಾಲೋಕನಕಬಳಿತಾರಾತಿನಗರಂ ಸಗರನೆಂಬೊಂ ತನಯನಾಗಿ ಸಪ್ತತಿಲಕ್ಷಪೂರ್ವಪರಮಾಯುಷ್ಯನುಂ ಪಂಚಾಶದಧಿಕ ಚತುಶ್ಶತಪ್ರಮಿತ ಚಾಪೋತ್ಸೇಧನುಂ ಚಂಚಚ್ಚಾರುಚಾಮೀಕರಭಾಸನುಮೆನಿಸಿ ಪದಿನೆಂಟು ಲಕ್ಷ ಪೂರ್ವಕುಮಾರಕಾಲಂ ಪೋಗೆ ಮಹಾಮಂಡಳೇಶ್ವರ ಪದವಿಯನಲಂಕರಿಸಿ ಮಹೀಮಂಡಲಮುಂ ಪ್ರತಿಪಾಲಿಸಿ ಮತ್ತಮಷ್ಟಾದಶಲ[2]ಕ್ಷಪೂರ್ವ[2] ಕಾಲಾತಿಕ್ರಮದೊಳ್ ಚಕ್ರರತ್ನಂ ಪುಟ್ಟೆ ಸಕಲ ಚಕ್ರವರ್ತಿಯಾಗಿ ಸಾಮ್ರಾಜ್ಯ ಲಕ್ಷ್ಮಿಯಂ ತಾಳ್ದಿ

ಧರೆಯಂ ಪೂರ್ವಾದ್ರಿಯಂ ಸೇತುವಿನಮರ್ದಪರಾಂಭೋಧಿಯಿಂ ಹೈಮಧಾತ್ರೀ
ಧರದಿಂದೇಕಾತಪತ್ರಂ ನಿಜಭುಜವಿಜಯೋತ್ಸಾಹದಿಂ ತಾಳ್ದಿದಂ ದ್ವಿ
ಟ್ಕರಿಕುಂಭೋನ್ಮುಕ್ತಮುಕ್ತಾಫಳಕಲಿತ ಜಯಶ್ರೀವಧೂಹಾರಭಾಭಾ
ಸುರ ಬಾಹೋತ್ಖಾತಖಡ್ಗಪ್ರತಿಭಯಮಿನಮದ್ರಾಜಕಂ ರಾಜರಾಜಂ ೭

ರಾಜವತಿಯಾಯ್ತು ಧರೆ ಕಿಂ
ರಾಜರ್ ಪರಿಪಾಲಿಸುತ್ತುಮಿರೆ ಯುವರಾಜಾ
ರಾಜಾಧಿರಾಜನಿಂ ಧರೆ
ರಾಜ[3]ನ್ವ[3]ತಿಯಾದುದೆಸೆಯೆ ಸೌರಾಜ್ಯಗುಣಂ ೮

ಭುಜದಂಡಾವಿದ್ಧದಿಕ್ಚಕ್ರದೊಳಿಭಮದಧಾರಾಜಲಕ್ಲಿನ್ನವೀರ
ಧ್ವಜಿನೀಪಾದಾಹತಕ್ಷ್ಮಾವಲಯಮುದಿತ ಮೃತ್ಪಿಂಡಮುಂ ಭಾಜನಂ ಮಾ
ಡಿ ಜಸಕ್ಕತ್ಯುಗ್ರತೇಜೋಜ್ವಲನ ವಿಲಸಿತಂಗೆಯ್ದ ಹಸ್ತಂ ಸುಚಕ್ರ
ಧ್ವಜನಪ್ಪಂ ಚಕ್ರಿ ತಪ್ಪಿಲ್ಲೆನಿಸಿದನವನೀಚಕ್ರಮುಂ ಚಕ್ರನಾಥಂ ೯

ಅವನಮ್ರಾರಿನರೇಂದ್ರರುನ್ನತಿ ನಿಜಾಂಗುಷ್ಠಂಗಳೊಳ್ ಪಾಣಿಪ
ಲ್ಲವರಾಗಂ ತಲದೊಳ್ ವಿನಮ್ರಮಕುಟಾಲಂಕಾರ ಮಾಣಿಕ್ಯದೀ
ಪ್ತಿವಿತಾನಂ ನಖಪಙ್ಕ್ತಿಯೊಳ್ ನೆಲಸಿದಂದತ್ಯುನ್ನತಾಂಗುಷ್ಠಮೊ
ಪ್ಪುವುದಾತಾಮ್ರತಲಂ ಕನನ್ನಖಚಯಂ ಪಾದದ್ವಯಂ ಚಕ್ರಿ[4]ಯಾ[4] ೧೦



1 ರಕ (ಕಗಚಜ) 2 ಕ್ಷ (ಕ) 3 ಸ್ಥಿ (ಗಚಜ) 4 ಯಂ (ಕ)

ಅಂತೆನಿಸಿ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಿರ್ಪನನ್ನೆಗಂ ಶರತ್ಸಮಯ ಸನ್ನಿಧಾನದೊಳ್

ಅತಿವಿಶದಾಂಬರಮುದ್ಭಾ
ಸಿತಕಮಲಂ ರಾಜಹಂಸಸೇವ್ಯಂ ಶರದಾ
ಕೃತಿ ಪೋಲ್ವುದು ಸಗರನೃಪಾ
ಕೃತಿಯಂ ಚಂದ್ರಾಸ್ಯೆ ಚಂದ್ರಿಕಾರಮಣೀಯಂ ೧೧

ಶರದಂ ಬಂದುದು ನಮಗಿದು
ಶರದಂ ರಿಪುಶರದನೆನಿಪ ಸಗರನಿನೆಂದಂ
ದರಿಭೂಪರ್ ತದ್ದಂತೀ
ಶರದ ಪ್ರತಿಘಾತಮಾಗಲಾದಂತಿರ್ದರ್ ೧೨

ಮಿಸುಪ ಸುರೇಂದ್ರಚಾಪತತಿ ತೋರಣಮಾಗೆ ಮರಾಳನಿಸ್ವನಂ
ಪಸರಿಪ ಮಂಗಳಾನಕ[1]ಪಟು[1]ಸ್ವನಮಾಗೆ ಶರತ್ಪ್ರವೇಶದೊಳ್
ಹೊಸೆದೆಸೆಯಂ ಪೊದಱ್ದ ಧವಳಾಭ್ರಕುಳಂಗಳ ಬಳ್ಳಿವಳ್ಳಿ ಪೋ
ಲ್ತೆಸೆದುದು ಖೇಚರೀಜನಕೆ ಮಾಡಿದ ಬೆಳ್ಳಿಯ ಬಳ್ಳಿಮಾಡಮಂ ೧೩

ಅಂತು ಬಂದ ಶರತ್ಸಮಯದೊಳ್ ಸಗರಚಕ್ರವರ್ತಿ ಸಕಲ ದಿಗ್ವಿಜಯ ಯಾತ್ರೋದ್ಯುಕ್ತಚಿತ್ತನಾಗಿ ವಿಜಯಾಭಿಷೇಕಪೂರ್ವಂ ಪೂರ್ವಾಭಿಮುಖನಾಗಿ

ಸಂಗತ ಪೂರ್ಣಕುಂಭನುದಿತಧ್ವಜನುಲ್ಲಸಿತಾಗ್ರಪಲ್ಲವಂ
ಭೃಂಗನಿಕಾಯಗೇಯಯುತನಕ್ಷಯಹಸ್ತ ವಿಭಾಸಿ ರೋಚನಾ
ಪಿಂಗವಿಲೋಚನಂ ರುಚಿರಪುಷ್ಕರನುನ್ನತದಂತತೋರಣಂ
ಮಂಗಳಲಕ್ಷಣಂ ವಿಜಯಸಿಂಧುರಮಿರ್ದುದು ಪಟ್ಟವರ್ಧನಂ ೧೪

ಅಂತು ಪಣ್ಣಿ ಬಂದಿರ್ದ ನಿಜವಿಜಯಸಿಂಧುರದ ಬೆಂಗೆವಂದು ಚತುರಂಗಬಲಂ ಬೆರಸು ತಳರ್ವಾಗಳ್

1 ಪಟ (ಕ)

ಚುಂಬಿಸಿದುದು ದಿಗ್ವನಿತಾ
ಸ್ಯಾಂಬುಜಮಂ ಗಗನಗಂಗೆಯೊಳ್ ನೆರೆದುದು ನೀ
ಳ್ದಂಬರಲಕ್ಷ್ಮಿ ಶ್ರೀಯುಮಂ ಪಿಟ
ನೆಂಬಿನಮಾಲಿಂಗಿ[1]ಸುತ್ತೆ[1]ಧೂಳೀಪಟಲಂ ೧೫

ಬತ್ತೆ ತೊಱೆ ಬೆಟ್ಟುಗಳ್ ನೆಲೆ
ವತ್ತೆ ಪಡಲ್ವಡೆ ಮಹಾದ್ರುಮಂಗಳ ನೆಲನಂ
ಪೊತ್ತ ಫಣಿ[2]ತೆಣಱು[2]ತಿರೆ ನಡೆ
ದತ್ತಾಗಳ್ ಸಗರಚಕ್ರವರ್ತಿಯ ಕಟಕಂ ೧೬

ಮುಗಿಲಂ ಮುಟ್ಟಿತ್ತು ಸೇನಾರಜದೊಡನೆ ಜಯೋಭಧ್ವಜಶ್ರೇಣಿ ದಿಗ್ಭಿ
ತ್ತಿಗಳಂ ಮುಟ್ಟಿತ್ತು ತೂರ್ಯಾರವದೊಡನೆ ಬಲಕ್ಷೋಭಶಬ್ದಂ ಪಯೋರಾ
ಶಿಗಳಂ ಮುಟ್ಟಿತ್ತು ದಾನಪ್ಲವದೊಡನೆ ಪರಕ್ಷೋಣಿಪಾಲಾಂಗನಾದೃ
ಗ್ವಿಗಳದ್ಬಾಷ್ಪಾಂಬುಧಾರಾಪ್ರಸರಮೆನೆ ನೃಪಂ ದಿಗ್ಜಯೋದ್ಯುಕ್ತನಾದಂ ೧೭

ಅಂತು ತನ್ನ ಬಲದಪರಿಮಿತ ಪದಾತಿ[3]ಬಲ[3] ಪದಾಘಾತದೊಳೆ ನೆಗೆದು ಮಂದೈಸಿ ಕೆಂದೂಳಿಯೊಳ್ ಕೆಸರ್ವುಸಗಿದ ಜಲದುರ್ಗಮೆಲ್ಲಂ ನೆಲದೊಳೋರಂತಾಗೆಯುಂ ತನ್ನ ಬಲದಸಂಖ್ಯಾತ ತುರಗಬಲದ ಖುರಘಾತದೊಳೆ ವನದುರ್ಗಮೆಲ್ಲಂ ನುರ್ಗು ನುರ್ಗಾಗೆಯುಂ ತನ್ನ ಬಲದಗಣಿತ ಗಜಬಲದ ಪದಾಘಾತದೊಳೆ ಗಿರಿದುರ್ಗಮೆಲ್ಲಂ ನುಚ್ಚುನೂಱಾಗೆಯುಂ ತನ್ನ ಬಲದಪ್ರಮಿತ ರಥಬಲದ ಚಕ್ರಘಾತದೊಳೆ ಧರಾತಳ ಚಕ್ರಮೆಲ್ಲಂ ಕೃಷ್ಟಮುತ್ಕೃಷ್ಟಮಾದಂತಾಗೆಯುಮಗುರ್ವಾಗೆ ಬಂದು ಗಂಗಾತಟಂಬಿಡಿದು ನಡೆದು ಮರುದ್ದೇವನೆಂಬ ಪನ್ನೆರಡನೆಯ ಮನುವಿನ ಕಾಲದಿಂ ತಾಳ್ದತಿಪ್ರವೃದ್ಧ ಮಾಗಿರ್ದುಪಸಮುದ್ರಮಂ ಪುಗದೆ ಸುಭದ್ರವಿಜಯನಂದನಂ ಗಂಗಾವನವೇದಿಕಾ ದ್ವಾರದಿಂ ಪೊಕ್ಕು ನಾಲ್ವತ್ತೆಣ್ಗಾವುದದಗಲದಿಂ ಬೀಡಂ ಬಿಡಿಸಿ ಪುರೋಹಿತಾದಿ ಕುಲವೃದ್ಧೋಪದೇಶರಾಗದಿಂ ತ್ರಿರಾತ್ರೋಪವಾಸಂಗೆಯ್ದು ದರ್ಭಶಯನದೊಳಿರ್ದು ಪಂಚಪರಮೇಷ್ಠಿ ಪೂಜೆಯಂ ಮಾಡಿ ಪಡೆವಳ್ಳನಂ ಪಡೆಗೆ ಕಾಪುವೇೞ್ದು ದಶವಾಹ ಸಂವಾಹ್ಯಮಪ್ಪ ಜಿತಂಜಯಮೆಂಬ ವಿಜಯರಥಮನೇಱಿ ಗಂಗಾದ್ವಾರದೊಳಗಣ ಲವಣಜಲಧಿಯಂ ಪೊಕ್ಕು ಪನ್ನೆರಡು ಯೋಜನಂಬೋದಲ್ಲಿ—ರಥ[4]ಮಾಣೆ[4]ಯಿಟ್ಟಂತೆ ಮಾಣೆ ಕಂಡು ರಥಾಂಗಧರನುಂ ದೃಪ್ತಕೋಪಾವೇಶಿತಾಧರನುಮಾಗಿ

---



1 ಸುತ್ತ (ಕ) ಸಿತ್ತು (ಗಜ) 2 ವೊರಲು (ಗಚಜ) 3 ಬಲದ (ಗಚಜ) 4 ಪೂಜೆ (ಜ)

ಜನನುತ ಸುಭದ್ರವಿಜಯನ
ತನಯಂಗೆರಡನೆಯ ಚಕ್ರವರ್ತಿಗೆ ಸಗರಾ
ಧಿನೃಪತಿಗಿದಿರೆಱಗುವುದೆಂ
ದು ನಾಮಮಂ ಬರೆದಮೋಘಶರದಿಂದೆಚ್ಚಂ ೧೮

[1]ಅಂತೆಸು[1]ವುದುಂ ಮಾಗಧನೆಂಬ ವ್ಯಂತರಾಧೀಶನಾಸ್ಫೋಟಿಸಿ ನುಡಿಯೆ ಮಾರ್ಕೊಂಡು ಕುಲವೃದ್ಧರ್ ತಂದೆಱಗಿಸೆ ರತ್ನಕುಂಡಲಕೇಯೂರಹಾರಪ್ರಭೃತಿ ಭೂಷಣಂಗಳನಲ್ಲಿ ಕೊಂಡುಬಂದು ದಕ್ಷಿಣವಿಜಯಕ್ಕೊಡರ್ಚಿಸಿ ವೈಜಯಂತೀ ದ್ವಾರದೊಳಗನೆ ಪೋಗಿ

ಮದಕುಂಭೀರಕುಳಪ್ರಚಾರವಿಚಳದ್ವ್ಯಾಚಾಳವೀಚೀಚಯಾ
ಸ್ಪದಮಂ ತುಂಗತರಂಗಸಂಗತ ತರಡ್ಡಿಂಡೀರ ಪಿಂಡಪ್ರಭಾ
ಸ್ಪದಮಂ ಕೌತುಕದಿಂದೆ ಚಕ್ರಪತಿ ತೀರೋಪಾಂತದೊಳ್ ನಿಂದು ನೋ
ಡಿದನಾ ಘೂರ್ಣಿತ ದಕ್ಷಿಣಾರ್ಣವಮನಕ್ಷೀಣಾಪದಕ್ಷೀಣಮಂ ೧೯

ಅಂತುನೋಡಿ ವರತನುನೆಂಬನೆಱಗದಿರ್ದೊಡಾತನುಮನೆಱಗಿಸಿ ಕವಚಕಂಠಾಭರಣ ಚೂಡಾಮಣಿ ಕನಕಕುಂಡಳಂಗಳಂ ತಂದು ಮುಂದಿಟ್ಟುಬಂದು ಮುಖ[2]ದೊಳ್ ತನಗೆ[2] ಸಮ್ಮುಖನಪ್ಪುದುಂ ಅಂತೆ ಪ್ರಭಾಸಾಮರ[3]ನನ[3]ಪಗತಪ್ರಭಂ ಮಾಡಿ ಸಂತಾನಕಮಲಾಮುಕ್ತಾಜಾಲಂಗಳಲ್ಲಿಂ ಕೊಂಡು ಸಿಂಧುಸರಿತ್ತೀರಂಬಿಡಿದು ವಿಜಯಾರ್ಧಾಚಳಮನೆಯ್ದೆವಂದು

ಮೃದು ವಾ[4]ದ್ಯ[4]ಸ್ವನಗೀತ ನಿಸ್ವನ ನಟದ್ವಿದ್ಯಾಧರೀನಾಟ್ಯಸಂ
ಪದಮಂ ರತ್ನಮಯಪ್ರಸಿದ್ಧಶಿಖರಾಲಂಕಾರಸಿದ್ಧಾಲಯಾ
ಸ್ಪದಮಂ ಖೇಚರಚಕ್ರವರ್ತಿ ವಿಭವಪ್ರೋದ್ಭಾಸಿಯಂ ಮೆಚ್ಚಿನೋ
ಡಿದನಾ ಭೂಚರಚಕ್ರವರ್ತಿ ವಿಜಯಾರ್ಧಾದ್ರೀಂದ್ರಮಂ ರುಂದ್ರಮಂ ೨೦

ಇಡಿದಿರೆ ಗುಹಾಂಧಕಾರಂ
ಪೊಡರ್ದೆಸೆದಿರೆ ಚಂದ್ರಕಾಂತರುಚಿ ನಗದೊಂದೊಂ

1 ಅಂತೆನಿಸಿದ ಶರದಿಂದಿಸು (ಗಚಜತ) ಅಂತೆಸಗಿದ ಶರದಿಂದಿಸು (ಟ) 2 ದೊಳ್ (ಗಜ)
3 ನ (ಗಚಜ) 4 ಕ್ಯ (ಜ)

ದೆಡೆಯೊಳ್ ಪೋಲ್ತೊಪ್ಪುವುದೊಂ
ದೆಡೆಯೊಳ್ ನೆಲಸಿರ್ದ ಕಾಳಮುಂ ಜೊನ್ನಮುಮಂ ೨೧

ನಿಚ್ಚಂ ಪಗಲಿನಕಾಂತದ
ಕಿಚ್ಚನಿರುಳ್ ಚಂದ್ರಕಾಂತದೊಱ[1]ಪಂ[1] ಪಡೆದಾ
[2]ಕಿಚ್ಚಿನದೆನದಿಪೆ[2] ಮಾಡುಗು
ಮಚ್ಚರಿಯಂ ಪಗಲುಮಿರುಳುಮಾ ವಿಜಯಾರ್ಧಂ ೨೨

ಕಲ್ಲೆನ್ನದೆ ಬೆಳೆದ ಪಸು
ರ್ಪುಲ್ಲೆಂದಾಸೆಯೊಳ್ ಸಾರ್ದು ಮರಕತದೊಡ್ಡಂ
ಗಲ್ಲನೆ ಕಾರ್ದು ಮೃಗಂಗಳ್
ಕಲ್ಲನೆ ಕನಲುತ್ತುಮಿರ್ಪುವಾ ಖಗನಗದೊಳ್ ೨೩

ಹರಿಣಧರ ಹರಿಣನಂ ಪೂ
ಮರದಡಿಯೊಳ್ ಪೊಯ್ದು [3]ಪಟ್ಟ[3]ಪುಲಿಗಳವೆನಿಕುಂ
ಪರೆದರುಣ ಸಿತಾಸಿತವು
ಪ್ಪ ರಾಗದಿಂ ಬೀಡೆವಟ್ಟ ಬೆಟ್ಟದ ಸಱಿಗಳ್ ೨೪

ವನದಹನಧೂಮ ನಿರ್ಜರ
ವನಪರ್ವತವಾತ ಸನ್ನಿಪಾತಪ್ರಭವಂ
ಘನಮುದಱೊಳ್ ಕಱೆವುವು ಕಡ
ಲನೀರನುಪಕಾರಿಗನುಪಕಾರಿಗಳೊಳವೇ ೨೫

ಗಜದಂತಕಷಣಕಂಪಿತ
ಕುಜಕೂಜದ್ವಿಹಗರುತಮನಾಲಿಸಿ ಸಿಂಗಂ
ನಿಜಗುಹೆಯಂ ಪೊಱಮಟ್ಟುದು
ವಿಜಿಗೀಷುಗೆ ಸಂದ ಲಕ್ಷಣಂ ನಿಜಮೆ ವಲಂ ೨೬

---



1 ವಂ (ಕಗಚಜ) 2 ಕಿಚ್ಚಪದನಡಿಸೆ (ಗಜ) ಕಿಚ್ಚಿನದನಡಿಸೆ (ಚ) 3 ಪಟ್ಟೆ (ಜ)

ಗಜಮಸ್ತಕಮಸ್ತಿಷ್ಕದಿ
ನಜೀರ್ಣಮಾಯ್ತೆಂದು ಲಂಘನಂಗೆಯ್ದವೋಲೇಂ
ಗಜರಿಪು ಲಂಘಿಸಿದುದೊ ಪವ
ನಜವದೆ ಶಿಖರಕ್ಕೆ ಶಿಖರದಿಂ ಖಗನಗದಾ ೨೭

ಗಿರಿಚರನದೀಚರೋಭಯ
ಚರಂಗಳಂ ಕಂಡು [1]ಕಂಡು ಖಗನಗದ ವನಾಂ[1]
ತರದೊಳ್ ಸಮುದಗ್ರೋಗ್ರ
ದ್ವಿರದಾಗಮದೊಳ್ ಸಮಗ್ರನೆಂದಱಿದು ನೃಪಂ ೨೮

*ಅಂತು ಭಾವಿಸುತಿರ್ಪನ್ನೆಗಂ

ಸ್ರೋತಸ್ಸುರುಚಿರಪುಷ್ಕರ
ನಾತತ ಋಕ್ಷಂ ಗುಹಾನ್ವಿತಂ ಪ್ರಿಯವಂಶೋ
ಪೇತಂ ತುಂಗೋತ್ಸಂಗಸ
ಮೇತಂ ಕರಿರಾಜನೆನಿಸುಗುಂ ಗಿರಿರಾಜಂ ೨೯

ಉಪಗತವಂಶಂ ಸೂಪನ
ತಪುಷ್ಕರಂ ಬಹಳಕರ್ಣತಾಳಂ ಮದಲೋ
ಲುಪ ಮಧುಪ ಮಧುರಗೀತಂ
ದ್ವಿಪಪತಿ ಸಂಗೀತನಿಕರಮಿರ್ಪಂತಿರ್ಕುಂ ೩೦

ವನಕರಿಕಪೋಲಕಂಡೂ
ಯನದಿಂದಂ ಪಾಯೆ ಮದಜಲಾಸವರಸ ವಾ
ಸನೆಯಿಂದಿತರ ವನಂಗಳು
ಮನುಕರಿಪುವು ಸಪ್ತಪರ್ಣ ಪಾದಪವನಮಂ ೩೧

---

1 ವನಾಂ (ಕ)

* ಇಲ್ಲಿಂದ ೩೨ರ ವರೆಗೂ 'ಚ' ಪ್ರತಿಯಲ್ಲಿಲ್ಲ.

ವನಚರಿ ಬರೆ ವಿದ್ಯುಲ್ಲೇಖೆ ಬರ್ಪಂತೆ ಬೆನ್ನಂ
ವನಮೃಗರುಧಿರೋಲ್ಲಿಪ್ತಾಂಗನುತ್ತುಂಗಚಾಪಂ
ವಿನುತರಚಿತ ಚಂಚತ್ಕಿಂಕಿರಾತ್ತಂ ಕಿರಾತಂ
ಜನಿಯಿಸಿದನಿದಂ ಸಾಮ್ಯಂ ಬರಲ್ ಶೋಣಮೇಘಂ ೩೨

ಗಳನಾದಂ ಸ್ಫುಟಮಂತ್ರನಾದಮಧರಂ ಬಂಧೂಕಪುಷ್ಪಂ ನಖಾ
ವಳಿ ದೇವಾವಳಿ ಕೇಶಸಂಸ್ಕರಣಧೂಪಂ ಧೂಮ ನಾನಾ ಲಸ
ತ್ಪುಳಕಂ ಚಂದನಚರ್ಚೆಯಾಗೆ ಕೆಳರಂ ಬಂಧುಗ್ರಹಾನುಗ್ರಹಂ
ಕೆಳಱಿದರ್ದೊಡೆ ದರೀಗೃಹಂಗಳೆಸೆಗುಂ ವಿದ್ಯಾಧರದ್ವಂದ್ವದಿಂ ೩೩

ಸುಮನಸ್ಸೌರಭಮಾದ್ಯದುದ್ಯದಳಿಮಾಲಾಗೀತಿಯಿಂ ಮೆಚ್ಚಿ ಕೇ
ಳೆ ಮದೋನ್ಮತ್ತವಿಕಾರಕೀರಮುಖವಾದ್ಯಾತೋದ್ಯಮಂ ಕೇಳ್ದು ಮೆ
ಚ್ಚಿ ಮಯೂರೀಲಟಹಪ್ರವೃತ್ತ ವಿಲಸನ್ನೃತ್ಯಂಗಳಂ ಮೆಚ್ಚಿ ನೋ
ಡೆ ಮರುಳ್ಚಿತ್ತು ಖಗಾದ್ರಿ ಚಕ್ರಧರನಂ ಸಂಗೀತಕಕ್ರೀಡೆಯಿಂ ೩೪

ಆಗಳ್ ವಿಜಯಾರ್ಧಾಚಳೇಂದ್ರಾಧಿಪತಿ ವಿಜಯಾರ್ಧಕುಮಾರಂ ವಿಜಯಾರ್ಧಾಭಿಷೇಕಪೂರ್ವಕಂ ಸಿಂಹಾಸನ ಕನಕಭೃಂಗಾರ ಧವಳಾತಪತ್ರ ಧವಳಚಾಮರಾದಿ ವಿಜಯಚಿಹ್ನಂಗಳಂ ಕೊಡಿಕೊಂಡು ಮಗುಳ್ದು ತಮಿಸ್ರಗುಹಾಸಮೀಪದೊಳ್ ವಿಜಯಸ್ಕಂಧವಾರಣಮನಿರಿಸಿ ಕೃತಮಾಲಾಮರನಂ ವಿಧೇಯೀಕೃತಂ ಮಾಡಿ ತಿಲಕಾದಿ ಚತುರ್ದಶಭೂಷಣಂಗಳಂ ಮೆಯ್ಗೆ ಮಾಡಿಸಿ ಸಿಂಧುವನವೇದಿಕೆಯ ತೋರಣದ್ವಾರದಿಂ ಪೊಕ್ಕು ವಿಜಯಾರ್ಧಚೂಳಿಕೆಯ ಸೋಪಾನಮನೇಱಿ ಸಿಂಧುನದಿಯ ಪಡುವಣ ವೇದಿಕೆಯ ತೋರಣದ್ವಾರದಿಂದಮುರ್ಚ್ಚಿ ವಿಜ[1]ಯಾರ್ಧ[1]ದ್ವಾರದಿಂ ಪೊಕ್ಕು ವಿಜಯಾರ್ಧ ವೇದಿಕಾ ತೋರಣದ್ವಾರದಿಂ ಪೊಱಮಟ್ಟು ಪಶ್ಚಿಮಖಂಡಮನಖಂಡ ಭುಜದಂಡ ಪ್ರತಾಪದಿನಱುದಿಂಗಳ್ಗೆ ಸೇನಾನಾಯಕಂ ಸಾಧಿಸಿ ಮಗುಳ್ದು ಬರೆ ದಕ್ಷಿಣ ಭರತದ ನರರಂ ವಿದ್ಯಾಧರರನಡಿಗೆಱಗಿಸಿ ಬಱಿಯಂ [2]ಮ್ಲೇಚ್ಛ[2]ಖಂಡಮಂ ಬಾಯ್ಕೇಳಿಸಿ ಚಕ್ರ ಪೂಜೆಗೆಯ್ದು ತದ್ಗಿರೀಂದ್ರ ಕಟಕಂಬಿಡಿದು ನಿಜ ವಿಜಯಕಟಕಮಂ ನಡೆಯಿಸಿ ಸಿಂಧುನದೀತೀರದ ದ್ವಿತಯಭಾಗದ ಮಹಾವಿಥೀದ್ವಯದಿಂ ಮಹಾಗುಹಾದ್ವಾರಮನೆಯ್ದಿ ಮುಂದಗತ್ತಲೆಯೊಳ್ ಮಣಿರತ್ನಕಾಕಿಣೀರತ್ನಂಗಳೊಳ್ [3]ಬರೆದ[3] ಚಂದ್ರಾ

---

1 ಯಾ (ಕಟ) 2 ಮ್ಲಂಛ (ಟತ) 3 ಬರದ (ಗಜಜ)

ದಿಶ್ಯಮಂಡಲವ ಬೆಳಗು ಬೆಳಗೆ ಸಿಂಧುವಿನ ತಡಿವಿಡಿದು ಚತುರಂಗಬಲಂಬೆರಸು ನಡೆ[1]ದು[1] ನಿಜಸ್ಥಪತಿ ರತ್ನ ಪ್ರಯತ್ನ ವಿನಿರ್ಮಿತಮಪ್ಪ ಸೇತುಬಂಧದಿಂದಮುನ್ಮಗ್ನ ಜಳೆಯುಮಂ ನಿಮಗ್ನಜಳೆಯುಮೆಂಬೆರಡಱಿಕೆಯ ತೊಱೆಗಳಂ ಪಾಯ್ದು ಮಹಾ ಗುಹೆಯುಂ ಪೊಱಮಟ್ಟು ವಿಜಯಾರ್ಧದುತ್ತರೋಪಕಂಠದೊಳ್ ಬೀಡಂ ಬಿಟ್ಟು ಮುನ್ನಿನಂತೆ ಪಶ್ಚಿಮಕ್ಕೆ ಸೇನಾಪತಿಯಟ್ಟಿ ಬಾಯ್ಕೇಳಿಸಿ ತಾನುಮುತ್ತರಾರ್ಧ ಖಂಡಮನವುಂಕೆ ನಿಲೆ ಚಿಳಾತಾವರ್ತನರೆಂಬಿರ್ವರ್[2]ಮ್ಲೇಚ್ಛ[2]ರಾಜರ್ ತುಚ್ಛ ಪರಿಚ್ಛದರುಚ್ಚ ವಿಗ್ರಹಮನೆತ್ತಿಕೊಂಡು ನಿಚ್ಚಗಾಳಿಗದೊಳಚ್ಚಿಗಂಗೊಳಿಸಿ ತಮ್ಮ ಕುಲದೈವಮಪ್ಪ ಮೇಘಮುಖ[3]ರೆಂಬ ನಾಗಪ್ರಮುಖರಂ[3] ಬೆಸಸೆ ನೆಲನೆಲ್ಲಮು[4]ನವ ರೇ[4]ಕಾರ್ಣವಂ ಮಾಡಿದೊಡಡಿಯೊಳ್ ಪಾಸಿದ ಚರ್ಮರತ್ನಮುಂ ಮೇಲೆ ಪಿಡಿದ ಛತ್ರರತ್ನಮುಂ ಕಾಯೆ [5]ಕಾಕಿಣೀ[5]ರತ್ನದೊಳ್ ಬರೆದ ಚಂದ್ರಾದಿತ್ಯರ ಬೆಳಗಿ ನೊಳೇೞು ದಿವಸಮಿರೆ ಭಗಳಿದೇಶಾಧೀಶತನೂಜೆಯಪ್ಪ ವಿದರ್ಭೆಗಂ ಸಗ[6]ರಂಗಂ[6] ಪುಟ್ಟಿದ ಭಗೀರಥನಪ್ರತಿರಥ ಸಕಲ ಚಕ್ರವರ್ತಿ ಸ್ಕಂಧಾ[7]ವಾರ[7] ಭಾರದತ್ತಸ್ಕಂಧ ನಾಗಿ ನಿಜಪತಿಯ ವಿರಗಗನಗೋಚರರಥಂಗಳ್ ವಜ್ರದ ಗಿರಿಗಳೇೞುಂ [8]ಬೆರಸು ಮೇಘಮುಖರೊಳ್[8] ಕಾದೆ ಭಗೀರಥನ ವಿಕ್ರಮಗುಣಕ್ಕಂ ಚಕ್ರವರ್ತಿ ಪ್ರತಿಬದ್ಧ ಗಣಬದ್ಧದೇವರ ವಿದ್ಯಾವಿಜೃಂಭಣ[9]ಕ್ಕಮಳ್ಕಿ[9] ಮೇಘಮುಖ[10]ರ್ ಸಂಗರ ಮುಖದೊಳ್[10] ಪರಾಙ್ಮುಖರಾಗೆ ಚಿಲಾತಾವರ್ತ[11]ನರಾತಾವರ್ತನ[11]ಪರಿವರ್ತನಂ ಬಂದು ತಮ್ಮ ಮಗಳ್ದಿರಂ ದಿವ್ಯ ರತ್ನಂಗಳಂ ಮುಂದಿಟ್ಟು ತನ್ನಡಿಗೆಱಗಿಸಿ ಸಂಧಾನಸಂಧಿಯಂ ಮಾಡೆ ಹಿಮವಂತಪರ್ವತದ ಸಿಂಧುಪ್ರಪಾತಮನೆಯ್ದಿ ಸಿಂಧುದೇವಿಯಿಂ ವಿಹಿತಮಂಗಳಾಭಿಷಿಕ್ತನಾಗಿ ಭದ್ರಾಸನಮಂ ಪಡೆದು ಹಿಮವ ತ್ಪರ್ವತದ ಕೂಟದೊಳ್ ಪೂರ್ವಕ್ರಮದೊಳೆ ತ್ರಿರಾತ್ರೋಪವಾಸನಾಗಿ ತದ್ವಿಷಯ ವಾಸಿಗಳಪ್ಪ ನಾಗಯಕ್ಷಾದಿಗಳಂ ಬಂದು ಕಾಣ್ಬುದೆಂದು ನಿಜವಿಜಯ ನಾಮಾಂಕಿತ ಶರದಿಸಿಸೆ ಹಿಮವತ್ಕುಮಾರಾದಿಗಳ್ ಬಂದು ತೀರ್ಥಜಲದಿನಭಿಷೇಕಂ ಮಾಡಿ ಗೋಶೀರ್ಷ ಚಂದನಮುಮಂ ಮಹೌಷಧಿಗಳುಮಂ ಕೊಟ್ಟು ಪೋಗೆ ತೆಂಕ ಮೊಗದೆ ಬಂದುತ್ತರ ಭರತಮಧ್ಯಮಖಂಡಮಧ್ಯವರ್ತಿಯಪ್ಪ ವೃಷಭಾಚಲಮಂ ಕಂಡು [13]ಮನದೆ[13]ಗೊಂಡು ನಿಜವಿಜಯ ಪ್ರಶಸ್ತಿಯನಲ್ಲಿ ಬರೆ[13]ಯಿಸ[13]ಲೆಂದು ಪೋಗಿ ಪುರಾತನ ಚಕ್ರವರ್ತಿಗಳ ದಿಗ್ವಿಜಯ ಕೀರ್ತಿಗಳಂ ಬಾಜಿಸೆ ಕೇಳ್ದು ಗಳಿತಗರ್ವನಾಗಿ

---

1 ದುನಿರ (ಕ) 2 ಮ್ಲೇಂಚ್ಛ (ಟತ) 3 ರಂ (ಗಟಜ) 4 ನೇ (ಚ) 5 ಮಣಿ (ಗಜ) 6 ರಂ (ಗಜ) 7 ವಾರಣ (ಗಚಜ) 8 ಮುಂದಿಟ್ಟು ತನ್ನವಿರೊಳ್ (ಗಚಜ) 9 ಕ್ಕೆ ಮೆಚ್ಚಿ (ಕ) 10 ರೊಳ್ (ಚ) ರೊಳ್ (ಜ) 11 ನ (ಗಚಜ) 12 ಮನಂ (ಗಜ) 13 ಯ (ಗಜ)

ಕೆಱ್ದೆಡೆಯ ದಂಡರತ್ನದಿಂ ತೊಡೆಯಿಸಿ ಕಳೆದು ಭರತೇಶ್ವರಚಕ್ರವರ್ತಿ[1]ಯ ಪ್ರಶಸ್ತಿಯ ಸಮೀಪದೊಳ್ ನಿಜ[1]ಪ್ರಶಸ್ತಿಯಂ ಕಾಕಿಣೀರತ್ನದೊಳ್ ಕವಿರತ್ನನಿಂ ಬರೆಯಿಸಿ ಗಂಗಾದ್ವಾರಕ್ಕೆ ವಂದು ಗಂಗಾದೇವಿಯಿಂದಭಿಷಿಕ್ತನಾಗಿ ಸಿಂಹಾಸನಮಂ ಪಡೆದು ವಿಜಯಾರ್ಧ ಕಾಂಡಕಪ್ರಪಾತ ಗುಹೆಯ ವಜ್ರಕವಾಟಮಂ ದಂಡರತ್ನದಿಂ ಜರ್ಝರೀಕೃತಂ ಮಾಡಿ ಗುಹೆಯ ಬೆಃಕೆಯಾಱುವನ್ನೆಗಂ ಪೂರ್ವದಿಗ್ಭಾಗದೆ ಮ್ಲೇಚ್ಛಖಂಡಮಂ ಬಾಯ್ಕೇಳಿಸಿ ಬರೆ ದಕ್ಷಿಣೋತ್ತರ ಗಿರ್ಯುಭಯಶ್ರೇಣಿಗಳ ದೇಶಾಧೀಶ್ವರರ್ ಕನ್ಯಾರತ್ನಂಗಳಂ ಕೊಟ್ಟು ಅನರ್ಘ್ಯ ರತ್ನಂಗಳಂ ಬೞಿವೞಿಗೊಟ್ಟು ಪೋಗೆ ಮುನ್ನಮೇೞೆಱದಱುದಿಂಗಳಾಱಿದ ಕಾಂಡಕಪ್ರಪಾತಗುಹೆಯಿಂ ಪೊಱಮಡು ವಾಗಳ್ ಗುಹಾಕೂಟಗಿರಿನಿವಾಸಿ ನಾಟ್ಯಮಾಳಾಮರನಿದಿರ್ಗೊಂಡು ಕುಂಡಲದ್ವಯ ವೈಕಕ್ಷಮಾಲೆಗಳಂ ಕುಡೆ ಕೊಂಡು ಪೂರ್ವದಿಗ್ಭಾಗದ ಮ್ಲೇಚ್ಛಖಂಡಮಂ ಬಾಯ್ಕೇಳಿಸಿ ತದ್ವೇದಿಕೆಯ ತೋರಣದ್ವಾರದಿಂ ಪೊಱಮಟ್ಟು ಷಟ್ಖಂಡಮಂಡಲಾಧೀಶ್ವರಂ ಅಱುವತ್ತಾಱುಸಾಸಿರವರ್ಷಂ ದಿಗ್ವಿಜಯಂಗೆಯ್ದು ಸಿದ್ಧದಿಗ್ವಿಜಯನಾಗಿ ಸಮ್ಮೇದ[2]ಮೇದಿನೀಧರಕ್ಕೆ ವಂದು[2] ಸಜ್ಜಾತಿತ್ವಮುಂ ಸುರೇಂದ್ರತ್ವಮುಂ [3]ಸದ್ಗೃಹಸ್ಥಮುಂ ಸಾ[3]ಮ್ರಾಜ್ಯತ್ವಮುಂ ಪರಮಾರ್ಹತ್ವಮುಂ ನಿರ್ವಾಣತ್ವಮುಮೆಂಬ ಸಪ್ತಪರಮಸ್ಥಾನಭಾಗಿಯಾದ ಭಗವದರ್ಹದಜಿತಭಟ್ಟಾರಕನ ಪರಿನಿರ್ವಾಣಕಲ್ಯಾಣ ಪವಿತ್ರಕ್ಷೇತ್ರಮಂ ಕಂಡು ಮೂಱು ಸೂೞ್ ಬಲವಂದು ವಿವಿಧಾರ್ಚನೆಗಳಿಂದರ್ಚಿಸಿ ಕರಕಮಲಮುಕುಳಾಲಂಕೃತಶಿರಸ್ಕನುಮೇಕಾಗ್ರಮನಸ್ಕನುಮಾಗಿ

ಪರಮಶ್ರೀಕುಲಸದ್ಮನಂ ಗುಣಗಣೋಪೇತಂ ಪ್ರಭಾನೂನಕೇ
ಸರಮಾಸಕ್ತ ವಿನೇಯಭೃಂಗನಿಕರಂ ಭಕ್ತಿಪ್ರಣಾಮಾಮರೇ
ಶ್ವರಚಕ್ರೇಶ್ವರ ಪನ್ನಗೇಶ್ವರ ಶಿಖಂಡೋತ್ತಂ ಸಮಸ್ತಂ ಮನ
ಸ್ಸರಸೀಮಧ್ಯದೊಳೊಪ್ಪುತಿರ್ಕಜಿತತೀರ್ಥೇಶಕ್ರಮಾಂಭೋರುಹಂ ೩೫

ಎಂದು ದ್ವಿತೀಯತೀರ್ಥೇಶ್ವರನಂ ದ್ವಿತೀಯ ಚಕ್ರೇಶ್ವರನದ್ವಿತೀಯ ಭಕ್ತಿಯಿಂ ಸ್ತುತಿಯಿಸಿ ಸಿದ್ಧಭಕ್ತಿಯಂ ಶ್ರುತಭಕ್ತಿಯಂ ಚಾರಿತ್ರಭಕ್ತಿಯಂ ಯೋಗಭಕ್ತಿಯಂ ಗೆಯ್ದು ನಿರ್ವಾಣಭಕ್ತಿಯಿಂ ತ್ರಿಃಪ್ರದಕ್ಷಿಣಂಗೆಯ್ದು ಸಿದ್ಧಶೇಷೆಯಂ ಕೊಂಡು ಜಗತ್ಪ್ರಸಿದ್ಧಮಪ್ಪ ಸಮ್ಮೇದಪರ್ವತದೊಳುತ್ತುಂಗತೋರಣಂಗಳುಮಪ್ಪನೇಕ ಚೈತ್ಯಾಲಯಮಂ

1 ಯ (ಕ) 2 ನಗಕ್ಕೆ ವಂದು (ಗಚ) 3 ಸಾ (ಕ)

ಗಳಂ ಸ್ಥಪತಿರತ್ನಂಗಳಿಂ ಮಾಡಿಸಿ ಮಗುಟ್ದಿ ಬಂದು ನಿಜವಿಜಯ ರಾಜಧಾನಿ ಯನಯೋ[1]ಧ್ಯಾಪುರವಂ[1] ಪುಗುವಾಗಳ್

ಮಸೆದಂಗಜನಲರ್ಗಣೆಯವೊ
ಲೆಸೆದೊಪ್ಪುವ ನಿಡಿಯ [2]ಬೆ[2]ಳಿಯ ತುಱುಗೆವೊಗಣ್ ಕ
ಣ್ಗೆಸೆಯೆ ನಡೆ ನೋಡಿದರ್ ಭಾ
ವಿಸಿ ಸಗರನ[3]ನಸಿಯ[3]ಪಸಿಯ ಪೊಸಜವ್ವನೆಯರ್ ೩೬

ಅಗಟ[3]ೊಳಗಬ್ಜಾಕೃತಿಯಿಂ
ಮುಗಿಲಟ್ಟಣೆಯೊಳಗೆ ಚಂದ್ರಬಿಂಬಾಕೃತಿಯಿಂ
ಮೊಗವೊಪ್ಪೆ ಮೀನಲೋಚನೆ
ಮೃಗೇಕ್ಷಣದೆ ಸಗರನೃಪನನಭಿವೀಕ್ಷಿಸಿದಳ್ ೩೭

ಸ್ಖಲಿತಗತಿ ಲುಲಿತಕುಂತಲೆ
ವಲಿತ ನಿಜಗ್ರೀವೆ ಮಗುಟ್ದಿ ನೋಡಿದಳೊರ್ವಳ್
ಗಲಿತಮದೆ ಚಲಿತಮಾನಸೆ
ಲಲಿತಾಂಗನನೊಲ್ದು ಸಗರಚಕ್ರೇಶ್ವರನಂ ೩೮

ವದನಾಬ್ಜಾಸವಗಂಧಲಂಪಟರಟದ್ಭೃಂಗಂಗಳಂ ಸೋ[4]ವ[4]ಲೆ
ತ್ತಿದ ನೀಲೋತ್ಪಲಮಾಲೆಯಂ ದ್ವಿಗುಣಿಸಲ್ಕಾರ್ತತ್ತು ಕರ್ಣಾಂತಗಾ
ಮಿದಳತ್ಪಂಕಜಪತ್ರಶೋಭಿ ಕುಮುದ ಜ್ಯೋತ್ಸ್ನಾವದಾತಪ್ರಭಂ
ಮದನೋತ್ತೇಜಿತಬಾಣವಿಭ್ರಮಮಪಾಂಗಾಲೋಕನಂ ನಲ್ಲಳಾ ೩೯

ಅಂತು ನಗರಜನ ನಾರೀಜನವಿಲಾಸಮುಮಂ ನಗರಮುಮನೊಡನೊಡನೆ ಪೊಕ್ಕು ಪುರಜನಂಗಳ್ ಪಾದಾಭಿಷೇಕಂಗೆಯ್ಯೆ ಮೂರ್ಧಾಭಿಷಿಕ್ತಮಹಾಕ್ಷತ್ರಿಯರಿಂ ಸಾರ್ವಭೌಮರಾಜ್ಯಾಭಿಷಿಕ್ತನುಂ ಮಹೋತ್ತುಂಗ ಸಿಂಹಾಸನಾಸೀನನುಮಾಗಿ

ಧರಣೀಚಕ್ರಂ [5]ಪ್ರಪಾತ[5]ಕ್ಕಗಿಯೆ ಸಕಲ ದಿಕ್ಚಕ್ರಮಲ್ಲಾಡೆ ವಿದ್ಯಾ
ಧರಚಕ್ರಂ ಜೀಯ ದೇವೆಂದಡಿಗೆಱಗೆ ಜಗಚ್ಚಕ್ರದೊಳ್ ಕೀರ್ತಿಯಂ ಬಿ

1 ಧ್ಯೆಯಂ (ಗಜ) 2 ಬಿ (ಕ) ಬೆ (ಚ) 3 ಸಿರಿಯ (ಗಜ) 4 ಯ (ಕಗಜ)
5 ವಿಪ್ರವಾಳ (ಚ)

ತ್ತ್ರರಿಸುತ್ತುಂ ಚಕ್ರವರ್ತಿಪ್ರಥಿತ ಭುವನಸಾಮ್ರಾಜ್ಯಮಂ ತಾಳ್ದಿ ಜಾತಾ
ದರದಿಂದಂ ಚಕ್ರಪೂಜಾಪರಿಕರವಿಧಿಯಂ ಮಾಡಿದಂ ಚಕ್ರನಾಥಂ ೪೦

ಇದು ಸಕಲ ಮುನೀಂದ್ರವೃಂದ ವೃಂದಾರಕ ಶ್ರೀಮದಜಿತಸೇನಭಟ್ಟಾರಕ ಶ್ರೀಪಾದಪದ್ಮಪ್ರಸಾದಾಸಾದಿತ ರತ್ನತ್ರಯಾಲಂಕೃತ ಶ್ರೀಮದಭಿನವ ಕವಿಚಕ್ರವರ್ತಿ ಕವಿರತ್ನ [1]ವಿರಚಿತ[1] ಶ್ರೀದಾನಚಿಂತಾಮಣಿ [2]ನಿ[2]ರ್ಮಾಪಿತ ಶ್ರೀಮದಜಿತ ತೀರ್ಥಕರ ಪುರಾಣತಿಲಕದೊಳ್

## ದಿಗ್ವಿಜಯ ವರ್ಣನಂ

### ನವಮಾಶ್ವಾಸಂ



1 ನಿರ್ಮಿತ (ಗಚಜ) 2 ವಿನಿ (ಟತ)

# ದಶಮಾಶ್ವಾಸಂ

ಶ್ರೀಮಹಿತ ಧರ್ಮಚಕ್ರ
ಸ್ವಾಮಿ ಜಗಚ್ಚಕ್ರವಲ್ಲಭಂ ತ್ರಿಭುವನಚೂ
ಡಾಮಣಿ ಮಾಣ್ಕಿಜಿತಂ ಸುಖ
ಧಾಮಕನಕಳಂಕ ಚರಿತನಪಗತದುರಿತಂ ೧

ಎಂದಜಿತನಾಥಂಗೆ ನಮಸ್ಕಾರಂಗೆಯ್ದು ಜಿನಪೂಜೆಯು[1]ಮಂ ಚಕ್ರಪೂಜೆಯುಮಂ[1] ಮಾಡಿ ಸಗರಚಕ್ರೇಶ್ವರಂ ಗ್ರಾಮ ನಗರ ಖೇಡ ಖರ್ವಡ ಮಡಂಬ [2]ಪತ್ತನ[2] ದ್ರೋಣಾಮುಖ ಸಂವಾಹ[3]ನ[3] ವಜ್ರಸ್ಥಾನೀಯ ಪ್ರಮುಖ ತ್ರಿಮಾನವ [4]ಲಾಟ[4] ತಸ್ಸಗೌಡ ಮಹಾರಾಷ್ಟ್ರಾದ್ಯಷ್ಟಾದಶ ವಿಷಯ ಭಾಷಾಸಮನ್ವಿತನಪರಿವೃತ ಷಟ್ಖಂಡ[5]ಭ[5]ರಿತಮಪ್ಪ ಭರತಮಂ ಭರತನಂತೇಕಚ್ಛತ್ರಚ್ಛಾಯಾಯತ್ತಮುಮಂ ಆಜ್ಞಾವಿಧೇಯ[6]ಮುಮಂ[6] ಮಾಡಿ ವಜ್ರವೃಷಭನಾರಾಚಸಂಹ[7]ನನುಂ ಚರಮ[7] ಶರೀರನುಂ ಸಮಚತುರಸ್ರ[8]ಶರೀರಸಂ[8]ಸ್ಥಾನನುಂ ಚತುಷ್ಟಯಲಕ್ಷಣಧರನುಂ ಅನೇಕ ವ್ಯಂಜನಾಲಂಕೃತನುಂ ಅನಂತವೀರ್ಯನುಂ ಅಪ್ರತಿಹತಶಾಸನನು[9]ಮಾಗಿ ಮೂವತ್ತಿಚ್ಛಾಸಿರ ಜನಪದಂಗಳಿಂ[9] ಮೂವತ್ತಿಚ್ಛಾಸಿರ [10]ಮಹಾಮ[10]ಕುಟಬದ್ಧರಿಂ ಮೂವತ್ತಿಚ್ಛಾಸಿರರ್ ವಿದ್ಯಾಧರದೇವಿಯರಿಂ ಮೂವತ್ತಿಚ್ಛಾಸಿರ್ವರ್ ಜನಪದ ಕಲ್ಯಾಣರಿಂ ಮೂವತ್ತಿಚ್ಛಾಸಿರ್ವರ್ ಕಲ್ಯಾಣೆಯರಿನಂತು ತೊಂಬತ್ತಱುಸಾಸಿರ ಮಂತಃಪುರಂಗಳಿಂ ಮೂವತ್ತಿಚ್ಛಾಸಿರ ಗೀತನಾಟ್ಯಶಾಲೆಗಳಿಂ ಎಪ್ಪತ್ತುಸಾಸಿರ ಪುರಂಗಳಿಂ ತೊಂಬತ್ತಾಱು ಕೋಟಿ ಗ್ರಾಮಂಗಳಿಂ ತೊಂಬತ್ತೈಸಾಸಿರ ದ್ರೋಣಾಮುಖಂಗಳಿಂ ನಾಲ್ವತ್ತೆಣ್ಸಾಸಿರ ಪಟ್ಟಣಂಗಳಿಂ ಪದಿನಾಱುಸಾಸಿರ ಖೇಡಂಗಳಿಂ [1]ಐವತ್ತಾಱು ಅಂತರದ್ವೀಪಂಗಳಿಂ ಪದಿ[11]ನಾಲ್ಸಾಸಿರ ಸಂವಾಹನಂಗಳಿಂ ಅನೇಕ ಕೋಟಿ ಪ್ರಮಾಣ ಸ್ಥಾಳಿಗಳನೊಂದು ಲಕ್ಕೆ ಕೋಟಿ ಧೇನುಗಳಿಂ ಮೂಱು ಕೋಟಿ ಗೋಮಂಡಲಂಗಳಿಂ [12]ಎಪ್ಪತ್ತೆಂಟು ಸಾಸಿರಂ ಏ[13]ಳ್ನೂಱು ಕುಕ್ಷಿನಿವಾಸಂಗಳೆ ನೆಪ್ಪತ್ತೆಣ್ಛಾಸಿರ ದುರ್ಗಾದಿಗಳಿಂ ಪದಿನಾ[13]ಱು[13] ಸಾಸಿರ್ವರ್ ಮ್ಲೇಚ್ಛರಾಜರಿಂ

---

1 ಮಂ (ಗಜ) 2 ಪಟ್ಟಣ (ಕ) 3 ಕ (ಕಟ) 4 ಲಾಟವ (ಕ) 5 ಚ (ಜ)
6 ತ್ವಮುಂ (ಟ) 7 ನ (ಕ) 8 ಸಂ (ಗಜ) 9 ಮಾಗಿ (ಚಜ) 10 ಮ (ಚಜ)
11 ಪದಿ (ಗಚಕಜ) 12 ಏ (ಕಚಕ) 13 ಲ್ (ಕಚ)

ಎಂಬತ್ತುನಾಲ್ಕು ಲಕ್ಕೆ ಭದ್ರಹಸ್ತಿಗಳಿಂ [1]ಅನಿತೆ ರಥಂಗಳಿಂ ಪದಿ[1]ನೆಂಟು ಕೋಟಿ ಜಾತ್ಯಶ್ವಂಗಳಿಂ ಎಂಬತ್ತುನಾಲ್ಕು ಕೋಟಿ ಪದಾತಿಬಲಂಗಳಿಂ ನೆಱೆದ ಸಾಮ್ರಾಜ್ಯ ಲಕ್ಷ್ಮೀಗಧಿಪತಿಯಾಗಿ ಮತ್ತಂ ಲೌಕಿಕ ವಾರ್ತಾನಿರ್ವರ್ತನಮಪ್ಪ ಪಲವುಂ [2]ಶೆಱದ ಪಱೆ[2]ಗಳುಂ ಷಟ್ಕರ್ಮಸಾಧನಮಪ್ಪ ವಸ್ತುಗಳಿಂ ದಿವ್ಯಶಯ್ಯಾಸನ ನಾನಾ ಸದನಂಗಳುಮಂ ಗೋಧೂಮಾದಿ ಧಾನ್ಯಘೃತಾದಿ ರಸಂಗಳುಮಂ ದುಕೂಲಾದಿ ವಿಚಿತ್ರ ವಸ್ತ್ರವಿಶೇಷಂಗಳ ಮಂ ಸ್ತ್ರೀಪುರುಷಯೋಗ್ಯ ವಿವಿಧಾಭರಣಂಗಳುಮನಾರ್ ಕೊಳ್ವೊಡಂ ತಡೆಯದ ಕನಕರಾಶಿಯುಮಂ ಪದ್ಮರಾಗ ಮರಕತ ವಜ್ರ ಮುಕ್ತಾಫಲ ರತ್ನಂಗಳುಮನನುಕ್ರಮದಿಂ ಶ್ರೀಗೃಹದೊಳ್ ಪುಟ್ಟೆ ಕುಡುವ ಕಾಳ ಮಹಾಕಾಳ ನೈಸರ್ಪ[3]ಪಾಂ[3]ಡುಕ ಪದ್ಮ ಪಿಂಗಳಕ ಮಾಳವಕ ಶಂಖ ಸರ್ವರತ್ನಮೆಂಬ ನವನಿಧಿಗಳುಂ ಆಯುಧಶಾಲೆಯೊಳ್ ಪುಟ್ಟಿದ ಚಕ್ರಾಸಿದಂಡ ಛತ್ರರತ್ನಂಗಳುಂ ಶ್ರೀಗೃಹದೊಳ್ ಪುಟ್ಟಿದ ಮಣಿಚರ್ಮಕಾಕಿಣೀರತ್ನಂಗಳುಂ ವಿಜಯಾರ್ಧದೊಳ್ ಪುಟ್ಟಿದ ಗಜಾಶ್ವ ಸ್ತ್ರೀರತ್ನಮುಮನಯೋಧ್ಯೆಯೊಳ್ ಪುಟ್ಟಿದ ಸೇನಾಪತಿ ಗೃಹಪತಿ ಸ್ಥಪತಿ ಪುರೋಹಿತ ರತ್ನಂಗಳುಮಂತು ಪದಿನಾಲ್ಕು [4]ಜೀವಾಜೀವ[4] ರತ್ನಂಗಳುಂ ಪದಿನಾಱು ಸಾಸಿರ್ವರ್ ಗಣಬದ್ಧದೇವರುಂ ಕ್ಷಿತಿಸಾಗರಮೆಂಬ ಮಹಾಪ್ರಾಕಾರಮುಂ ಸರ್ವತೋಭದ್ರಮೆಂಬ ಗೋಪುರಮುಂ ನಂದ್ಯಾವರ್ತಮೆಂಬ ಶಿಬಿರನಿವೇಶಮುಂ ವೈಜಯಂತಿಯೆಂಬ ಮಹಾ ಪ್ರಾಸಾದಮುಂ ದಿಕ್‌ಸ್ವಸ್ತಿಕಮೆಂಬ ಸುಧಾಭೂಮಿಯುಂ ಸುವಿಧೆಯೆಂಬ ಚಕ್ರ ಮುಮಮಾಯಷ್ಟಿಯುಂ ಗಿರಿಕೂಟಮುಮೆಂಬ ದಿಗವಲೋಕನಗೃಹಮುಂ ವರ್ಧ ಮಾನಮುಮೆಂಬ ಮಹಾಪ್ರೇಕ್ಷಾಗೃಹಮುಂ ಮಹಾಘರ್ಮಾಂತಮೆಂಬ ಧಾರಾ ಗೃಹಮುಂ ಗೃಹಕೂಟಮೆಂಬ ವರ್ಷಾವಾಸಮುಂ ಪುಷ್ಕರವತಿಯುಮೆಂಬ ಶಯನ ಸದನಮುಂ ಕುಬೇರಕಾಂತಮೆಂಬ ಭಂಡಾರಮುಂ ವಸುಧಾಗಾರಮೆಂಬ ಕೋಷ್ಠಾ ಗಾರಮುಂ ಜೀಮೂತಮೆಂಬ ಮಜ್ಜನಗೃಹಮುಂ ರತ್ನಮಾಲೆಯುಮೆಂಬ ವಸಂತಿಕೆಯುಂ ದೇವರಮ್ಯಮೆಂಬ ಪಟಕುಟಿಯುಂ ಮಹಾಮಹಿಮೆಯೆಂಬ ಶಯ್ಯೆಯುಂ ಅನುತ್ತರಮೆಂಬ ಸಿಂಹಾಸನಮುಂ ಯಕ್ಷಕರವಿಧೂಯಮಾನಂಗಳಪ್ಪ ನುಪಮಂಗಳೆಂಬ ಮೂವತ್ತೆರಡುಂ ಚಾಮರಂಗಳುಂ ವಿದ್ಯುತ್ಪ್ರಭಮೆಂಬ ಮಣಿ ಕುಂಡಲಮುಂ ವಿಷಮೂಷಿಕೆಗಳೆಂಬ ಪಾವುಗೆಗಳುಂ ಅಭೇದ್ಯಮೆಂಬ ಕವಚಮುಂ ಅಜಿತಂಜಯಮೆಂಬ ರಥಮುಂ ಕೋದಂಡಮೆಂಬ ಚಾಪಮುಮಮೋಘಮೆಂಬ ಶರಮುಂ ವಜ್ರದಂತಮೆಂಬ ಶಕ್ತಿಯುಂ ಶೃಂಗಾರಮೆಂಬ ಕೊಂತಮುಂ ಲೋಹ ವಾಹಿನಿಯೆಂಬ ಸುರಿಗೆಯುಂ ಮನೋವೇಗಮೆಂಬ ಕಣೆಯುಂ ಭೂತಮುಖಮೆಂಬ

---

1 ಪದಿ (ಗಘಜ) 2 ಪಣೆ (ಗಜ) 3 ಪಾಂ (ಘಜ) 4 ಜೀವ (ಗಘಜ)

ಖೇಟಕಮುಂ ಸುದರ್ಶನಮೆಂಬ ಚಕ್ರರತ್ನ[1]ಮುಂ ಚಂಡವೇಗಮೆಂಬ ದಂಡರತ್ನಮುಂ[1] ವಜ್ರಮಯಮೆಂಬ ಚರ್ಮರತ್ನಮುಂ ಚೂಡಾಮಣಿಯೆಂಬ ಮಣಿರತ್ನಮುಂ ಚಿಂತಾ ಮಣಿಯೆಂಬ ಕಾಕಿಣೀರತ್ನಮುಂ ಸೂರ್ಯರತ್ನಮೆಂಬ ಛತ್ರರತ್ನಮುಂ ನಂದಕಮೆಂಬ ಖಡ್ಗರತ್ನಮುಂ ಅಯೋಧ್ಯ[2]ನೆಂಬ[2] ಸೇನಾಪತಿಯುಂ ಬುದ್ಧಿಸಾಗರನುಮೆಂಬ ಪುರೋಹಿತನುಂ ಕಾಮವೃಷ್ಟಿಯೆಂಬ ಗೃಹಪತಿಯುಂ ಭದ್ರಮುಖಮೆಂಬ ಸ್ಥಪತಿಯುಂ ವಿಜಯಪರ್ವತಮೆಂಬ ಗಜಮುಂ ಪವನಂಜಯಮೆಂಬ ವಾಜಿಯುಂ ಸುಭದ್ರೆಯೆಂಬ ಸ್ತ್ರೀರತ್ನಮುಂ ದ್ವಾದಶಯೋಜನನಂಬರಮೆಸೆವ ವಾನಂ[3]ದಿ[3]ಗಳೆಂಬ ಪನ್ನೆರಡುಂ ಭೇರಿ ಗಳುಂ ಅನಿತೆ ವಿಜಯಘೋಷಮೆಂಬ ಪಟಹಂಗಳುಂ ಗಂಭೀರಾವರ್ತನಂಗಳೆಂಬ ಪ್ಪತ್ತ್ತನಾಲ್ಕುಂ ಶಂಖಂಗಳುಂ ನಾಲ್ವತ್ತೆಂಟುಕೋಟಿ ಪತಾಕೆಗಳುಂ *ವೀರಾಂಗ ದಂಗಳೆಂಬ ಹಸ್ತಕಟಕಂಗಳುಂ ಗೋದಿವ್ಯಾಹಾರಮುಮಮೃತರೂಪಂಗಳೆಂಬ ಭಕ್ಷ್ಯ ಸ್ವರೂಪಂಗಳುಂ ಅಮೃತಕಲ್ಪಮೆಂಬ ಸ್ವಾದುವುಂ ಅಮೃತಮೆಂಬ ಪಾನಮುಂ* ಮುನ್ನೂಱುಱುವರ್ ಶರೀರವೈದ್ಯರುಮಱುವತ್ತುಸಾಸಿರ್ವರ್ ಮಕ್ಕಳುಂಬೆರಸಿಂತು ಸಕಲ ಚಕ್ರವರ್ತಿ ಸಾಮ್ರಾಜ್ಯಪರಿಕರಪ[4]ರಿವೃ[4]ತನಾಗಿ

> ದಿವ್ಯಂ ಪುರಂ ರತ್ನಮಯೋನಿಧಿಶ್ಚ
> ದಿವ್ಯಾಂಬರಾಚ್ಛಾದನ ಭಾಜನೇ ಚ
> ದಿವ್ಯಾನಿ ಶಯ್ಯಾಸನವಾಹನಾನಿ
> ದಿವ್ಯಾನಿಮಾಂಶ್ಚಾರ್ಥ ದಶಾಂಗಭೋಗಾಃ ೨

ಎಂಬೀ ದಶಾಂಗಭೋಗದೊಳ್ ಕೂಡಿ ಸುಖಮಿರ್ದೊಂದು ದಿವಸಂ ತನ್ನ ಪೊಱಲ ಸಿದ್ಧವನದೊಳ್ ಶ್ರೀಭಟ್ಟಾರಕರ್ ಚತುರ್ಮುಖಪ್ರತಿಮಾಯೋಗಧಾರಿಗಳ್ ಉತ್ಪನ್ನ ಕೇವಳಜ್ಞಾನಿಗಳಾಗಿರ್ದರೆಂಬುದಂ ವನಪಾಲಕನಿಂ ಕೇಳ್ದು ಸಕಲ ಮಹೀಪಾಲ ಸಮುದಿತ ಧರ್ಮಾನುರಾಗದಿಂದಾನಂದಭೇರಿಯಂ ಪೊಯ್ಸಿ ಮಹಾ ಸಾಮಂತ ಮಂಡಳಿಕ ಮಕುಟಬದ್ಧಾದಿಗಳ್ ಷಣ್ಣವತಿಸಹಸ್ರಾಂತಃಪುರಮುಮ ಱುವತ್ತು ಸಾಸಿರ್ವರ್ ಮಕ್ಕಳುಂ [5]ಶ್ರೇಷ್ಠಿ[5]ಸೇನಾಪತಿ ತಳವಱ ದಂಡನಾಯಕ ಪ್ರಭೃತಿಗಳುಂ ಹಸ್ತ್ಯಶ್ವ ರಥಪದಾತಿಗಳುಂ ಬೆರಸು ವಿಭೂತಿಯಿಂ ಬಂದು ವಾಹನಂ ಗಳಿಂದಿೞಿದು ಮುನ್ನೆ ಬಂದಿರ್ದ ಚತುರ್ನಿಕಾಯಾಮರಜನದೊಡನೆ ವಿವಿಧಾರ್ಚನೆ

1 ಮುಂ (ಗಚಜ) 2 ಯುಮೆಂಬ (ಕ) ಯಮೆಂಬ (ಗಚಜ) 3 ದಿನಿ (ಕಚಜ)
4 ರಮಿ (ಕ) ೦೯ (ಗಚಜ) 5 ಶ್ರೇಷ್ಠ (ಗಚ)
*—* 'ಚ' ಪ್ರತಿಯಲ್ಲಿಲ್ಲ

ಗಳಿಂದರ್ಚಿಸಿ ವಿವಿಧ ಸ್ತುತಿಶತಂಗಳಿಂ ಸ್ತುತಿಯಿಸಿ ಕುಳ್ಳಿರ್ದು ಧರ್ಮಾವತಂಸಾಲಂ ಕೃತಕರ್ಣನಾಗಿರ್ಪಿನಮಲ್ಲಿಗಮರನಿಕಾಯದೊಡನೆ ಬಂದಾರಣಕಲ್ಪದ ಮಣಿಕೇತು ದೇವಂ ಬೆಸಸಿಮೆನ್ನ ಕೆಳೆಯಂ ಜಯಸೇನಚರನಪ್ಪ ಮಹಾಬಲನೆಲ್ಲಿ ಪುಟ್ಟಿದನೆಂಬುದು ಮಾಯಿರ್ದನೆ ಸಗರಚಕ್ರವರ್ತಿಯೆಂದು ಭಟ್ಟಾರಕರ್ ಬೆಸಸೆ ಸಗರನೊಳ್ ಸಂಭಾಷಣಂಗೆಯ್ದು ದಿವ್ಯಾಂಬರಭೂಷಣಂಗಳಿಂ ಪೂಜಿಸಿ

ಭೂತಳವಲ್ಲಭ ರಿಪು[1]ಲಯ[1]
ಕೇತು ಜನಾನಂದಹೇತು ಧರ್ಮೋದಸ್ವ
ತ್ಸೇತು ಭವತ್ಸಖನೆಂ ಮಣಿ
ಕೇತುವನೇನಱಿವೊ ನೀಂ ಮಹಾಬಲಚರನೈ ೩

ತ್ರಿದಶನಿವಾಸದೊಳ್ ನೆನೆವುದಿಷ್ಟವಮುಮಾದರದಿಂ ವ್ಯವಸ್ಥೆಮಾ
ಡಿದುದನಪಾರ ಸಂಸರಣಪಾರಮನೆಯ್ದುವುದೆಂಬೊಡಂತರಂ
ಗದೊಳದನಾ ನೃಪಂ ನೆನೆದುಮಾಱನೆ ಷಷ್ಟಿಸಹಸ್ರಪುತ್ರಮೋ
ಹದೆ ನಿಜರಾಜ್ಯಮಂ ತೊಱೆಯಲಾರ್ ಗೆಲಲಾರ್ಪರೊ ಮೋಹರಾಜನಂ ೪

ಅಂತಾತನನೆಂತುಮೊಡಂಬಡಿಸಲಾಱದೆ ದಿವಿಜಂ ನಿಜನಿವಾಸಕ್ಕೆ ಪೋಗಿ ಅನೇಕ ಸಂವತ್ಸರಂಗಳಳುಪಿ ಪೋಗುತ್ತಿರೆ ಮತ್ತಮೊಂದುದಿವಸಮಾರಣಕಲ್ಪದಿಂ ಚಾರಣ ಋಷಿರೂಪಿಂದೆ ಮಣಿಕೇತು[2] ಬಂದಾ ಪೊಬಿಲ ಜಿನಾಲಯದ ಮಂಡಪದೊಳಿರ್ಪುದುಂ ಸಗರಚಕ್ರವರ್ತಿ ವಂದನಾಭಕ್ತಿಯಿಂ ಬಂದು ಬಂದಿಸಿ ಆ ಚಾರಣರಂ ನಿಮ್ಮ ತಪಂಬಟ್ಟ ಕಾರಣಮೇನೆಂದು ಬೆಸಗೊಳೆ ಜಾತಿಜರಾಮರಣಾನಿಷ್ಟಸಂಯೋಗಮಿಷ್ಟವಿಯೋಗ ಸಹಜ ಸಮುದ್ಭವ ಶಾರೀರ ಮಾನಸಾಗಂತುಕ ದುಃಖದಿಂ ಪತ್ತುವಿಟ್ಟನಂತ ಚತುಷ್ಟಯಮಂ ಪೊರ್ದಲೆಂದು ತಪಂಬಟ್ಟೆನೆಂದಱಿಪಿ ಕಿಱಿದುಂ ಬೇಗದಿಂ [3]ತನ್ನ[3] ದಿವ್ಯಸ್ವರೂಪಮಂ ತೋಱಿ [4]ಮತ್ತಂ[4] ಕೃತಪ್ರತಿಜ್ಞೆಯಂ ತೋಱಿ ನುಡಿದು

ಅಳವಿ[5]ಯಿನಿಂ[5]ತನಂತಸುಖನಂತ[6]ಜ[6]ರಾಮರನಂತೆ ಮುಕ್ತಿಹೇ
ತುವನಘಕೇತುವಂ ಪರಮದೀಕ್ಷೆಯನೊಲ್ಲದೆ ರಾಜ್ಯಮೋಹದಿಂ

---

1 ಜಯ (ಚ) 2 [illegible] (ಗಜ) 3 [illegible] (ಗಜ) 4 ಮತ್ತಂ ತಂತಮ್ಮ (ಜ)
5 ಯನಂ (ಗಜ) 6 ಚಿ (ಗಜ)

ಭವಜಲರಾಶಿಯೊಳ್ ಮುೞುಗಲೞ್ತಿಯೆ ಚರ್ವಿತಚರ್ವಣಕ್ಕೆ ನೀ
ನವಚಱ ಬೇಡ ಸಾಲದೆ ಭವಾನುಭವಂ ಸಗರಾವನೀಶ್ವರಾ ೫

ಕಡುಚಪಲನಿವಂ ತನಗೇ
ಗಿಡುಗುವೋ ಪರದುಃಖಶೀತಲಂ ಮೆಚ್ಚಿದವೋಲ್
ನುಡಿದಪನೆನ್ನದಿರೆನ್ನೀ
ನುಡಿ ನಿನಗೆ ಹಿತಾರ್ಥಮೆಂದೆ ಬಗೆ ಗಡ ನೃಪತೀ ೬

ಎಂದೊಡಂ ರಾಜ್ಯಮೋಹದೊಳಂ ಪುತ್ರಸ್ನೇಹದೊಳಂ ತನ್ನ ನುಡಿಗೊಡಂಬಡ ದನಿತಱೊಳೆ ಮಣಿಕೇತುವಾತನ ವೈರಾಗ್ಯಹೇತುವನವಧಾರಿಸಿ

ಆ ಜಯಸೇನನಾದ ಭವದೊಳ್ ರತಿಷೇಣವಿಯೋಗದೊಳ್ ಮಹಾ
ರಾಜವಿಭೂತಿಯಂ ತೊಱೆದ[1]ನಿ[1]ಲ್ಲಿಯುಮಂತೆ ಸುತವ್ಯಪಾಯಮಂ
ಯೋಜಿಸೆ ರಾಜ್ಯಮಂ ತೊಱೆಗುಮೆಂದಱಿದಾ ಮಣಿಕೇತು ಚಿತ್ರಪಂ
ಕೇಜದೊಳೊಂದುಪಾಯ ಮಕರಂದಮನಿಟ್ಟೊಸೆದಿರ್ದನಿರ್ಪಿನಂ ೭

ಅಂತನೇಕ ಸಂವತ್ಸರಂ ಕೞಿಪುತಿರಲೊಂದು ದಿವಸಮಱುವತ್ತು ಸಾಸಿರ್ವರ್ ಕುಮಾರರುಂ ತಮ್ಮಯ್ಯನನೋಲಗಿಸಲ್ ಬಂದು ಕಿಱಿದುಬೇಗಮೋಲಗಿಸುತಿರ್ದು ಬೀಡಿಂಗೆ ಪೋಗಿಮೆನೆ

ಬೆಸನಂ ಬೆಸಸೆನೆ ಸಗರಂ
ಬೆಸನೇಂ ಮಕ್ಕಳಿರ ನಿಮಗಮೆಂದಿಂತೀಗಳ್
ಬೆಸಕೆಯ್ವುದರುಮನೆನಗಂ
ಬೆಸಕೆಯ್ಸಲ್ ಚಕ್ರರತ್ನಮಿರ್ದಪುದಲ್ತೇ ೮

ನೀಮಿನಿಬರುಮೆನ್ನೊಡನೆ ಸಾಮ್ರಾಜ್ಯಸುಖಮನನುಭವಿಸು[3]ತ್ತಿರ್ದಪು[3]ದಿದುವೆ [3]ಬೆ[3]ಸನೆಂಬುದುಮಾಗ್ರಹಬುದ್ಧಿಗಳಾಗಿ

1 ನೆ (ಗಚಜ) 2 ತ್ತಿರ್ದ (ಅ) 3 [illegible] (ಅ) 3 [illegible] (ಗಚಜ)

ಶರಣೆಂದಾರ್ ಬಂದೊಡಂ ಕಾಯಲುಮೆರೆದವರ್ಗಾರ್ತಿಯಲುಂ ಮಾಡಿದಂ
ತೋ
ಳೆರಡಂ ಧಾತ್ರಂ ಜನಕ್ಕಂತೆರಡು ಗುಣಮುಮಿಲ್ಲೆಂಬಿನಂ ಬರ್ದುಂಕಿರ್ದಂ
ನರಕಾವಾಸಂಗಳೊಳ್ ದುರ್ಯಶಕೆ ಗುಱಿಯುಮಾಗಿರ್ದನೀಯುಕ್ತಿ ಮೆಯ್ವೆ
ತ್ತಿರೆ ಬರ್ದೆ[1]ಬ[1]ರ್ದೆಮೇಗೆಯ್ದುಪುವೆಮಗೆ ವೃಥಾ ಮಾನದೋರ್ದಂಡಷಂಡಂ ೯

ಕುಲಮದವೊಂದು ಜಾತಿಮದವೊಂದು ವಯೋಮದವೊಂದು ಸಂದದೋ
ರ್ಬಲಮದವೊಂದು ರಾಜ್ಯಮದವೊಂದಿನಿ[3]ತುಂ ಮದ[3]ಮೆಯ್ದೆ ಕೂಡೆ[3]ಜಾ[3]
ವಲಿಸೆ ಮದೋದ್ಧತರ್ಕಳಿರಲಾಱದೆ ಪೇೞ್ ಬೆಸನಾವುದೆಂದು ಭೂ
ತಲಪತಿಯಂ ಕದರ್ಥಿಸಿದರಂಕದ ಷಷ್ಟಿಸಹಸ್ರನಂದನರ್ ೧೦

ಅಂತು ನಿಚ್ಚ ನಿಚ್ಚಂ ಕದರ್ಥಿಸೆ ನೀಮಿಂತು ಬೆಸಕೆಯ್ದಲ್ಲದಿರಿರಪ್ಪೊಡೆ ಕೈಲಾಸ ಪರ್ವತದೊಳ್ ಪ್ರಥಮತೀರ್ಥೇಶ್ವರ ತನೂಭವಂ ಪ್ರಥಮ ಚಕ್ರೇಶ್ವರಂ ಭರತರಾಜಂ ಅನೇಕ ರತ್ನಮಯ ಪ್ರತಿಮೆಗಳಂ ಮಾಡಿಸಿದವಕ್ಕೆ ನಿಮ್ಮ ಬಲ್ಲಂದದೆ ಭೂಮಿಗೋಚರರ್ಗಗೋಚರರಪ್ಪಂತು ಕಾಪಂ ಮಾೞ್ಪುದೆನೆ ಮಹಾಪ್ರಸಾದಮಂತೆಗೆಯ್ವೆಮೆಂದು ಬೆಸನಂ ಬೇಡಿಕೊಂಡು ಬೀೞ್ಕೊಂಡು ಪೋಗಿ ದಿಕ್ಕರಿಕರಾಕಾರ ಭುಜದಂಡ ದೋರ್ದಂಡರತ್ನದಿಂ ಕೈಲಾಸಮಂ ಬಳಸೆಯುಮಗೞ್ಗಳುಮಂ ಮಾಡುತ್ತಿರ್ಪನ್ನೆಗಂ ಮಣಿಕೇತುಮಿಂತೆಂದು ಬಗೆದಂ ಹಿತಪ್ರಿಯಮುಮಹಿತಪ್ರಿಯಮುಂ ಹಿತಾಹಿತ ಪ್ರಿಯಮುಮಹಿತಾಹಿತಪ್ರಿಯಮುಮೆಂಬ ಚತುರ್ವಿಧಕ್ರಮದೊಳ್ ಕಡೆಯೆರಡುಮಂ ಪತ್ತುವಿಟ್ಟು ಮೊದಲೆರಡುಮನನುರಕ್ತರಪ್ಪರೊಳ್ ಗುರು ಮಂತ್ರಿ ಸಹಾಯಜನಂಗಳ್ಗೆ ನೆಗೞ್ವೇಳ್ಕುಮದಱಿಂ ಮದೀಯ ಪ್ರಿಯವಯಸ್ಯನೊಳತಿರಹಸ್ಯದಿನಪ್ರಿಯ ಮಾಗಿಯುಂ ಹಿತಮಪ್ಪುದಂ ನೆಗೞ್ವೆನೆಂದು ವಿಷದೃಷ್ಟಿ ವಿಷೋರಗಸ್ವರೂಪದಿಂ ಸಗರನಱುವತ್ತು ಸಾಸಿರ್ವರ್ ಮಕ್ಕಳುಮನೊಡನೆ ಕೃತಕದಿಂ ಭಸ್ಮಾವಲೇಪನಮಾಗಿ ಮಾಡಿ ಭಗೀರಥನೊರ್ವನುಮಂ ವಾರ್ತಾ ನಿವೇದನಾರ್ಥಂ ಕಾದುೞಿಪಿ ಕೃತಕ ಧರಾಮರವೇಷಧರನಾಗಿ [4]ಮಣಿಕೇತು ಅಯೋಧ್ಯೆಗೆ ಬಂದು[4]

ಅವಿಧಾ ಪಾರ್ವನನೊರ್ವನುಳ್ಳ ಮಗನಂ ನಿಷ್ಕಾರಣಂ ನಿರ್ಘೃಣಂ
ಜವನೊಯ್ದಂ ಸಕಲಾವನೀವಲಯಮಂ ಕಾವೀನೃಪಂ ಮತ್ತ[5]ನೂ[5]

1 ವ (ಕಗಚಜ) 2 ತಲ್ಲದೆ (ಗಜ) 3 ಚಾ (ಕಟ) 4 ಬಂದು (ಕ) 5 ಮಾ (ಗಚ)

ಭವನಂ ತಂದೆನಗೀಯವೇೞ್ಪುದವನಂ ತಂದೀಯದಂದಾನುಮಿ
ಲ್ಲಿ ವಿಮುಕ್ತಾಸುವೆನಪ್ಪೆನೆಂದೊದಱಿದಂ ರಾಜಾಲಯದ್ವಾರದೊಳ್ ೧೧

ಅಂತು ಕೆಯ್ಯ ತೊವಲ್ವೆರಸು [1]ಮೆಯ್ಯಱಿಯದೆ ಪುಯ್ಯ[1]ಲಿಡುವ ಪಾರ್ವನ ಪುಯ್ಯಲನಾಸ್ಥಾನಮಂಟಪದೊಳೋಲಗಂಗೊಟ್ಟಿರ್ದರಸಂ ಕೇಳ್ದಿನ್ನೆವರಮೆನ್ನ ರಾಜ್ಯದೊಳೆಲ್ಲಿಯುಂ ಮಱಿದಪ್ಪೊಡಂ ಕೇಳ್ದಱಿಯೆನಿಂದಶ್ರುತಪೂರ್ವಮಪ್ಪ ಕರುಣಾಕ್ರಂದನಮಂ ಕೇಳ್ದೆನೆಂದು ವಿಸ್ಮಯಂಬಟ್ಟು ಧರಾಮರಂಗೆ ಬೞಿಯನಟ್ಟಿ ಬೆಸಗೊಳೆ

ಭರತನೃಪಂ ಮುನ್ನ ಧರಾ
ಮರಜನಮಂ ಪಡೆದನವನ ಪಡೆದಿರ್ದ ಧರಾ
ಮರವೇಷದೆನ್ನಸುವನು
ದ್ಧರಿಪುದು ನೀಂ ಸಗರ ದುಃಖಸಾಗರದಿಂದಂ ೧೨

ಪರಕೆಗಳನೊಯ್ದು ಕೊಟ್ಟೆಂ
ಪರಮೇಶ್ವರಿಗಳ್ಗೆ ಪೋಗಿ ಪಾಟಿಂ[2]ಬ[2]ಟ್ಟೆಂ
ನರನಾಥ ಪುಣ್ಯಪುಂಜ
ಸ್ವರೂಪನಂ ಪಡೆದೆನೊರ್ವನಂ ನಂದನನಂ ೧೩

ಪಡೆದು ವಿವಾಹೋತ್ಸವಮಂ
ತಡೆಯದೆ ಮಾೞ್ಪಲ್ಲಿ ಬಂದು ಜವನೆಂಬ ಸಿಡಿಲ್
[3]ಸಿಡಿದೆ[3]ಱಗಿ[4]ದೊಡಾ[4]ನುಂ ನಿ
ನ್ನಡಿಗೆಱಗಿದೆನೆನ್ನ ಮಗನನೀಯಲೆವೇೞ್ಕುಂ ೧೪

ಶರಣಾಗಾ ದ್ವಿಜನೆನ್ನಂ
ಕರುಣಿಸು ನೀನೆನ್ನ ಮಗನನಂತಕಪುರದಿಂ
ತರವೇೞ್ಪುದೆನಗೆ ಮರಣಂ
ಶರಣಂ ಮೇಣಿನಿತೆ ನಿನ್ನ ಚರಣಂ ಶರಣಂ ೧೫

---

1 ಪುಯ್ಯ (ಗಚಜ) 2 ಪ (ಗಚಜ) 3 ಸಿಡಿಲೆ (ಕಗಟತ) ಬಿಡಿದೆ (ಚ) 4 ದುದಾ (ಟ)

ದ್ವಿಜವಂಶಮನಾ ಭರತಂ
ಸೃಜಿಯಿಸಿದಂ ಚಕ್ರವರ್ತಿ ನೀನುಂ ಚಕ್ರ
ಧ್ವಜನೈ ಬಡವನನೊರ್ವ
ದ್ವಿಜಸುತನಂ ದೇವ ಕಾವುದೇನರಿದಾಯ್ತೇ ೧೬

ಎಂದು ಕರುಣಮಾಗಿ ಬಾಯಬಿಱಿದು ಪುಯ್ಯ[1]ಲ್ಚಿ[1] ತನ್ನಂ ಮೂದಲಿಸಿ ನುಡಿಯೆಯಾ ದ್ವಿಜನ ನುಡಿಯಂ ಕೇಳ್ದು ವಿಸ್ಮಯಾಕ್ರಾಂತಸ್ವಾಂತನಾಗಿ

ಬೆಸಕೆಯ್ಯ[2]ದ ಮಂಡಲಮಂ[2]
ಬೆಸಕೆಯ್ಸಿಯುಮೆಱಗದವರನೆಱಗಿಸಿಯುಮುಪಾ
ರ್ಜಿಸಿದೆನ್ನ ಯಶಃಪ್ರಸರಂ
ಮಸುಳ್ವಂತಾಗಿರ್ಕುಮೀ ದ್ವಿಜನ್ಮನ ನುಡಿಯಿಂ ೧೭

ಬಡವಂ ಪಾರ್ವನಪತ್ಯಶೋಕವಿಕಳಂ ಬಂದೆನ್ನನೀಯಂದದಿಂ
ನುಡಿದಂ ಸತ್ತರನೆತ್ತಲಾರ್ಪರೊಳರರ್ಥಿಪ್ರಾರ್ಥನಾ ಭಂಗದಿಂ
ಕಿಡುಗುಂ ನಿರ್ಮಳ ಕೀರ್ತಿಲಕ್ಷ್ಮಿ ಪೆಱತೇನೇನೆಂದುಮೆಂತೆಂದುಮಿಂ
ನುಡಿಯಲ್ಕಾವುದುಮಿಲ್ಲ ಪಾರ್ವನೊಳಿದಕ್ಕೇಗೆಯ್ವೆನೆಂ[3]ತಕ್ಕುಮೋ[3] ೧೮

ಸತ್ತರನೆತ್ತುವುದೆಂಬುದ
ದೆತ್ತಣಮಾತಘಟಮಾನಮೀ ಪಾರ್ವಂ ತಾ
ನೆತ್ತೆತ್ತ ಬಂದು ಮಾಡಿದ
ನೆತ್ತೆತ್ತೆನಗಿನಿತು ದುರ್ಯಶಂ ಮಾಡಿದನೋ ೧೯

ಎಂದು ಚಿಂತಿಸುತಿರ್ದ ತಮ್ಮರಸನ ಚಿತ್ತವೃತ್ತಿಯನಱಿದು ಬುದ್ಧಿಸಾಗರನೆಂಬ ಪುರೋಹಿತನೆಂದನೆಂದುಂ ತಮ್ಮೊಳೋರೊರ್ವರಪ್ಪೊಡಂ ಸತ್ತಱಿಯದರ ಮನೆಯ ಪುಲ್ಲಂ ಕಿರ್ಚುಮಂ ಕೊಂಡುಬಪ್ಪುದು ಮೇಣ್ಡಪ್ಪಡಂ ನಿನ್ನ ಮಗನಂ ಪಡೆವೆನೆಂದೊಡಾ ನುಡಿಯನಱಿದುಮಱಿಯದಂತೆ ಕಿಱಿದಂತರಂಬರಂ ಪೋಗಿ ಮಗುಳೆ ಬಂದೆಲ್ಲಿಯುಂ ಪಡೆದೆನಿಲ್ಲೆಂಬುದುಮಾತನಂ ಮೆಲ್ಲಮೆಲ್ಲನೆ ಮಾತಾಡಿಸಿ

1 ಲಿಪ (ಗಜ) 2 ಪ (ಗ) ದರಂ (ಜ) 3 ತಿರ್ಪಮೊ (ಗಜ)

ಪಗಲಿರುಳೊಳೆ ಜೊನ್ನಂ ಕಾಳವೆಂಬುಕ್ತಿ ಚಿತ್ರಂ
ಬುಗೆ ನೆರೆದರಗಲ್ವರ್ ಪುಟ್ಟುವರ್ ಪೊಂದುವರ್ ನೀಂ
ಬಗೆಯ ಮರುಳೆ ಕಾಳಾಭೀಳ ವಕ್ತ್ರಾಂತಮಂ ದಲ್
ಪುಗದರೊಳರೆ ಪೇೞ್ ನಿಮ್ಮಜ್ಜಪಜ್ಜರ್ಕಳಾರುಂ ೨೦

ಮಱೆವುದು ದುಃಖಮನಱಿವಂ
ಮೆಱೆವುದು ಸೈರಿಪುದು ಮುಂತೆ ನೀಂ ಪೋಗಾನುಂ
ಪೆಱಗನೆ ಬಂದಪೆನೆಂಬೀ
ತೆಱನಲ್ಲದೆ ಜವನ ಬಾಱಿಯೊಳ್ ಬರ್ದುಕುವರಾರ್ ೨೧

ಆರಾರಂ ನುಂಗಿದನಿ
ಲ್ಲಾರಾರಂ ನೊಣೆದನಿಲ್ಲ ಸವಿನೋಡಿದನಿ
ಲ್ಲಾರಾರಂ ಸುರ ಮಾನವ
ನಾರಕ ತಿರ್ಯಕ್ ಸಮೂಹಮುಂ ಯಮರಾಜಂ ೨೨

ಬಡವಂ ಬಾೞ್ಗಂಗುಮೊ ಸಿರಿ
ಯೊಡೆಯಂ ಮೊಣ್ಗಂಗುಮೋ ತಪಸ್ವಿಗಳಿವರಂ
ಕಡೆಗಣಿಸುವೆನೆಂಗುಮೊ ಪೆ
ಣ್ಬಡೆಯೆಂಗುಮೊ ತುಱಿದು ಪರಿಗುಮಂತಕರಾಜಂ ೨೩

ಆಯುಂ ನೆಱೆವಿನೆಗಮಿರ್ಪನೆ
ಜಾಯೆಂಬನೆ ಮಾಣ್ಬನಿಂದಿನೊಂದಿವಸಮನ
ಧ್ಯಾಯಂ ಮಾಡುವನೆಂಬನೆ
ಬಾಯಱಿದೞಿಯೞಿ ಜನಂಗಳಂ ಜವನೊಯ್ಗುಂ ೨೪

ಏಂ ನಿಷ್ಕರುಣಿಯೊ ಪಸುಮಗ
ನೆನ್ನದೆ ಮುತ್ತಾಣ್ಮನೆನ್ನದಱಿವುಳ್ಳಂ ಬಾ
ೞ್ಗನ್ನದೆ ಮರುಳಕ್ಕಟ ಮಾ
ಣೆನ್ನದೆ ಮುಂ ಬಿಟ್ಟು ಕೊಂದಪಂ ಯಮರಾಜಂ ೨೫

ಕುಲಜಂ ಕುಲಹೀನನಿವಂ
ಕಲಿ ಪಂದೆಯಿವಂ ಮಹಾಭಿಮಾನಿಯಿವಂ ನಾ
ಣಿಲಿಯಿವನೆನ್ನದೆ ಪಲರಂ
ನಲಿನಲಿದಾಟಂದು ಕೊಂದಪಂ ಯಮರಾಜಂ ೧೬

ಕಟ್ಟಿದ ಕುಱಿಗಳ್ ಬೋನದೊ
ಳಟ್ಟೀಱಿಸಿ ಬಯ್ತ್ತು ಬಾಡುಗಳ್ ಬಡ್ಡಿಸಿ ತಂ
[1]ದಿಟ್ಟಾಚಾ[1]ದ್ಯಂಗಳ್ ಮುಂ
ದಿಟ್ಟ ನಿವೇದ್ಯಂಗಳಂತಕಂಗೆ ಜನಂಗಳ್ ೧೭

ಮೊಱ[2]ಯಿಡೆಯಿಡೆ ಕೂಗಿಡೆಯಿಡೆ
ದಱದಱಯೆಂದೆಟಿೞದು ಪುಯ್ಯಲಿಡೆಯಿಡೆ ಕೊಲ್ಗುಂ
ಕುಱಿಯುಂ ಕೊಲ್ವಂತಿರೆ ತಿಱ
ಕೊಱೞಗೊಂಡು ಜಗಜ್ಜನಂಗಳಂ ಯಮರಾಜಂ ೧೮

ಮೃತಪಟಹಂ ಜಯಪಟಹಂ
ಚಿತಾಗ್ನಿಧೂಮಂ ಜಯಧ್ವಜಂ [2]ಜ[2]ನಕರುಣಾ
ರುತಿ ಜಯಮಂಗಳರುತಿಯೆನೆ
ಕೃತಾಂತರಾಜಂಗೆ [3]ರಾಜ್ಯ[3]ಚಿಹ್ನಮಿದಲ್ತೇ ೧೯

ಆ ಜಗದೇಕಕಂಟಕನನಾ ಬಹುಭಕ್ಷಿಯನಾ ತ್ರಿಲೋಕಪಂ
ಕೇಜಸಮುತ್ಥಜೀವಮಕರಂದ ಮದಾಳಿಯನಾ ಪರಿಸ್ಫುರ
ತ್ತೇಜನನಂಗಜಾಂತಕನ ಮೋಹನಘಾಂತಕನಂತಕಾಂತಕಂ
ಶ್ರೀಜಿನರಾಜನಲ್ಲನುೞಿದೊಂ ಗೆಲಲಾರ್ಕುಮೆ ಮೃತ್ಯುರಾಜನಂ ೨೦

ಎಂದು ಬುದ್ಧಿಸಾಗರನುಂ ತನಗೆ ಸಂಸಾರಸ್ವರೂಪಮನಱಿಪಿ ಸದ್ಧರ್ಮೋಪದೇಶಂಗೆಯ್ದಾಗಳಾ ಬ್ರಾಹ್ಮಣಂ [4]ಸಮಾವೃ[ತಾ]ದಿ[4]ನೊವವಿಚಲಸ್ಯಂದಿಯೆಂಬುದಿವರನಿವರ ನುಡಿಯೊಳ್ ತೊಡರ್ಚುವೆನೆಂದು

1 ದಿಟ್ಟಚಾ (ಕ) ದಿಟ್ಟಚ (ಜ) ದಿಟ್ಟಾಚಾ (ಟ) 2 ಕ (ಗಜ) ಘ (ಚ) 3 ರಾಜ (ಗಜ) 4 ಮಾತ್ರ್ಯಾದಿ (ಗಚಜ) ಮಾವ್ರಾದಿ (ಕಟತ)

ಈ ನಿನ್ನ ಪೇಟ್ದ ಧರ್ಮವಿ
ದೇನೆನಗೆಯೊ ನಿನಗಮುಂಟೊ ನಿನಗುಳ್ಳೊಡದಂ
ನೀನಱಿಪುವುದೆನೆ ದರಹಸಿ
ತಾನನನೆಂದಂ ನರೇಂದ್ರನೆನಗದು ಮುನ್ನಂ ೩೧

ಉಂಟೆಂಬುದು ನಿನ್ನಱುವತ್ತು ಸಾಸಿರ್ವರ್ ಮಕ್ಕಳುಮಿಂದು ದೃಷ್ಟಿವಿಷ ವಿಷಮ ವಿಷಧರನಿಂ ಭಸ್ಮಾವಶೇಷರಾದರೆಂಬುದುಂ ಸಂಸಾರಿಜೀವಂಗಳಂದು ಪುಟ್ಟಿದರಂದೆ ಸತ್ತರಿದೇಂ ಚೋದ್ಯಮೆಂಬುದು ಮುನ್ನಿನಂತೆ ಧರ್ಮಕಥಾ ಕಥನದೊಳಿರ್ಪನ್ನೆಗಮು ಶ್ರುಜಲವಿಲುಳಿತ ವಿಲೋಚನನುಮುಪಗತೋತ್ತರೀಯನುಂ ಮನ್ಯೂದ್ಗತಕಂಠನುಮ ತಿಪ್ರಚುರ [1]ವಿಪ್ರಾಲಾ[1]ಪಾಕ್ಷರ ಮುಖರಮುಖನುಂ ಅಸಹ್ಯಶೋಕಪಾವಕಶಿಖಾ ಕಲಾಪ ಸಂತಪ್ತಮಾನ ಮಾನಸನುಂ ಭಗ್ನಮನೋರಥನುಮಾಗಿ ಭಗೀರಥಂ ಬಂದು ತಂದೆಯ ಮುಂದೆ ಮೆಯ್ಯನೀಡಾಡಿ

ಬೆಸನೆಂದು ಪೊಣ್ದು ದೇವರ
ಬೆಸನಂ ಸುಕುಮಾರರೆನಿಪ ರಾಜಕುಮಾರರ್
ಬೆಸದಪ್ಪಿದರೆನಗನಿತೊಂ
ದು ಸೈಪು ಸಮನಿಸದೆ [2]ಬರ್ದುಕಿ[2] ಬಂ[3]ದೆಂ ನೃಪತೀ[3] ೩೨

ಎನಲೊಡಮಾ ಮಾತಂ ಕೇ
ಳ್ದನಭ್ರವಜ್ರಾಭಿಘಾತಮಾದಂತೆ ಸಭಾ
ಜನಮೆಲ್ಲಂ ಮೋಹಿಸೆ ಭೋಂ
ಕನೆ ಹಾಹಾಕ್ರಂದಮೊಗೆದುದಂತಃಪುರದೊಳ್ ೩೩

ಅವಿರಳ ಗಳದಶ್ರುಜಲ
ಪ್ರವಾಹಮುದ್ದೃಪ್ತ ಪುತ್ರಶೋಕಾವೇಗಂ
ದಿವಸಂ ಕೆಡೆದಿರ್ದುದು ಷ
ಣ್ಣವತಿ ಸಹಸ್ರಾಂಗನಾಳಿ ನೃಪನಡಿಮೊದಲೊಳ್ ೩೪

---

1 ಪ್ರಳಾ (ಗಘ) 2 ಬರ್ದುಗಾಅ (ಗಘಜ) ಬರ್ದುಕ್ಕಿ (ಅ) 3 ದುಃಸಿರಸಾ (ಗಚಜ)

[1]ನಿನಗೆ[1] ಚತುರ್ದಶರತ್ನಂ
ಜನೇಶ ಬೆಸಕೆಯ್ದುಮಮರರೆಲ್ಲಂ ಬೆಸನೇ
ನೆನುತಿರ್ಪರ್ ಬೆಸದಪ್ಪಿದ
ತನೂಜರಂ ಜವನೊಳಿಱಿದು ಬರಿಸಲ್ವೇಟ್ಕುಂ ೩೫

ಬಾಳಂ ಕಿತ್ತಂಜಿಸಿ ಬಾ
ಯ್ಕೇಳಿಸಿ ಷಟ್ಖಂಡಭರತಮಂ ಕಲಿಯೈ ಬ
ಲ್ಲಾಳನೆ ನೆಗಟ್ದಿ ಧರಣೀ
ಪಾಳ ನಿಜಾತ್ಮಜರನೇಕೆ ರಕ್ಷಿಸದಿರ್ಪೈ ೩೬

ಎಲ್ಲಿತ್ತೊ ಚಕ್ರರತ್ನಮ
ದೆಲ್ಲಿತ್ತಸಿರತ್ನಮಶ್ವಗಜರತ್ನಂ ತಾ
ಮೆಲ್ಲಿತ್ತವೋಯ್ತೊ ಜಗತೀ
ವಲ್ಲಭ ನಿಜಸುತರನುಱದೆ ಜವನುಯ್ವಾಗಳ್ ೩೭

ನಿನಗಂ ಬಲ್ಲಿದರೊಳರೇ
ನಿನಗಂ ಮಾರ್ಮಲೆವರೊಳರೆ ನಿನಗಂ ತಲೆದೋ
ರ್ಪನಿತಮರರೊಳರೆ ನಿಜನಂ
ದನರಂ ನೀನಿರೆ ನೃಪೇಂದ್ರ ಕೊಲ್ವರುಮೊಳರೇ ೩೮

ಉರಿದಟಿದಪ್ಪುದು ಎಮ್ಮಯ
ಶರೀರವೇವೆಮ್ಮ ಪುತ್ರಶೋಕಾನಲನಿಂ
ನರಪಾಲ ಮತ್ತಮನಲಾಂ
ತರವೇವುದೊ ದಗ್ಧವಾರಿಯೆಂಬುದುಮುಂಟೇ ೩೯

ಕುಡುವುದು ಕಿಚ್ಚಂ ದೇವರ್
ತಡೆಯದೆ ಕತ್ತಿಗೆಯನೆಮಗೆ ಬೆಸಸುವುದಿನ್ನೇಂ
ಪಡೆಮಾತೊ ತನಯರಿಲ್ಲದೆ
ಕಡೆದಿರ್ಪುದು ತಕ್ಕುದಲ್ತು ಭುವನಾಧಿಪತೀ ೪೦

---

1 ಬಿದರ್ಶ- ನಿನಗೆ ([illegible])

ಒಗೆದ ಪತಿ ವಿರಹತಾಪದೆ
ಪುಗಲಿರ್ದರ್ ಜಿನಗೃಹಂಗಳಂ ಶಿಖಿಶಿಖೆಯಂ
ಪುಗಲಿರ್ದ ಸೊಸೆವಿರೆಲ್ಲರ
ಮೊಗಂಗಳಂ ದೇವ ನೋಡಿ ಕರುಣಿಸವೇಡಾ ೪೧

ಪಡೆವುದು ಮೇಣ್ ನಂದನರಂ
ನಡೆವುದು ಮೇಣ್ ತಪಕೆ ಸಗರವಲ್ಲಭ ಮತ್ತಂ
ಪಡೆವು[1]ದೊ[1] ತನಯರ್ಕಳ ಪಿಂ
ಬಡಿನೊಳ್ [2]ಪೇೞ್ವಮಗನುರಸ[2] ಮಾನಸವಾೞ್ವೇ ೪೨

*ಎಂದು ವಿಪ್ರಲಾಪಂಗೆಯ್ಯೆ

ಜನಪಾಂತಃಪುರಕಾಂತಾ
[3]ಜನವದನ[3] ಸರೋಜಮುಶ್ರುಜಲಕಣಮುಮನಾಂ
ತನುಕರಿಸಿರ್ದುದು ಹಿಮಬಿಂ
ದುನಿಚಿತಹೈಮಂ ಸರೋಜವನ ವಿಭ್ರಮಮಂ ೪೩

ಅರಸಿಯರ ಕಣ್ಣ ನೀರ್ಗಳ
ಬೆರಸಿದ ಕಾಡಿಗೆಯ ಕರ್ಪು ಪೋಲ್ತತ್ತು ಕುಚಾಂ
ತರದೊಳ್ ಬೀೞುತ್ತುಂ ತ
ತ್ಪರಿತಾಪಜ್ವಲನ ಧೂಮ್ರಧೂಮಚ್ಛವಿಯಂ ೪೪

ದವ ರೌದ್ರಜ್ವಲನಾದ್ಭುತಂ ಹೃದಯದೊಳ್ ಶೋಕಾಗ್ನಿ ಕೈಗಣ್ಮಿ ಪೊ
ಣ್ಮುವ ಕಿಚ್ಚಂ ನದಿಪಲ್ಕೆ ಬರ್ಪ ತೆಱದಿಂದಂ ಕಣ್ಗಳಿಂದುಣ್ಮಿ ಪೊ
ಣ್ಮುವ ನೇತ್ರಾಂಜನ ಮಿಶ್ರ ಬಾಷ್ಪಜಲಧಾರಾಬಿಂದುಗಳ್ ಕೂಡೆ ಕಂ
ಠವಿಮುಕ್ತಚ್ಯುತ ನೀಲಕಂಠಿಕೆವೊಲಾಯ್ತಂತಃಪುರಸ್ತ್ರೀಯರಾ ೪೫

---

1 ದು (ಗಚಜ) 2 ಪೇೞ್ ನಮಗನುತ್ತಮರಸ (ಕ) ಪೇೞೆಮಗೆ ಮುತ್ತಮರಸ (ಗಚ) ಪೇೞ್ ನಮಗೆನುತ್ತ (ಜ) 3 ವನಜ (ಗಚಜ)

* 'ಗಚಜ' ಪ್ರತಿಗಳಲ್ಲಿಲ್ಲ

ಅರಸನನೋಲಗಿಸುತ್ತಾ
ದರದಿಂದಂ ಮುಗಿದ ಕೆಯ್ಯುಮೆಱಗಿದ ತಲೆಯುಂ
ಬೆರಸಿಪ್ಪರಸುಗಳಿರದೆಱ
ಗಿರೆ ತಲೆಯುಮನೆತ್ತದೆಱಗಿ ಶೋಕಾಕುಲಿತರ್ ೪೬

ಅನಿತೊಂದು ಶೋಕವೇಗಂ
ತನಗಾಗೆಯುಮಚಲಿತ ಸ್ವರೂಪದಿನಿರ್ದಂ
ಕನಕನಗಂಬೊಲ್ ಸಗರನ
ಮನಮಂ ಸಾಗರದ ಗುಣ್ಪನಱವರುಮೊಳರೇ ೪೭

ಅನಿಲಾಹತಿಯಿಂ ಚಳಿಯಿಕು
ಮನೋಕಹಾನೀಕಮದ್ರಿ ಚಳಿಯಿಕುಮೆ ಪೃಥ
ಗ್ಜನದಂತುದಾತ್ತಚಿತ್ತಂ
ಜನಪತಿ ಧೈರ್ಯಾಂಬುರಾಶಿ ಚಳಿಯಿಸಿದಪನೇ ೪೮

ಬಳಸಿದ ಪೊರಟ್ಟಿಂಗನೆಯರ
ಬಳಗದಿನವರಶ್ರುಜಲದಿನನಿಲಾಹತಿಚಂ
ಚಳಲತೆಯಂ ನಿರ್ಜರಮುಮ
ನೊಳಕೊಂಡು ಸುವರ್ಣಗಿರಿಯೆನರಸಂ ಪೋಲ್ತಂ ೪೯

ಅವಿವೇಕಿಗಳ ಮನಂಗಳ
ನವಿರಳ ಬಹಳ ಸ್ವರೂಪಮಜ್ಞಾನತಮಂ
ಕವಿದತ್ತರಸನ ಮನಮಂ
ವಿವಿಕ್ತವಿಶದಮನದೆಂತುಮಾಱದೆ ಪೊರ್ದಲ್ ೫೦

ಘೋರತಮಮೊಡ್ಡಿಸುವೊಡಾ
ತಾರಕಮಂಡಳಮನೊಡ್ಡಿ ಕುಂ ಗಗನಾಲಂ
ಕಾರನನುಜ್ವಲ ತೇಜೋ
ಭಾರನನೇನಹಿಮಕರನನೊಡ್ಡಿಸಿದಪುದೇ ೫೧

ಅಂತು ಧೈರ್ಯಾರ್ಣವಷ್ಟಂಭಗಂಭೀರನಾಗಿ

[1][ಒಡೆಯ][1] ಕೃತಾಂತನಯ್ದು ಸುತರಂ ಪಡೆದೀಯೆಮಗೆಂದು ಕಾಂತೆಯರ್
ನುಡಿದಪರೆನ್ನ ಪೆತ್ತ ಮಗನಂ ಪಡೆದೀಯೆನಗೆಂದು ಪಾರ್ವನುಂ
ನುಡಿದಪನಯ್ಯ ಸತ್ತವರನೆತ್ತುವರಾರ್ ಮತಿಗೆಟ್ಟರಕ್ಕಟಾ
ಬಡವುಗಳೀ ಕುಲಾಂಗನೆಯರೀ ಬಡಪಾರ್ವನ ನಂಟರಾಗರೇ ೫೨

[2]ಎಂದು[2] ಸಮಶೀಲ ವ್ಯಸನೇಷು [3]ಸಖ್ಯ[3]ಮೆಂದವರ ದೀನಾನನಂಗಳಂ ನೋಡ ಲಾಱದೆ ಮನಮಂ ಬಲಿದು ನಿಲೆ

ಪರಿಜನಮುಂ ಪುರಜನಮುಂ
ನೆರೆ[4]ದನಿಬರ್[4] ತಮ್ಮೊಳರಸನೇಂ ಕಲ್ಲೆರ್ದೆಯೋ
ಮರವಾನಿಸನೋ ಕಲ್ಲುಂ
ಮರನಿರ್ಪಂತಿರ್ದನಿಂತು ನಿಷ್ಕರುಣನೊ ಪೇೞ್ ೫೩

ಎಂಬ ಜನಾಪವಾದಮಂ ಕೇಳ್ದು ಬುದ್ಧಿಸಾಗರಂ ಸಗರನ ಮೇಲೆ ಸಿತಸರ್ಷಪಂಗಳ ನಿೞಿಯೆ ಸುರಿವುದುಂ ತಪ್ತಾಯಃಕಟಾಹಪತಿತ ಲಾಜಃಪುಂಜದಂತೆ ದೆಸೆದೆಸೆಗೆ ಚಿಳಿಲ್ ಚಿಳಿಲೆನೆ ಸಿಡಿಲ್ದು ಪಾಱುವುದುಮೋರೊರ್ವರ್ಗೋರೊರ್ವರ್ ಮಕ್ಕಳ ದುಃಖಮಂತ ರಸಂಗೞುವತ್ತು ಸಾಸಿರ ಮಕ್ಕಳ ದುಃಖಂ ಸಾಮಾನ್ಯಮಕ್ಕುಮೆ ಮಹಾಸತ್ವನುಂ ಧೈರ್ಯಾಂಬುರಾಶಿಯುಮಪ್ಪುದಱಿನಸಹ್ಯಮಪ್ಪ ದುಃಖೋದ್ರೇಕಮಂ ಸೈರಿಸಿರ್ದ ನೆಂದು ಸಕಲ ಜನಕ್ಕೆಲ್ಲಂ ಪ್ರಕಟಂ ಮಾಡೆ ಸಗರನಾ ಬ್ರಾಹ್ಮಣಂಗಮಂತಃಪುರಕ್ಕಂ ಮಱುಮಾತುಗುಡಲಱಿಯದೆ 'ಮೌನಂ ಸರ್ವಾರ್ಥಸಾಧನ'ಮೆಂಬುದಂ ಮನದೊಳ್ ಬಗೆ[5]ದು[5]

ಕಡೆಯೆಯ್ದಿತ್ತೆನಗಿಂದು ರಾಜ್ಯವಿಭವಂ ಪೊಣ್ಮಿರ್ದ ಮೋಹೋದಯಂ
ತಡಿ ಸಾರ್ದಿರ್ದಪುದಕ್ಕೆ ಮಂಗಳಮಹಾಶ್ರೀ ಪೋಪೆನೀಗಳ್ ತಪಂ
ಬಡಲೆಂದುತ್ತಮ ಸತ್ವನೂರ್ಜಿತ ಗುಣಂ ಸಿಂಹಾಸನಂ ಭೇರಿ ಬೆ
ಳ್ಗೊಡೆಯಿಂತೆಲ್ಲಮನೊಲ್ಲದಿರ್ದನರಸಂ ತಳ್ವಿಲ್ಲದಾಸ್ಥಾನದಿಂ ೫೪

1 ಅರಸ (ಕಗಚಜಟತ) 2 ಅಂತು (ಕಗಜ) 3 ಸಂಖ್ಯ (ಗಜ) 4 ದೆಂಬರ್ (ಕಜ)
5 ವುದು (ಕಗಜ)

ಇದು ಸಕಲ ಮುನೀಂದ್ರ ವೃಂದವೃಂದಾಕ ಶ್ರೀಮದಜಿತಸೇನ ಭಟ್ಟಾರಕ ಶ್ರೀ ಪಾದಪದ್ಮ ಪ್ರಸಾದಾಸಾದಿತ ರತ್ನತ್ರಯಾಲಂಕೃತ ಶ್ರೀಮದಭಿನವ ಕವಿಚಕ್ರವರ್ತಿ ಕವಿರತ್ನ ವಿರಚಿತ ಶ್ರೀ ದಾನಚಿಂತಾಮಣಿ [1]ನಿರ್ಮಾ[1]ಪಿತ ಶ್ರೀಮದಜಿತತೀರ್ಥಕರ ಪುರಾಣತಿಲಕದೊಳ್

ತಪೋವನಗಮನ ವರ್ಣನಂ

ದಶಮಾಶ್ವಾಸಂ

1 ನಿರೂ (ಚ) ವಿನಿರ್ಮಾ (ತ)

# ಏಕಾದಶಾಶ್ವಾಸಂ

ಶ್ರೀಮಹಿ[1]ತ ಮಹೀ[1]ರಾಜ್ಯ
ವ್ಯಾಮೋಹಂ ಮಾಣ್ಗೆ ಶರಣಮಕ್ಕೆಮಗಜಿತ
ಸ್ವಾಮಿ ಭವಭಯಹರಂ ಸಕ
ಳಾಮರಜನವಿನುತ ಚರಿತನಪಗತದುರಿತಂ ೧

ಎಂದು ತಱಿಸಂದು ಷಟ್ಖಂಡಮಂಡ[2]ಳ ಮಹೀಮಂಡಳೇ[2]ಶ್ವರನಾಸ್ಥಾನಮಂಡಪ ದಿನೆರ್ದು ದೀಕ್ಷಾಗ್ರಹಣಮನೋರ[3]ಥಂ[3] ಮಹಾರಥಂ ಭಗೀರಥಂಗೆ ಸಾಮ್ರಾಜ್ಯ ಪದವಿಯಂ ದಯೆಗೆಯ್ದು

ಜಳಧಿತರಂಗತಾಟಿತ ಮಹೀಪತಿ ಚಕ್ರಧರಂ ತಪಂಬಡಲ್
ತಳರ್ವುದುಮಾಗಳೆನ್ನ ಬಗೆ ಕೂಡಿದುದಸ್ತ ಭವಾಬ್ಧಿ ಮಾಡಿದೆಂ
ಕೆಳೆಯನನೆಂದು ಸಂತಸದಿನಾ ಮಣಿಕೇತು [4]ವಿಚಿತ್ರಕೇತುಗಳ್
ಮಿಳಿರೆ[4] ವಿಚಿತ್ರ ನರ್ತನಮನಾಡಿಸಿದಂ ಖಗಮಾರ್ಗರಂಗದೊಳ್ ೨

ಆಗಳ್ ಸಗರಚಕ್ರವರ್ತಿ ದೀಕ್ಷಾಗ್ರಹಣದೃಢಚಿತ್ತನಾಗಿ ದೃಢಧರ್ಮರೆಂಬ ಕೇವಳಿಗಳ ಪಕ್ಕದೆ ಸರ್ವಸಂಗಪರಿತ್ಯಾಗಪುರಸ್ಸರಂ ಸಂಯಮಮಂ ಕೈಕೊಂಡನಿತ್ತ ಕಪಟ ಬ್ರಾಹ್ಮಣನುಂ ತನ್ನ ವಿಕ್ರಿಯೆಯಿಂ ಮಱೆದಿರ್ದ ಕುಮಾರರಲ್ಲಿಗೆ ಕಾಳೆಗಕ್ಕಮೊಳಂ ಪುಯ್ಯಲ್ಗಮೊಳನೆಂಬಂ[5]ತೆ ಬೇಗಂ[5] ಬಂದು ಚಕ್ರಧರದೀಕ್ಷಾಗ್ರಹಣಮನಱಿಪಲೊಡಮವರುಮಂತೆ ಸಂವೇಗ ನಿರ್ವೇಗಪರರಾಗಿ ದೃಢಧರ್ಮಕೇವಳಿಗಳ ಸನ್ನಿಧಿಯೊಳ್ ತಪೋನಿಧಿಗಳಾದರ್ ಆ ವ್ಯತಿಕರಮಂ ಭಗೀರಥಂ ಕೇಳ್ದು ತಾನುಮವರಲ್ಲಿಗೆ ಬಂದು ಪಂಚಮುಷ್ಟಿಯಿಂ ಬಂದಿಸಿ ಕುಳ್ಳಿರ್ದು ಧರ್ಮಶ್ರವಣಾನಂತರಂ ಪೇೞಿಮೆನಗೆ ಕರ್ಮಪ್ರಕೃತಿಯುಮಂ ಲೋಕವಿಭಾಗಮುಮಂ ಜೀವಸ್ವರೂಪ[6]ಮುಮನಱಿಯೆ[6] ಬೆಸಸುವುದೆಂದು ಮುಕುಳಿತಾಂಜಲಿಯಾಗಿ ಬಿನ್ನಪಂಗೆಯ್ದಾಗಳ್

---

1 ತಂ ಮಹಿ (ಚಜ) 2 ಳಾದೀ (ಕ) ಳೇ (ಗಜ) 3 ಥ (ಕಗಚಜ) 4 ಮನೋನುರಾಗಮಂ [illegible] (ಗಚಜ) 5 ತೆ (ಗಜ) 6 ಮಂ [illegible] (ಗಜ) ಮಂ ನೆರೆಯೆ (ಚ)

ವದನೇಂದು ಸುಧಾರಸಮೆನೆ
ವದನಾಬ್ಜಾಮೋದಮೆನೆ ಮುನೀಶ್ವರಮುಖದಿಂ
ಹೃದಯಂಗಮ ವಚನಾಮೃತ
ಮುದಯಿಸಿದುದು ಸಕಲ ಭವ್ಯ ಸಂತೋಷಕರಂ ೨

ನಿನ್ನ ಬೆಸಗೊಂಡ ಪರಮೇಶ್ವರ ಧರ್ಮತತ್ತ್ವಾರ್ಥಕಥನದೊಳ್ ಪರಿಣತ ವಯಸ್ಕನುಂ ವಪುಷ್ಮಾಂತನುಂ ಅನಾಮಯಶರೀರನುಂ ಬಹುಶ್ರುತನುಂ ಅತಿ ಪ್ರಗಲ್ಭನುಂ ಮೇಧಾವಿಯುಂ ನಿರುಪಕ್ರಿಯಾಪ್ರವೃತ್ತನುಂ ಪವಿತ್ರಚಾರಿತ್ರನು ಮೆಂಬಷ್ಟವಿಧೋತ್ಕೃಷ್ಟ ಗುಣಂಗಳಿಂದಂ ನೆಱೆದನಾಚಾರ್ಯನಕ್ಕುಂ ದಾಕ್ಷಿಣ್ಯ ವಂತನುಮೇಕಾಗ್ರಮನಸ್ಕನುಂ ಅನುಕೂಲಕನುಮನಾಲಸ್ಯನುಮನವಕಾರ್ಯನುಂ [1]ಲಬ್ಧಬುದ್ಧಿ[1]ಸದ್ಧೃಶನುಂ ಕಲಹಂಸಮನನುಪಮನುರಕ್ತನುಂ ಮಧ್ಯಸ್ಥನುಮೆಂಬ ದಶವಿಧ [2]ಶುದ್ಧ[2]ಗುಣಂಗಳಿಂ ನೆಱೆದಂ ಶ್ರೋತೃವೆಂಬೊನಕ್ಕುಂ ಅದಱ[3]ನಿನಿ[ಶ್ರು][3] ಗುಣಂಗಳ್ಗೆ ಪಾತ್ರಭೂತನಾದ ನೀನವಹಿತಚಿತ್ತನಾಗಿ [4]ಕೇಳ್ವುದುಮಾ[4] ಕರ್ಮಂಗಳುಂ ಜ್ಞಾನಾವರಣೀಯಂ ದರ್ಶನಾವರಣೀ[5]ಯುಂ ವೇದನೀಯಂ[5] ಮೋಹನೀಯ ಮಾಯುಷ್ಯಂ ನಾಮಗೋತ್ರಮಂತರಾಯಮೆಂಬಷ್ಟವಿಧಂಗಳಕ್ಕುಮವಱೊಳ್ ಅಭಿನಿಬೋಧಿತ ಮತಿಶ್ರುತಾವಧಿ ಮನಃಪರ್ಯಯ ಕೇವಲಾವರಣೀಯಭೇದದಿಂ ಜ್ಞಾನಾವರಣೀಯಂ ಪಂಚವಿಧಮಕ್ಕುಂ ನಿದ್ರಾನಿದ್ರಾ ಪ್ರಚ[6]ಳಾಪ್ರಚಳ[6] ಸ್ತ್ಯಾನಗೃದ್ಧಿ ನಿದ್ರಾಪ್ರಚಳಾ ಚಕ್ಷುರಚಕ್ಷುರವಧಿಕೇವಲಾವರಣೀಯ ಭೇದದಿಂ ದರ್ಶನಾವರಣೀಯಂ ನವವಿಧಮಕ್ಕುಂ ಸಾತಾಸಾತಭೇದದಿಂ ವೇದನೀಯಂ ದ್ವಿವಿಧ ಮಕ್ಕುಂ ದರ್ಶನಚಾರಿತ್ರಭೇದದಿಂ ಮೋಹನೀಯಂ ದ್ವಿವಿಧಮಕ್ಕುಂ ದರ್ಶನ ಮೋಹನೀಯ ಬಂಧಮಂ ಕುಱುತ್ತೇಕವಿಧಮಕ್ಕುಂ ಸತ್ತ್ವಮಂ ಕುಱುತ್ತು ಸಮ್ಯಕ್ತ್ವಂ [7]ಮಿಥ್ಯಾತ್ವಂ ಸಮ್ಯಕ್ ಮಿ[7]ಥ್ಯಾತ್ವಭೇದದಿಂ ತ್ರಿವಿಧಮಕ್ಕುಂ ಚಾರಿತ್ರ ಮೋಹನೀಯಮುಂ ಕಷಾಯ ನೋಕಷಾಯಭೇದದಿಂದಿರ್ತೆಱನಕ್ಕುಂ ಅವಱೊಳಂ ಪ್ರತ್ಯೇಕಾನಂತಾನುಬಂಧ ಪ್ರತ್ಯಾಖ್ಯಾನಾಪ್ರತ್ಯಾಖ್ಯಾನ ಸಂಜ್ವಲನ ಕ್ರೋಧಮಾನ ಮಾಯಾಲೋಭಭೇದದಿಂ ಕಷಾಯಚಾರಿತ್ರ ಮೋಹನೀಯಂ ಷೋಡಶವಿಧಮಕ್ಕುಂ ಹಾಸ್ಯ[8]ರತ್ಯರತಿ[8]ಶೋಕಭಯ ಜುಗುಪ್ಸಾ ಸ್ತ್ರೀಪುನ್ನಪುಂಸಕಭೇದದಿಂ ನೋಕಷಾಯ ಚಾರಿತ್ರಮೋಹನೀಯಂ ನವವಿಧಮಕ್ಕುಂ ನಾರಕಾದ್ಯಾಯುಭೇದದಿಂದಾಯು

1 ಲಬ್ಧಿ ಬುದ್ಧ (ಕಟತ) 2 ವಿಶುದ್ಧ (ಚಜ) 3 ನಿನಿ (ಕಗಚಜತ) 4 ಕೇಳ್ದು ದಾ (ಕ) ಕೇಳ್ವುದಾ (ಚಜ) 5 ಯಂ (ಗಜ) 6 ಳಾ (ಗಚಜ) 7 ಮಿ (ಕಗ) 8 ರತಿ (ಗಚಜ)

ಷ್ಕರ್ಮಂ ಚತುರ್ವಿಧಮಕ್ಕುಂ ಗತಿಜಾತಿಶರೀರಬಂಧನ ಸಂಘಾತ ಸಂಸ್ಥಾನಾಂ ಗೋಪಾಂಗ ಸಂಹನನ ವರ್ಣಗಂಧರಸಸ್ಪರ್ಶಾನುಪೂರ್ವ ಗುರುಲಘೂಪಘಾತ ಪರಘಾತಾ ತಪೋದ್ಯೋತೋಚ್ಛ್ವಾಸ ವಿಹಾಯೋಗತ್ರಯತ್ರಸಂಸ್ಥಾವರ ಸ್ಥೂಲ ಸೂಕ್ಷ್ಮ ಪರ್ಯಾ[1]ಪ್ತಾಪರ್ಯಾಪ್ತ[1] ಪ್ರತ್ಯೇಕ ಶರೀ[2]ರ ಸಾಧಾರಣ ಶರೀರ[2] ಸ್ಥಿರಾಸ್ಥಿರ ಶುಭಾಶುಭ ಸುಭಗ ದುರ್ಭಗ ಸುಸ್ವರದುಸ್ವರಾದೇಯನಾದೇಯ ಯಶಸ್ಕೀರ್ತ್ಯಯ ಶಸ್ಕೀರ್ತಿನಿರ್ಮಾಣ ತೀರ್ಥಕರಭೇದದಿಂ ನಾಮಕರ್ಮ ನಾಲ್ವತ್ತೆರಡು ಭೇದಮಕ್ಕು ಮಲ್ಲಿ ನರಕಾಯುರ್ಭೇದದಿಂ ಗತಿನಾಮಂ ಚತುರ್ಭೇದಮಕ್ಕುಂ ಏಕೇಂದ್ರಿಯಾದಿ ಭೇದದಿಂ ಜಾತಿನಾಮಂ ಪಂಚವಿಧಮಕ್ಕುಂ ಔದಾರಿಕ ವೈಕ್ರಿಯಿಕಾಹಾರಿಕ ತೈಜಸ ಕಾರ್ಮಣಭೇದದಿಂ ಶರೀರನಾಮಂ ಪಂಚವಿಧಮಕ್ಕುಂ ಔದಾರಿಕಾದಿ ಭೇದದಿಂ ಬಂಧನಾಮಂ ಪಂಚವಿಧಮಕ್ಕುಮಾ ಶರೀರಭೇದದಿಂ ಸಂಘಾತನಾಮಮುಂ ಪಂಚ ವಿಧಮಕ್ಕುಂ ಚತುರಸ್ರಮುಂ ನ್ಯಗ್ರೋಧಪರಿಮಂಡಲಮುಂ ಸ್ವಾತಿಯುಂ ವಾಮ ನಮುಂ ಕುಬ್ಜಮುಂ ಹುಂಡಮುಮೆಂದು ಸಂಸ್ಥಾನನಾಮಂ ಷಡ್ವಿಧಮಕ್ಕುಂ ಔದಾರಿಕ ವೈಕ್ರಿಯಿಕಾಹಾರ*ಭೇದದಿಂದಂಗೋಪಾಂಗನಾಮಂ ತ್ರಿವಿಧಮಕ್ಕುಂ ವಜ್ರವೃಷಭನಾರಾಚ ವಜ್ರನಾರಾಚ ನಾರಾಚಾರ್ಧನಾರಾಚ ಕೀಲಿತಾ ಸಂಪ್ರಾಪ್ತ ಸೃಪಾಟಿಕಾಭೇದದಿಂ ಸಂಹನನನಾಮಂ ಷಡ್ವಿಧಮಕ್ಕುಂ ಕೃಷ್ಣನೀಲಪೀತ ಹರಿತ ರಕ್ತ ಶುಕ್ಲಭೇದದಿಂ ವರ್ಣನಾಮಂ ಪಂಚವಿಧಮಕ್ಕುಂ ಸುಗಂಧ ದುರ್ಗಂಧ ಭೇದದಿಂ* ಗಂಧನಾಮಂ ದ್ವಿವಿಧಮಕ್ಕುಂ ತಿಕ್ತಕಟು ಕಷಾಯಾಮ್ರಮಧುರಭೇದದಿಂ ರಸನಾಮಂ ಪಂಚವಿಧಮಕ್ಕುಂ ಮೃದು ಕರ್ಕಶ ಗುರು ಲಘು ಸ್ನಿಗ್ಧ ರೂಕ್ಷ ಶೀತೋಷ್ಣಭೇದದಿಂ [3]ಸ್ಪರ್ಶ[3]ನಾಮಂ ಅಷ್ಟವಿಧಮಕ್ಕುಂ ನರಕಾದಿ ಪ್ರಯೋಗ್ಯಾನುಪೂರ್ವ್ಯಭೇದದಿಂದಾನು ಪೂರ್ವನಾಮಂ ಚತುರ್ವಿಧಮಕ್ಕುಂ ಪ್ರಶಸ್ತಾಪ್ರಶಸ್ತದಿಂ ವಿಹಾಯೋಗತಿನಾಮಂ ದ್ವಿವಿಧಮಕ್ಕುಂ ಉಚ್ಚನೀಚಭೇದದಿಂ ಗೋತ್ರ[4]ನಾಮಂ[4] ದ್ವಿವಿಧಮಕ್ಕುಂ ದಾನ ಲಾಭ [5]ಭೋಗೋಪಭೋಗ[5] ವೀರ್ಯಭೇದದಿಂದಂತರಾಯಕರ್ಮಂ ಪಂಚವಿಧಮಕ್ಕು ಮಿಂತು ಮೂಲಪ್ರಕೃತಿಗಳೆಂಟಕ್ಕುಮುತ್ತರಪ್ರಕೃತಿಗಳ್ ನೂಱನಾಲ್ವತ್ತೆಂಟಕ್ಕು ಮುತ್ತರೋತ್ತರ ಪ್ರಕೃತಿಗಳಸಂಖ್ಯಾತ [6]ಭೇದಮಕ್ಕುಂ[6] ಮೊದಲ ಮೂಱು ಪ್ರಕೃತಿಗಳಂತರಾಯಕ್ಕಂ ತ್ರಿಂಶತ್ಕೋಟಾಕೋಟಿ ಸಾಗರೋಪಮಸ್ಥಿತಿಯಕ್ಕುಂ ನಾಮಗೋತ್ರಂಗಳ್ಗೆ ವಿಂಶ[7]ತಿಕೋಟಿ[7]ಸಾಗರೋಪಮ ಸ್ಥಿತಿಯಕ್ಕುಮಾಯುಷ್ಕರ್ಮ

---

1 ಪ್ತ (ಚ) 2 ರ (ಚ) 3 ಸ್ಪರ್ಶನ (ಕಗಜ) 4 ಕರ್ಮಂ (ಕಗಚ) 5 ಭೋಗ (ಕ) 6 ಮಕ್ಕುಂ (ಗಜ) 7 ತಿ (ಗಚಜ)

*—* ಇಲ್ಲ (ಗಚಜ)

ಮೂವತ್ತುಮೂಱು ಸಾಗರೋಪಮಕಾಲಮುತ್ಕೃಷ್ಟದಿಂ ಸ್ಥಿತಿಯಕ್ಕುಂ ಪೆತ್ತುಂ ವೇದನೀಯಕರ್ಮ ಪನ್ನೆರಡು ಮುಹೂರ್ತಮುೞಿದ ಕರ್ಮಂಗಳೆಲ್ಲಮಂತ ರ್ಮುಹೂರ್ತಕಾಲ ಜಘನ್ಯದಿಂ ಸ್ಥಿತಿಯಕ್ಕುಮೊಂದು ಮೂಲೋತ್ತರಭೇದದಿಂ ಭಿನ್ನ ಕರ್ಮಪ್ರಕೃತಿಗಳಂ ಸಂಕ್ಷೇಪಕ್ರಮದೊಳಱಪಿ ಕರ್ಮಾವೃತಂಗಳುಂ ಕರ್ಮವಿಮುಕ್ತಂ ಗಳುಮಪ್ಪ ಜೀವಾದಿದ್ರವ್ಯಂಗಳಾಧಾರಭೂತಮಪ್ಪ ಲೋಕವಿಭಾಗಮೆಂತೆಂದೊಡೆ

ಮೊದಲೊಳ್ ವೇತ್ರಾಸನದೊಂ
ದಿದಂದಮಂ ನಡುವೆ ಝಲ್ಲರೀವಿಭ್ರಮಮಂ
ತುದಿಯೊಳ್ ಮೃದಂಗಮಂ ಪೋ
[1]ಲ್ತುದು ಲೋಕಮಿ[1]ದಲ್ತೆ ಲೋಕದೊಂದಾಕಾರಂ ೩

ಸಂಗತ ವೈಶಾಖಸ್ಥಾ
ನಂ ಗುರುಕಟಿ ನಾಭಿಘಟಿತಕರನೆಂಬಿನೆಗಂ
ರಂಗಂಬೊಕ್ಕಭಿನಯಿಪ ನ
ಟಂಗೆಣೆಯೆನಿಸುವುದು ಕಣ್ಗೆ ಲೋಕಾಕಾರಂ ೪

ಅಂತು ಗೋಮೂತ್ರಚ್ಛವಿಯುಂ ಮುದ್ಗಚ್ಛವಿಯುಂ ಕಪೋತಚ್ಛಾಯೆಯು ಮಪ್ಪ ಘನೋದಧಿಯುಂ ಘನಾನಿಳನುಂ ತನುವಾತಮುಮೆಂಬ ವಾಯುತ್ರಯದಿ ನಾವೇಷ್ಟಿತಮುಂ ಚತುರ್ದಶ ರಜ್ಜೂತ್ಸೇಧಮುಂ ಸಪ್ತೈಕ ಸಂಖ್ಯೈಕ ರಜ್ಜುವಿಸ್ತಾರ ಮುಮಕೃತ್ರಿಮಮುಮಪ್ಪ ಲೋಕಾಕಾಶದ ಮಧ್ಯಮಪ್ರದೇಶಮನಲಂಕರಿಸಿ

ಇದು ಭೂಪದ್ಮದ ಕರ್ಣಿಕಾವಿಳಸನಂ ಮೇಣಿಂತಿದಾಕಾಶಪ
ದ್ಮದ ಕಾವೆಂಬಿನಮಿಾ ಧರಾವಳಯದಿಂ ನಾಕಂಗಳಂ ಮುಟ್ಟೆ ನೀ
ಳ್ದು ದಿಗಂತಂಬರೆಗಂ ಪೊದೞ್ದುದವಿ ಜಂಬೂದ್ವೀಪಮಧ್ಯಪ್ರದೇ
ಶದೊಳೊಪ್ಪಿರ್ದುದು ನಾಕಲೋಕವಿಭವವ್ಯಾಭಾಸಿ ಹೇಮಾಚಲಂ ೫

ಮೊತ್ತಮೊದಲ್ ಚಿತ್ರಾವನಿ
ಗೊತ್ತಿರ್ದುದು ನಟ್ಟನಡು ಪೊದೞ್ದುದು ದೆಸೆಯೊಳ್

1 ಲ್ತು (ಗಜ)

ತುತ್ತ್ರತುದಿ ರುತು ವಿಮಾನವು
ನೊತ್ತಿರ್ದುದು ನಗದ ಪೆಂಪನದನೇವೊಗಟಿಪ್ಪೆಂ ೬

ಅಂತು ನವನವತಿಸಹಸ್ರಂ ಯೋಜನೋತ್ಸೇಧಮುಂ ಸಹಸ್ರಯೋಜನಾಧಃ ಪ್ರವಿಷ್ಟಮುಮಪ್ಪ ಮಂದರಾಚಲದಧೋಭಾಗದ ಚಿತ್ತೆಯೆಂಬ ನೆಲದಿಂ ಕೆಳಗೆ ಪದಿನಾಱು ಸಾಸಿರ ಯೋಜನಾಂತರದ ಖರಭಾಗದೊಳ್ ನಾಗಾದಿ ನವವಿಧ *ಭವನ ವಾಸಿಕ ನಿವಾಸಮಿರ್ದುದವರ ಶರೀರೋತ್ಸೇಧಂ ದಶ ಧನುಃಪ್ರಮಾಣಮುಮಕ್ಕುಮ ವರ್ಗೆಲ್ಲಮನುಕ್ರಮದೊಳ್ ಮೂಱುಮೆರಡುವರೆಯುಮೆರಡುವೊಂದುವರೆಯುಂ ಪಲ್ಯೋಪಮಾಯುಮುತ್ಕೃಷ್ಟದಿಂದಮಕ್ಕುಮವರ* ಭವನಂಗಳೆಲ್ಲಮೇೞುಕೋಟಿ ಯುಮೆಂಟು ಲಕ್ಕಮುಮಕ್ಕುಂ ಅಲ್ಲಿಂ ಕೆಳಗೆ ಚತುರಶೀತಿ ಸಹಸ್ರ ಯೋಜನಾಂತರ ದುಪಾಂತದೊಳಸುರಕುಮಾರರಿರ್ಪರವರ ಶರೀರೋತ್ಸೇಧಂ ಪಂಚವಿಂಶತಿ ಬಾಣಾಸನ ಮಕ್ಕುಮವರ್ಗುತ್ಕೃಷ್ಟದಿನೇಕಸಾಗರೋಪಮಾಯುಷ್ಯಮಕ್ಕುಮವರ ಭವನಂಗಳೆಲ್ಲಂ ಚತುಷ್ಷಷ್ಟಿಲಕ್ಷ ಪ್ರಮಾಣಮುಮಕ್ಕುಮಲ್ಲಿಂ ಕೆಳಗಶೀತಿ ಸಹಸ್ರ ಯೋಜನಾಂತರದು ದಕಭಾಗದೊಳ್ ಘರ್ಮೆಯೆಂಬ ಪೆಸರ ರತ್ನಪ್ರಭೆಯೆಂಬ ಮೊದಲ ನರಕಮಿರ್ದುದಾ ನರಕಬಿಲಂಗಳೆಲ್ಲಂ ತ್ರಿಂಶಲ್ಲಕ್ಷ ಪ್ರಮಾಣಮಕ್ಕುಮಾ ನರಕ ಶರೀರೋತ್ಸೇಧಂ ಏೞು ಬಿಲ್ಲುಂ ಮೂಱು ಮೊೞನುಮಾಱಂಗುಲಮುಮಾಗೆ ಹುಂಡಸಂಸ್ಥಾನರುಂ ತೃತೀಯವೇಧರುಂ [1]ಪೂ[1]ತಿಗಂಧರುಂ ಮಷೀಮಲಿನವರ್ಣರುಂ ಕೃಷ್ಣ ಲೇಶ್ಯಾಪರಿ ಣಾಮರುಮಪ್ಪಪವರ್ಗಮಯುತವರ್ಷಂ ಜಘನ್ಯಾಯುಮಾದಿಯಾಗೆ ಸಮಯೋತ್ತರ ಕ್ರಮದಿನೇಕಸಮುದ್ರೋಪಮಂಬರಮನಪವರ್ತ್ಯಾಯುಷ್ಯರಪ್ಪರಲ್ಲಿಂದತ್ತ ಸಂಖ್ಯಾತ ಯೋಜನಾಂತರದೊಳ್ [2]ಹಂಸೆಯೆಂಬ ಪೆಸರ ಶರ್ಕರಾಪ್ರಭೆಯೆಂಬೆರಡನೆಯ ನರಕಮಿರ್ದುದಾ ನರಕಬಿಲಂಗಳೆಲ್ಲಮಿಪ್ಪತ್ತೈದು ಲಕ್ಕಮಕ್ಕುಮಾ ನಾರಕರಾಯು ಮುತ್ಕೃಷ್ಟದಿಂ ತ್ರಿಸಾಗರೋಪಮುಮಕ್ಕುಮಲ್ಲಿಂದತ್ತಲೇಕರಜ್ಜು ಪ್ರಮಾಣಾಂತರದೊಳ್ ಮೇಘೆಯೆಂಬ ಪೆಸರ ವಾಲುಕಪ್ರಭೆಯೆಂಬ ಮೂಱನೆಯ ನರಕಮಿರ್ದುದಾ ನರಕಬಿಲಂ ಗಳೆಲ್ಲಂ ಪದಿನೈದು ಲಕ್ಕಮಕ್ಕುಮಾ ನಾರಕರಾಯುಷ್ಯಮುತ್ಕೃಷ್ಟದಿಂ ಸಪ್ತಸಾಗ ರೋಪಮುಮಕ್ಕುಮಲ್ಲಿಂದೇಕ ರಜ್ಜು ಪ್ರಮಾಣಾಂತರದೊಳಂಜನೆಯೆಂಬ ಪೆಸರ ಪಂಕ ಪ್ರಭೆಯೆಂಬ ನಾಲ್ಕನೆಯ ನರಕಮಿರ್ದುದಾ ನಾರಕ ಬಿಲಂಗಳೆಲ್ಲಂ ದಶಲಕ್ಕಮಕ್ಕುಮಾ ನಾರಕರಾಯುಮುತ್ಕೃಷ್ಟದಿಂ ಪತ್ತು ಸಮುದ್ರೋಪಮುಮಕ್ಕುಮಲ್ಲಿಂದತ್ತಮೇಕ

1 ಘಾ (ಕಟತ) 2 ದಂ (ಕಚಜ)

* —* (ಚ) ಇಲ್ಲ.

ರಜ್ಜು ಪ್ರಮಾಣಾಂತರದೊಳಮರಿಷ್ಟೆಯೆಂಬ ಪೆಸರನುಳ್ಳ ಧೂಮಪ್ರಭೆಯೆಂಬಯ್ದನೆಯ ನರಕಬಿಲಂಗಳೆಲ್ಲಂ ಮೂಱು ಲಕ್ಕಮಕ್ಕುಮಾ ನಾರಕರಾಯುವುತ್ಕೃಷ್ಟ[1]ದಿಂ[1] ಪದಿನೇೞು ಸಮುದ್ರೋಪಮಮಕ್ಕುಮಲ್ಲಿಂ ಕೆಳಗೇಕರಜ್ಜು ಪ್ರಮಾಣಾಂತರದೊಳಮಘವಿಯೆಂಬ ಪೆಸರ ತಮಪ್ರಭೆಯೆಂಬಾಱನೆಯ ನರಕಮಿರ್ದುದಾ ನರಕಬಿಲಂಗಳೆಲ್ಲಂ ಅಯ್ದುಗುಂದೆ ಲಕ್ಕಮಕ್ಕುಮಾ ನಾರಕರಾಯುಮುತ್ಕೃಷ್ಟದಿಂ ದ್ವಾವಿಂಶತಿ ಸಾಗರೋಪಮಮುಮಕ್ಕುಮಲ್ಲಿಂ ಕೆಳಗೇಕ ರಜ್ಜು ಪ್ರಮಾಣಾಂತರದೊಳ್ ಮಾಘವಿಯೆಂಬ ಪೆಸರ ಮಹಾತಮಪ್ರಭೆಯೆಂಬೇೞನೆಯ ನರಕಮಿರ್ದುದುಮಲ್ಲಿ ಕಾಳ ಮಹಾಕಾಳ ರೌರವ ಮಹಾರೌರವ ಪ್ರತಿಷ್ಠಾನಂಗಳೆಂಬಯ್ದು ಬಿಲಂಗಳಕ್ಕುಮಾ ನಾರಕರಾಯುಮುತ್ಕಷ್ಟದಿಂ ತ್ರಯಸ್ತ್ರಿಂಶತ್ಸಾಗರೋಪಮಮಕ್ಕುಮಂತು ರತ್ನಪ್ರಭೆಯಿಂ ತೊಟ್ಟು ನಾಲ್ಕುವರೆ ನರಕಭೂಮಿವರಂ ಉತ್ಕೃಷ್ಟಮುಷ್ಣಮುಮಲ್ಲಿಂದ ತ್ತೆರಡುವರೆ ಭೂಮಿವರಮತಿಶೀತಮಕ್ಕುಂ ಪ್ರಥಮ ನಾರಕೋತ್ಸೇಧ ದ್ವಿಗುಣೋತ್ಸೇಧಮುಮಂತಾ ನಾರಕರ್ಕಳುಮವರನುಕ್ರಮದಿಂದಮಿಂತಿರ್ದ್ದೇೞು ನರಕಂಗಳೇಕ ರಜ್ಜು ಪ್ರಮಾಣದೊಳ್

> ಆವಿರ್ಭೂತ ತಮೋಮಯ
> ಮಾವಿಷ್ಕೃತ ದುಃಖಮುಂಟು ಲೋಕಾಕಾಶಂ
> ಜೀವಂಗಳಗೇಕೇಂದ್ರಿಯ
> ಜೀವಕ್ಕುತ್ಪತ್ತಿಯಾದುದನಿತೆ ನಿಗೋಧಂ ೭

ಅಲ್ಲಿ ಸೂಕ್ಷ್ಮವನಸ್ಪತಿ ಕಾಯ ಜೀವಂಗಳಂತರ್ಮುಹೂರ್ತದೊಳಱುವ[2]ತ್ತಾಱು ಸಾಸಿರದ ಮುನ್ನೂಱಱುವತ್ತಾಱು ಸೂೞಲ್ಲಿಯೆ ಪುಟ್ಟುತ್ತುಂ ಪೊಂದುತ್ತುಮಿರ್ಕುಮಾ ಪೆಱಗೆ ಪೇೞ್ದ ನರಕಬಿಲಂಗಳಂ ಮೇಗಳೊಟ್ಟುಗಳೊಳಿಟ್ಟ ಜೇನಪುಟ್ಟಿಗಳುಮನು ದ್ದಿಗಳುಮಂ ಖರಕರಭ ಕಾಕೋಳೂಕ ಸೃಗಾಲ ಶಾರ್ದೂಲ ಶುನಕ ಸೂಕರಾದಿ ಮುಖಂಗಳುಮನನುಕರಿಸುವ ಭೀಭತ್ಸ ಕುತ್ಸಿತೋತ್ಪತ್ತಿಪ್ರದೇಶಂಗಳೊಳ್ ಮಿಥ್ಯಾದರ್ಶನಾನಂತಾನುಬಂಧಿ ಕ್ರೋಧ ಮಾನ ಮಾಯಾ ಲೋಭಾಭಿಭೂತರುಂ ಬಹ್ವಾರಂಭ ಪರಿಗ್ರಹಗೃಹೀತರುಂ ಮೃಗವ್ಯಸನವಶಗತರುಮನೃತವಚನನಿರತರುಮನೇಕ ದುರಾಚರಣಪರಿಣತರುಂ ಕೃಷ್ಣಲೇಶ್ಯಾಪರಿಣಾಮರುಂ ಪರದಾರಲೋಲುಪರುಂ ಮಧುಮದ್ಯಮಾಂಸಲಂಪಟರುಮಪ್ಪ ಮಹಾಪಾಪಕರ್ಮಕರ್ಮಠರುಂ ಅಘೋ



---
1 ದಿಂ ಪತ್ತು ಸಾಗರೋಪಮ (ಗಚಜ) 2 ತ್ತು (ಚ)

ಮುಖರಾಗಿ ನೆಲಸಿ ಮುಹೂರ್ತಮಾತ್ರದೊಳಗಾಹಾರ ಶರೀರೇಂದ್ರಿಯೋಚ್ಛ್ವಾಸ ಭಾಷಾಮನಂಗಳೆಂಬಾಱುಂ ಪರ್ಯಾಪ್ತಿಗಳ್ ನೆಱೆದು

ಕಡುಗಾಯ್ದ ಶಿಲೆಗಳೊಳ್ ಕೂ
ರ್ಪುಡುಗದ ಕೈದುಗಳೊಳೆಱಗಿ ಪೊಯ್ದೆಡೆಯೊಳಗಂ
ದಡಸಿ ಜವದೂತರಂದದೆ
ಬಡಿಗಳ್ವೆರಸೆಯ್ದೆ ಮುಸುಱಿ ರೌದ್ರಾಕಾರರ್ ೮

ದಱದಱನೆೞೆಯೆೞೆ ಪಿಡಿ ಪಿಡಿ
ತಱಿ ತಱಿ ಕರಗಸದೊಳಿಕ್ಕಿ ಸೀೞ್ ಸೀೞ್ ಕೊಲ್ ಕೊ
ಲ್ಲಿಱಿಯಿಱಿ ತಿವಿ ತಿವಿ ಪೊಯ್ ಪೊಯ್
ಕೊಱೆ ಕೊಱೆಯೆಂದೊದಱಿ ಗಜಱಿ ಗರ್ಜಿಸಿ ಮುಳಿವರ್ ೯

ಪಿಡಿ ಪಿಡಿ ಕಟ್ಟು ಕಟ್ಟಡಸಿ ಘಾತಿಸು ಘಾತಿಸು ಸಂಧಿಸಂಧಿಯುಂ
ಕಡಿ ಕಡಿ ಕುತ್ತು ಕುತ್ತು ಬಲಿಗೆಯ್ ಬಲಿಗೆಯ್ ಪೆಱವೆಣ್ಗೆ ಸೋಲ್ವ ಕ
ಳ್ಗ ಡಿವಡದಿಂಬ ನಂಬಿದರನೋವದೆ ಛಿದ್ರಿಪ ಕಳ್ವ ಕಳ್ಳರೊಳ್
ನುಡಿವೞಿಯಾದನೆಂದು ನವನಾರಕರಂ ಪರಿದೆಯ್ದೆ ನಾರಕರ್ ೧೦

ಅಂತು ಕಷ್ಟಾನಿಷ್ಟ ಕಠೋರ ಕರ್ಕಶ ಪರುಷ ವಿಷಮಂಗಳಂ ನುಡಿಯುತ್ತು ಮೋರೊರ್ವರನಗುರ್ವಾಗಿ ವಿಕಟಕೂಟ ಶಾಲ್ಮಲಿಗಳನಡಿಗಡಿಗಡರಿಸುತ್ತುಂ ದಿನಂತರ ಸಂತ್ರಾಕಣಾಕಾರಿಗಳಪ್ಪ ಇಕ್ಷುಯಂತ್ರದೊಳಿಕ್ಕಿ ಪೀೞಿಸುತ್ತುಂ ತತ್ತಱಗುದಿದು ಕಾಯ್ದ ಕಾಯ್ಗೊಂಡದೆಣ್ಣೆಯೊಳರ್ದಿ ಬರ್ದಿಸುತ್ತುಮಾಪಾದಮಸ್ತಕಂಬರಂ ವ್ಯಾತ್ರಿಸಿ ಪತ್ತಿ ತಿದಿಯುಗಿಯುತ್ತೆ ಕೇಸುರಿಯ ಬಣ್ಣಮಾಗೆ ಕರಮೆ ಕರಗಿಸಿದ ಕಾಳಾಯಸರಸಮ ನೊಟ್ಟಯಿಸಿ ಗೊಟ್ಟಂಗುಡಿಯಿಸುತ್ತೆ ಕತ್ತಿಗೆ ಕೈಬಾಚಿಯೊಳಂ ಕೆೞೆಕೆೞೆದು ತಱಿ ತಱಿದು ಕೊಱೆಕೊಱೆದವರ ಬಾಯೊಳಗೆ ಅವರ ಖಂಡಂಗಳನಡಸಿ ಗಿಡಿಯುತ್ತುಂ ನಿಡಿಯ ನಾಲಗೆಯುಂ ಪಿಡಿದು ಪೆಡತಲೆಯುಂ ತೆಗೆದೆರಡು ಕೆಯ್ಯೊಳ್ ಮುಚ್ಚಿ [1]ಚು[1]ಚ್ಚುತ್ತಮಸುರಕುಮಾರವಿಕ್ರಿಯಾಸಮುದ್ಭೂತ ವಿಯದ್ವೈತರಣೀ ತರಂಗಿಣಿಯ ಪೆರ್ಮಡುಗಳೊಳಿದಿರುಂ ಬೞಿಯುಂ ಮಿಸಿಸುತ್ತುಂ ಮತ್ತಂ ಕಾಲಂ ಪಿಡಿದು ಬೀಸಿ

1 ಮು (ಅಚ್ಚು)

ಯುಂಪಡ್ಡಂ ಪಿಡಿದು ಕಾಸಿಯುಂ ವಿಡಿಯಂ ಪರಿಯೆಯುಂ ಮೂಳೆಯಂ ಮುಱಿ ಯೆಯುಂ ಚಗಟೆಗಳೆಯೆಯುಂ ನಡುಬೆನ್ನಂ ಸಱ್ರನೆ ಸೀೞ್ಚಿಯುಂ ತೊಡೆಯನುಡಿ ಯೆಯುಂ ತಲೆಯಂ ಕಡಿಯೆಯುಂ ಕರುಳನುರ್ಚೆಯುಂ ಮೊಗವಂ ಚುರ್ಚೆ[1]ಯು ವು[1]ಳ್ಳಿಯಂ ಕುತ್ತಿಯುಮಿರ್ಕುಳೊಳೊತ್ತಿಯುಂ ಬರಿಯಂ ಸುರಿಯೆಯುಂ ಗೊಂಕೆ ಯಂ ನುಲಿಯೆಯುಂ ನಖದೊಳ್ ಸೂಜಿಯಂ ಪೆಟ್ಟಿಯುಂ ಚಾತಬೊಕ್ಕಣಂ ಗಟ್ಟಿಯುಂ ಕರ್ಜಱಿಯನೂಱ[2]ಯುಂ ಮೂಗಿಟ್ಟೆಱಿಯೆಯುಂ[2] ಬಾಯಬೆತ್ತೆಱಿ ಯೆಯುಂ ಪಲ್ಲಂ ಕಟಿಲೆಗುಟ್ಟಿಯುಂ ನೀರೊಳಿಕ್ಕಿಮೆಟ್ಟಿಯುಂ ನವಖಂಡಂದಱಿಯೆ ಯುಂ ಬಸುಱಿಂ ಪೋಳೆಯುಯುಂ ಪೊಳ್ಳನೆ ಸೀೞ್ಚಿಯುಂ ಬಱಗಯ್ಯೊಳೆ ಗುದ್ದಿಯುಂ ಪುಡುಕುನೀರೊಳದ್ದಿಯುಂ ಪುಟಪಾಕಂ ಸುಡೆಯುಂ ಮಡು ಪುಗ್ಗಿಡೆಯೆಯುಂ [3]ಬಾರೆತ್ತಿ[3] ಸೀೞ್ಚಿಯುಂ ಗುಗ್ಗುಳಂಬೊತ್ತಿಸೆಯುಂ ಮಸಗಲ್ಲಿನೊಳ್ ಮಸೆಯೆಯುಂ ಚಿತ್ರವಿಧಂಗೆಯ್ಯೆಯುಂ ಮತ್ತಮಸಿಪತ್ರವನನಿಕರ್ತದೊಳಂ ತಪ್ತಾಯಃಪುತ್ರಿಕಾಲಿಂಗ ನದೊಳಮತಿವಿಶಾಲ ಪಟ್ಟಕೋಳ್ಪಟ್ಟಣದೊಳಮತಿ ದಾರುಣ ಕ್ರಕಚವಿದಾರಣದೊಳ ಮತಿಕರಾಳ ಶೂಲಾರೋಹಣದೊಳಮತಿ ಭಯಂಕರ ಕುಕ್ಕುಟಾದ್ಯಾಗ್ರಹನಿಗ್ರಹ ದೊಳಮತಿಸ್ಫಾರ ವಿಸ್ಫುಲಿಂಗಸ್ಥಿತಾವರೋಹಣದೊಳಂ ದಂಡನ ಖಂಡನ ತಾಡನ ಪೀಡನ ಗರ್ಜನ ತರ್ಜನಾದಿಗಳನೆಯ್ದಿ ನಿಲಲೆಡೆಯಿಲ್ಲದಡಹಡಿಸಿ ಸುಡುಮಿಡುವಂದು ನಡನಡ ನಡುಗಿ ಮಿಡುಮಿಡುಮಿಡುಕಿ ಪುಡುಪುಡುಪುಗ್ಗಿ ತಡತಡದಡಿಸಿ ಬೀೞುತ್ತು ಮೇೞುತ್ತುಮಿನಿಸಪ್ಪೊಡಮುಸಿರ್ [4]ಪತ್ತುವ[4]ಡೆಯದೆ ಶಾರೀರಮಾನಸಕ್ಷೇತ್ರಜ ಪರ ಸ್ಪರೋದೀರಿತ ದನುಜೋದೀರಿತಂಗಳೆಂಬ ಪಂಚವಿಧ ದುಃಖಪ್ರಪಂಚಂಗಳಿಂ ಪೂರ್ವ ಭವಸಂಚಿತ ದುಷ್ಕರ್ಮಫಲಮನನುಭವಿಸುತ್ತುಮಾಟವಿಟಂ ಬಂದು ಮಲಮಲ ಮಱುಗಿ ಪುಯ್ಯಲಿಡುತ್ತುಂ

ಆವರನುಭವಿಸುವರಾಯುವ
ತವುದಲೆ ವರಮಧಿಕ ದುಃಖಮಂ ಸಣ್ಣಿಗೆಯಿಂ
ದವರಂ ಸಣ್ಣಿಸುವ್ಪೊಡಮಿಂ
ತವರಸುಗಳ್ ಪೋಗವಣಮೆ ಕರಗವು ತನುಗಳ್ ೧೧

ಕೇವಲಮೆ ನರಕದುಃಖಂ
ಕೇವಲವಿಜ್ಞಾನವಿಷಯಮಲ್ಪಶ್ರುತದೊಳ್

---

1 ಯುಂಮೆ (ತ) 2 ಯುಂ (ಗಜಜ) 3 ಬಾಱಿಕಿ (ತ) 4 ಪತ್ತಿಪ (ಜ)

ಭಾವಿಪೊಡಾರ್ ನೆಱೆ ನುಡಿವರೊ
ದೇವಂ ಸರ್ವಜ್ಞನೊರ್ವನೇ ನೆಱೆನುಡಿಗುಂ ೧೨

ಎಂದು

ಮಂಗಳಗುಣರೇೞಿಂ ನರ
ಕಂಗಳ ನಾರಕರ ದಂಡನಾದಿಗಳಂ ದುಃ
ಖಂಗಳನಭಿವರ್ಣಿಸಿದೊಡ
ಸುಂಗೊಂಡುದು ಮೆಯ್ ಭಗೀರಥಕ್ಷಿತಿಪತಿಯಾ ೧೩

ಎಂದಧೋಲೋಕಮನಭಿವರ್ಣಿಸಿ ಮಧ್ಯಮಲೋಕಮನಾಲೋಕಗುರುಗಳಂ ಬಣ್ಣಿಸಲ್ ಬಗೆದೀ ನರರಿರ್ದ. ಜಂಬೂದ್ವೀಪದ ಮಧ್ಯವರ್ತಿಯಪ್ಪ ಮಂದರದ ದಕ್ಷಿಣೋತ್ತರ ಪೂರ್ವಾಪರ ವಿದೇಹಂಗಳಿರ್ದವಲ್ಲಿ ಹಿಮವನ್ಮಹಾಹಿಮವನ್ನಿಷ[1]ಧ[1] ನೀಳರುಗ್ಮಿಶಿಖರಿಗಳೆಂಬಾಱು ಕುಲಪರ್ವತಂಗಳಿಂದಮವಱ ಮೇಗಣ ಪದ್ಮ ಮಹಾ ಪದ್ಮ ತಿಗಿಂಛ್ಛ [2]ಕೇಸರಿ[2] ಪುಂಡರೀಕ ಮಹಾಪುಂಡರೀಕಗಳೆಂಬ ಆಱುಂ ಮಹಾ ಸರೋವರಂಗಳಿಂದಂ ತನ್ನಿವಾಸಿನಿ ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬ ಱುವರ್ ಶ್ರೀ[3]ಯಾ[3]ದೇವಿಯರಿಂದಮಾ ಕೊಳದೊಳ್ ಪುಟ್ಟಿ ಬೇಱೆವೇಱೆ[3] ಪದಿನಾಱಿರುಸಾಸಿರಮುಱಿಕೆಯ ತೊಱೆಗಳ್ ಕೂಡಿ ಪೂರ್ವಾಪರ ಸಮುದ್ರಗಾಮಿ ಗಳಾದ ಗಂಗೆಯುಂ ಸಿಂಧುವುಂ ರೋಹಿತೆಯುಂ ರೋಹಿತಾಸ್ಯೆಯುಂ ಹರಿತೆಯುಂ ಹರಿಕಾಂತೆಯುಂ ಸೀತೆಯುಂ ಸೀತೋದೆಯುಂ ನಾರಿಯುಂ ನರಕಾಂತೆಯುಂ ಸುವರ್ಣ ಕೂಲೆಯುಂ [4]ರೂಪ್ಯ[4]ಕೂಲೆಯುಂ ರಕ್ತೆಯುಂ ರಕ್ತೋದೆಯುಮೆಂಬ ಪದಿನಾಲ್ಕು ಮಹಾನದಿಗಳಿಂದಂ ಹಿಮವನ್ಮಹಾಹಿಮವನ್ಮಧ್ಯದ ಹೈಮವತಮೆಂಬ ಜಘನ್ಯ ಭೋಗಭೂಮಿಯಿಂದಮಾ ಮಹಾಹಿಮವನ್ನಿಷಧಮಧ್ಯದ ಹರಿಯೆಂಬ ಮಧ್ಯಭೋಗ ಭೂಮಿಯಿಂದಂ ಮಂದರ ನಿಷಧಗಜದಂತಾಕಾರಮಪ್ಪ ಗಿರಿಯ ನಡುವಿರ್ದ ದೇವ ಕುರುವೆಂಬುತ್ತಮ ಭೋಗಭೂಮಿಯಿಂದಂ ಹೈಮವತ್ಯೈರಾವತ ಪ್ರತಿಬದ್ಧ ವಿಜಯಾರ್ಧ ಪರ್ವತಂಗಳಿಂದಮವಱ ಮೇಗಣ ನೂಱಪತ್ತು ಪೊೞಲಿಂದಮುಭಯ ವಿದ್ಯಾಧರ ಶ್ರೇಣಿಗಳಿಂದಮಾ ಗಜದಂತಗಿರಿಗಳಂ ಮುಟ್ಟಿ ಕಿನ್ನರ ಕಿಂಪುರುಷಾದಿ ವ್ಯಂತರಾವಾಸ

---

1 ಧ [ಮಂದರ ಗಜದಂತ] (ಟತ) 2 ಕೆ (ಜ) 3 ಯಾದಿ (ಕ) ಯಾ [ದಿ] (ಟತ)
4 ರೌಪ್ಯ (ಜ)

ನಿರಂತರಮಾಗಿರ್ದೆಂಟು ದಿಕ್ಕ[1]ರಿಗಿರಿ[1]ಗಳಿಂದಂ ನೀಲನಿಷಧಂಗಳೊಳ್ ಪುಟ್ಟಿ ಪೂರ್ವಾಪರ ವಿದೇಹಂಗಳ ಮೂವತ್ತೆರಡು ನಾಡುಗಳ ನಡುವೆ ಪರಿದ ಸೀತೆಯ ಸೀತೋದೆಯ ತಡಿವಿಡಿದಿರ್ದೈದು ಮಹಾಸರೋವರಂಗಳ ಪೂರ್ವಾಪರ ತಟನಿಕಟವರ್ತಿಗಳಾಗಿರ್ದ ನೂಱುಗೆಯ್ದು ಕನಕಗಿರಿಗಳಿಂದಂ ನೀಳನಿಸಧಂಗಳಂ ಸೋಂಕಿರ್ದ ಚಿತ್ರವಿಚಿತ್ರ ಯಮಕಮಿಷಕೂಟಂಗಳೆಂಬ ನಾಲ್ಕು ಯಮಕಗಿರಿಗಳಿಂದಂ ಮೇರುಗಿರಿಯ ದಕ್ಷಿಣ ಪಶ್ಚಿಮ ದಿಗ್ಭಾಗದೊಳ್ ಸರ್ವರತ್ನರಂಜಿತಮುಮನಾದೃತ ಗರುಡೇಂದ್ರ ಸುಂದರಮುಮಾಗಿರ್ದ ಶಾಲ್ಮಲೀದ್ರುಮದಿಂದಮಾ ಮಂದರದ ಪೂರ್ವೋತ್ತರ ದಿಗ್ಭಾಗದೊಳ್ ಪಂಚಶತ ಯೋಜನ ವಿಸ್ತಾರದೊಳಮಷ್ಟಶತ ಯೋಜನೋತ್ಸೇಧದೊಳಂ ನೆಱೆ[3]ದು ಕಲ್ಪದ್ರುಮಕಲ್ಪಮುಂ ಪೃಥ್ವೀಪರಿಣಾಮಮುಂ ವ್ಯಂತರಾವಸಮುಮಾಗಿರ್ದ ಜಂಬೂವೃಕ್ಷದಿನುಪಲಕ್ಷಿತ[2]ಮುಮೇಕ ಲಕ್ಷಯೋಜನಮು[2]ಮಾಗಿರ್ದ ಜಂಬೂ ದ್ವೀಪಮಂ ಬಳಸಿರ್ದ ವಜ್ರವೇದಿಕೆಯಿಂದಂ ಪೊಱಗೆರಡು ಲಕ್ಷ ಯೋಜನದಗಲಮಂ ತಾಳ್ದಿ ಲವಣಸಮುದ್ರಮಿರ್ದುದಲ್ಲಿಂ ಪೊಱಗೆ ನಾಲ್ಕು ಲಕ್ಷ ಯೋಜನದೊಳ್ ನೆಱೆ[3]ದ ಧಾತಕೀಷಂಡ ದ್ವೀಪಮಿರ್ದುದಾ ದ್ವೀಪದಿಂ ಪೂರ್ವಾಪರ ವಿದೇಹಂಗಳಂ ಚತುರಶೀತಿ ಸಹಸ್ರ ಯೋಜನೋತ್ಸೇಧದೊಳೆರಡು ಮಂದರಗಿರಿಗಳಿರ್ದುದಾ ದ್ವೀಪಮನೆಂಟು ಲಕ್ಕೆಯೋಜನದಗಲದೊಳೆ ಬಳಸಿ ಕಾಳೋದಕ ಸಮುದ್ರಮಿರ್ದುದಲ್ಲಿಂದತ್ತ ಷೋಡಶ ಯೋಜನೋಪಲಕ್ಷಿತಮಾಗಿ ಪುಷ್ಕರವರ ದ್ವೀಪಮಿರ್ದುದದಱ ನಡುವೆ ಮಾನುಷೋತ್ತ[3]ರಾಚಳ[3]ಮಿರ್ದುದದಱ ಮಧ್ಯಪ್ರದೇಶದೊಳೆಂಟು ಲಕ್ಷ ಯೋಜನ ದಗಲದ ಪುಷ್ಕರಾರ್ಧದ ಪೂರ್ವಾಪರ ದಿಗ್ಭಾಗದೊಳೆರಡು ಮಂದರಗಿರಿಗಳಿರ್ದು ವಿಂತೆಲ್ಲಮೈದು ಮಂದರಗಿರಿಗಳಾಗೆ

ನೆಗಟ್ಟಿರ್ದೈದುಂ ಮಂದರ
ನಗಂಗಳೊಳ್ ನಾಲ್ಕು ನಾಲ್ಕು ಬನಮೊಪ್ಪುಗುಮಾ
ಸೊಗಯಿಪ ವನತತಿಯೊಳೆ ನಾ
ಡೆ ಗಡೆಸೆಗುಂ ನಾಲ್ಕು ನಾಲ್ಕು ಜಿನಭವನಂಗಳ್ ೧೪

[4]ಅ[4] ಮಂದರಂಗಳಲ್ಲಿ ಭರತೈರಾವತಂಗಳುಂ ಪೂರ್ವಾಪರ ವಿದೇಹಂಗಳುಂ ಭೋಗ ಭೂಮಿಗಳುಮಿಲ್ಲಿಯ ಮಂದರಕ್ಕೆ ಪೇೞ್ದ ತೆಱದೊಳಕ್ಕುಮಾ ಪೂರ್ವಾಪರ ವಿದೇಹಂಗಳ ಮನುಷ್ಯರುಂ ಪೂರ್ವಕೋಟಿ ವರ್ಷಂಬರಮಾಯುಷ್ಯರುಂ ಪಂಚಶತ ಶರಾಸನೋತ್ಸೇಧರುಮಪ್ಪರಲ್ಲಿ

---

1 ರಿ (ಚಜ) 2 ಮು (ಗಚಜ) 3 ಪರ್ವತ (ಗಚಜ) 4 ಅದು (ಗಜ)

ಪದದೊಳೆ ಕೊಳ್ವವಲ್ಲಿ ನುಡಿ[1]ಪರ್ವಿ ಬಱಿಂ ಪಸಪೆಂಬುದಾವುದಂ
ತದಱಿಕೊಳವಿಲ್ಲ ತೀರ್ಥಕರರೀಗಳುಮಾಗಳುಮಿರ್ಪರನ್ಯ ಧ
ರ್ಮದ ಪೆಸರಿಲ್ಲ ಧರ್ಮನಿರತರ್ ನೃಪರೆಲ್ಲರುಮೆಂದೊಡೇನನೆಂ
ಬುದೊ ಸಕಳಾವನೀತಿಲಕಮೆನ್ನದರಾರೆರಡುಂ ವಿದೇಹಮಂ ೧೫

ಆ ಜಘನ್ಯೋತ್ತಮ ಮಧ್ಯಮ ಭೋಗಭೂಮಿಗಳೊಳಮನುಕ್ರಮದಿನೇಕ ದ್ವಿತ್ರಿ ಪಲ್ಯೋಪಮಾಯುಷ್ಯರುಂ ದ್ವಿಚತುಷ್ಷಟ್ಸಹಸ್ರ ಚಾಪೋತ್ಸೇಧರುಮಪ್ಪ ದಂಪತಿಗಳಾಗೆ

ಪೆಸರಿಂ ಜ್ಯೋತಿಷ್ಕ ದೀಪಾಸನ ವಸನ ಲಸದ್ಭೂಷಣಾತೋದ್ಯಮದ್ಯಾ
ವಸಥಸ್ರಗ್ಭೋಜನಾಂಗಪ್ರಕಟತರ ದಶಾಂಗಾಮರಾನೋಕಹಂ ಸಂ
ದಿಸುಗುಂ ತಾನೇನನೊಂದಂ ಬಗೆದರದನೆ ತಂದ[1]ಟ್ಟಿ[1]ಯಿಂದೆಂದೊಡೇನೆಂ
ದುಸಿರಲ್ಕಂ ಬಾರದಾ ದಂಪತಿಗಳ ಪರಮಾಗಣ್ಯಪುಣ್ಯಪ್ರಭಾವಂ ೧೬

ಸುರಶೈಳಂ ನಿಷಧಾಚಳಂ ಸುರನಗಂ ನೀಳಾಚಳಂ ಮೇರೆಯಾ
ಗಿರೆ ಶುಂಭದ್ಗಜದಂತಶೈಲತಟದೊಳ್ ಸೀತಾನದೀತೀರಮೊ
ಪ್ಪಿರೆ ಸೀತೋದೆಯ ಚೆಲ್ವ ಮಿಕ್ಕಿರೆ ದಶಾಂಗೇಂದ್ರದ್ರುಮಜ್ಯೋತಿಗಳ್
ಬೆರಸಿರ್ದುತ್ತಮ ಭೋಗಭೂಮಿಯೆರಡುಂ ಸಗ್ಗಕ್ಕೆ ಮೇಲಲ್ಲವೇ ೧೭

[2]ಆ ಮಾನುಷೋ[3]ತ್ತರ ಪರ್ವತದಿಂದೊಳಗೆರಡುವರೆ ದ್ವೀಪಮುಮೆರಡುವರೆ ಸಮುದ್ರಮಿರ್ದುವಲ್ಲಿಂ ಪೊಱಗೆ ಪುಷ್ಕರಸಮುದ್ರಮಿರ್ದುದಲ್ಲಿಂ ಪೊಱಗೆ ವಾರುಣ ದ್ವೀಪಮುಂ ವಾರುಣವರ ಸಮುದ್ರಮುಂ ಕ್ಷೀರವರ ದ್ವೀಪಮುಂ ಕ್ಷೀರವರ ಸಮುದ್ರಮುಂ ಘೃತವರ ದ್ವೀಪಮುಂ ಘೃತವರ ಸಮುದ್ರಮುಂ ಇಕ್ಷುವರ ದ್ವೀಪಮು ಮಿಕ್ಷುವರ ಸಮುದ್ರಮುಮಲ್ಲಿಂ ಪೊಱಗೆ ನಂದೀಶ್ವರದ್ವೀಪಮಿರ್ದುದು

ಸಕಳಾ[3]ಶಾ[3]ಚಕ್ರಮುಂ ಪಜ್ಜಳಿಪ ಮಣಿಗಣಾಲೋಕಮಾಷಾಢದೊಳ್ ಕಾ
ರ್ತಿಕದೊಳ್ ಪರ್ಯಾಯದಿಂ ಫಾಲ್ಗುಣದೊಳೆಸೆಯೆ ಶುದ್ಧಾಷ್ಟಮಿಯಾವಾಸರಂ ಭ
ಕ್ತಿಕರಂ ಕೈಗಣ್ಮೆ ಬಂದರ್ ಜನಪರಿಕರದಿಂದರ್ಚಿಸುತ್ತಿರ್ಪ ವೈಮಾ
ನಿಕರಿಂ ನಂದೀಶ್ವರದ್ವೀಪದ ಜಿನಭವನಂ ಸ್ತೋತ್ರಪಾತ್ರಂ ಪವಿತ್ರಂ ೧೮

1 ತ್ತಿ (ಕಗಚಜ) 2 ಅಂತು ಮಾನುಸೋ (ಗಜ) 3 ವನಿಃ (ಗ)

ಆ ನಂದೀಶ್ವರದ್ವೀಪದಿಂ ಪೊಱಗೆ ನಂದೀಶ್ವರ ಸಮುದ್ರಮಿರ್ದುದಲ್ಲಿಂ ಪೊಱಗರುಣ ದ್ವೀಪಮುಂ ಅರುಣಸಮುದ್ರಮುಂ ಅರುಣಪ್ರಭಾದ್ವೀಪಮುಂ ಅರುಣಪ್ರಭಾ ಸಮುದ್ರಮುಂ ಕುಂಡಲದ್ವೀಪಮುಂ ಕುಂಡಲಸಮುದ್ರಮುಂ ಶಂಖದ್ವೀಪಮುಂ ಶಂಖಸಮುದ್ರಮುಂ ರುಚಕದ್ವೀಪಮುಂ ರುಚಕಸಮುದ್ರಮುಂ ಭುಜಗದ್ವೀಪಮುಂ ಭುಜಗಸಮುದ್ರಮುಂ ಕುಶದ್ವೀಪಮುಂ ಕುಶಸಮುದ್ರಮುಂ ಕ್ರೌಂಚದ್ವೀಪಮುಂ ಕ್ರೌಂಚಸಮುದ್ರಮುಮಿಂತುದ್ಧಾರದ ಪಲ್ಯೋಪಮದ ರೋಮರೇಣುಗಳೆನಿತೊಳವ ನಿತೆ ಲೆಕ್ಕದಿಂ ದ್ವೀಪಸಮುದ್ರಂ ದ್ವಿಗುಣ ದ್ವಿಗುಣಮಾಗಿರ್ದುವು

ವಳಯಾಕಾರದಿ [1]ಬ[1]ಳಸಿದ
ಜಳಧಿದ್ವೀಪಂಗಳಿಂದೆ ಕಡೆಯೊಳ್ ವಿಚಳ
ಜ್ಜಳಚರಸಂಕುಳಕೋಳಾ
ಹಳಮಿರ್ದತ್ತರ್ಣವಂ ಸ್ವಯಂಭೂರಮಣಂ ೧೯

ಅಲ್ಲಿಗೇಕರಜ್ಜು ಯೋಜನ ಪ್ರಮಾಣವಿಸ್ತಾರದಿಂ ಲೋಕಮಕ್ಕುಮಲ್ಲಿಂದತ್ತಲೋಕ ಮಕ್ಕುಮಿಾನಮ್ಮಿರ್ದ ಭರತಕ್ಷೇತ್ರದೊಳ್ ಪ್ರತಿಶ್ರುತಿಯುಂ ಸನ್ಮತಿಯುಂ ಕ್ಷೇಮಂ ಧರನುಂ ಕ್ಷೇಮಂಕರನುಂ ಸೀಮಂಧರ[2]ನುಂ ಸೀಮಂಕರನುಂ[2] ವಿಮಳವಾಹನನುಂ ಚಕ್ಷುಷ್ಮನುಂ ಯಶಸ್ವಿಯುಂ ಅಭಿಚಂದ್ರನುಂ ಚಂದ್ರಾಭನುಂ ಮರುದ್ದೇವನುಂ ಪ್ರಸನ್ನ[3]ಜಿತನುಂ[3] ನಾಭಿರಾಜನುಮಿಂತು ಪದಿನಾಲ್ಕು ಮನುಗಳಪ್ಪರ್ ವೃಷಭನು ನುಜಿತ[4]ನುಂ ಶಂಭವನುಂ[4] ಅಭಿನಂದನನುಂ ಸುಮತಿಯುಂ ಪದ್ಮಪ್ರಭನುಂ ಸುಪಾ ರ್ಶ್ವನುಂ ಚಂದ್ರಪ್ರಭನುಂ ಪುಷ್ಪದಂತನುಂ ಶೀತಳನುಂ ಶ್ರೇಯಾಂಸನುಂ ವಾಸು ಪೂಜ್ಯನುಂ ವಿಮಲನುಂ ಅನಂತನುಂ ಧರ್ಮನುಂ ಶಾಂತಿಯುಂ ಕುಂ[5]ಥು[5]ವುಂ ಅರನುಂ ಮಲ್ಲಿಯುಂ ಮುನಿಸುವ್ರತನುಂ ನಮಿಯುಂ ನೇಮಿಯುಂ ಪಾರ್ಶ್ವನುಂ ವರ್ಧಮಾ ನನುಮೆಂದಿರ್ಪತ್ತುನಾಲ್ವರ್ ತೀರ್ಥಕರಪರಮದೇವರಪ್ಪರ್ ಭರತನುಂ ಸಗರನುಂ ಮಘವನುಂ ಸನತ್ಕುಮಾರನುಂ ಶಾಂತಿಯುಂ ಕುಂ[5]ಥು[5]ವುಂ ಅರನುಂ ಸುಭೌಮನುಂ ಮಹಾಪದ್ಮನುಂ ಹರಿಷೇಣನುಂ ಜಯಷೇಣನುಂ ಬ್ರಹ್ಮದತ್ತನುಮೆಂದು ಪನ್ನಿರ್ವರ್ ಚಕ್ರವರ್ತಿಗಳಪ್ಪರ್ ವಿಜಯನುಮಚಲನುಂ ಧರ್ಮನುಂ ಸುಪ್ರಭನುಂ ಸುದರ್ಶ ನನುಂ ನಂದಿಯುಂ ನಂದಿಮಿತ್ರನುಂ ರಾಮನುಂ ಪದ್ಮನುಮೆಂದು [6]ಬಲದೇವರೊಂಬ ದಿಂಬರ್[6] ತ್ರಿಪಿಷ್ಟನುಂ ದ್ವಿಪಿಷ್ಟನುಂ ಸ್ವಯಂಭುವುಂ ಪುರುಷೋತ್ತಮನುಂ ಪುರುಷ

1 ಚ (ಗಚಜ) 2 ನುಂ (ಗಚಜ) 3 ಚಿತ್ತನುಂ (ಗಚಜ) 4 ನುಂ (ಚ) 5 ದು (ಕಗಜಟತ) 6 ನವ ಬಲದೇವರ್ಕಳುಂ (ಗಚಜ)

ಸಿಂಹನುಂ ಪುರುಷವರನುಂ ಪುಂಡರೀಕನುಂ ದತ್ತನುಂ ಕೃಷ್ಣನುಮೆಂದು ವಾಸುದೇವ ರೊಂಬದಿಂಬ[1]ರುಮಪ್ಪರ್[1] ಅಶ್ವಗ್ರೀವನುಂ ತಾರಕನುಂ ಮೇರಕನುಂ ಮಧುಕೈಟ ಭನುಂ ನಿಶುಂಭನುಂ ಬಲಿಯುಂ ಪ್ರಹ್ಲಾದನುಂ ರಾವಣನುಂ ಜರಾಸಂಧನುಮೆಂದೊಂಬ ದಿಂಬರ್ ಪ್ರತಿವಾಸುದೇವರುಂ ಭರತನುಂ ಸತ್ಯಭಾ[2]ವ[2]ನುಂ ವೀರ್ಯನುಂ ಮಿ[3]ತ್ರ ಭಾವ[3]ನುಂ ಮಿತ್ರವೀರ್ಯನುಂ ದಾನವೀರ್ಯನುಂ [4]ಧರ್ಮ[4]ವೀರ್ಯನುಂ ಮಘ ವನುಂ ಯುದ್ಧವೀ[5]ರ[5]ನುಂ ಸೀಮಂಧರನುಂ ತ್ರಿ[6]ಪಿ[6]ಷ್ಟನುಂ ಸ್ವಯಂಭುವುಂ ಪುರುಷೋತ್ತಮನುಂ ಪುರುಷವರನುಂ ಪುಂಡರೀಕನುಂ ದತ್ತನುಂ ಕುನಾದನುಂ ನಾರಾಯಣನುಂ ಸುಭೌಮನುಂ ಅಜಿತಂಜಯನುಂ ಜಯಸೇನನುಂ ಮಹಾಸೇನನುಂ ಅಜಿತನುಂ ಶ್ರೇಣಿಕನುಮೆಂದು ತೀರ್ಥಕರಕ್ಷತ್ರಿಯರಿಪ್ಪತ್ತುನಾಲ್ವರ್ ವೃಷಭ [7]ಮುಖನುಂ[7] ಮಹಾಯಕ್ಷನುಂ ತ್ರಿಮುಖನುಂ ಯಕ್ಷೇಶ್ವರನುಂ ತುಂಬುರನುಂ ಕುಸುಮನುಂ ಮಾರ್ತಂಡನುಂ ವಿಜಯನುಂ ಅಜಿತನುಂ ಬ್ರಹ್ಮನುಂ ಈಶಾನನುಂ ಕು[8]ಮಾ[8]ರನುಂ ಷಣ್ಮುಖನುಂ ಕಿನ್ನರನುಂ ಗರುಡನುಂ ಗಂಧರ್ವನುಂ ವಿಜಯನುಂ ಕುಬೇರನುಂ ವರುಣನುಂ ವಿದ್ಯುತ್ಪ್ರಭನುಂ ಸರ್ವಾಹ್ಣನುಂ ಧರಣೇಂದ್ರನುಂ ಮಾತಂಗ[9]ಮನು[9]ಮೆಂದು ಯಕ್ಷ[10]ರಿಪ್ಪತ್ತುನಾಲ್ವರಪ್ಪರ್[10] ಚಕ್ರೇಶ್ವರಿಯುಂ ರೋಹಿಣಿಯುಂ ಪ್ರಜ್ಞಪ್ತಿಯುಂ ವಜ್ರ[11]ಶೃಂಖಳೆ[11]ಯುಂ ಪುರುಷದತ್ತೆಯುಂ ಮನೋವೇಗೆಯುಂ ಕಾಳಿಯುಂ ಜ್ವಾಲಾಮಾಲಿನಿಯುಂ [12]ಮಹಾಕಾಳಿಯುಂ ಮಾನವಿಯುಂ[12] ಗೌರಿಯುಂ ಗಾಂಧಾರಿಯುಂ ವೈರೋಟಿಯುಮನಂತಮತಿಯುಂ ಮಾನಸಿಯುಂ ಮಹಾಮಾನಸಿಯುಂ ವಿಜಯೆಯುಂ ಅಪರಾಜಿತೆಯುಂ ಬಹುರೂಪಿ ಣಿಯುಂ ವಿದ್ಯುತ್ಪ್ರಭೆಯುಂ ಕೂಷ್ಮಾಂಡಿ[13]ಯುಂ ಪದ್ಮಾವತಿಯುಂ[13] ಸಿದ್ಧಾಯಿ ನಿಯುಮೆಂದು ಶಾಸನದೇವಿಯ[14]ರಿರ್ಪತ್ತುನಾಲ್ವರುಮಪ್ಪಂತು[14]

ಕುಳಭೃದ್ವೃಂದಾರಕರ್ ತೀರ್ಥಕರ ಪರಮದೇವೋತ್ತಮರ್ ಚಕ್ರನಾಥರ್
ಬಳದೇವರ್ ವಾಸುದೇವರ್ ತದರಿನೃಪತಿಗಳ್ ತೀರ್ಥಭೂಪಾಲಕರ್ ಭೂ
ತಳದೊಳ್ ಸಂದಿರ್ದ ಯಕ್ಷರ್ ಜಿನಸಮಯಮಹಾಯಕ್ಷಿಗಳ್ ಧರ್ಮಮಂ ನಿ
ರ್ಮಳಮಪ್ಪಂತಿಲ್ಲಿಕೊಂಡಾಡುವರೆನೆ ಭರತಕ್ಷೇತ್ರಮೆಂದುಂ ಪವಿತ್ರಂ ೨೦

---

1 ರುಂ (ಗಜ) 2 ಮ (ಗಚಜ) 3 ತ್ರಾಭ (ಗಚಜ) 4 ಧೈರ್ಯ (ಚ) 5 ರ್ಯ (ಗಚಜ) 6 ಪಿ (ಗಜ) 7 ನುಂ (ಗಚಜ) 8 ಬೇ (ಚ) 9 ನು (ಗಚಜ) 10 ಯಕ್ಷಿಯರು (ಗಚಜ) 11 ಸಂಖ್ಯೆ (ಗಚಜ) 12 ಮಹಾಕಾಳಿಯುಂ (ಗ) ಮಾನವಿಯುಂ (ಚ) 13 ಯುಂ (ಚ) 14 ರುಮಿಂತು (ಗಜ) ರುಮಿತ್ತೆರಂ (ಚ)

ಈ ಪೇಟ್ದಿ ಮಂದರಾಚಳ
ದೀ ಪರ್ವತತತ್ತಿಯು ಪಂಚರತ್ನದ್ಯುತಿ ದಿ
ಗ್ವ್ಯಾಪಕಮಾಗಿರೆ ರತ್ನ
ದ್ವೀಪಮಿದೆನಿಸುವುದು ಕಣ್ಗೆ ಜಂಬೂದ್ವೀಪಂ ೨೧

ದ್ವೀಪಕಲಾಪಂ ಶೈಲಕ
ಲಾಪಮುದೆನಿತಪ್ಪೊಡಕ್ಕೆ ಚೆಲ್ವೆಸೆದಿರ್ಕುಂ
ದ್ವೀಪಂಗಳೊಳಗೆ ಜಂಬೂ
ದ್ವೀಪಂ ಶೈಲಂಗಳೊಳಗೆ ಮಂದರಶೈಲಂ ೨೨

ಹರಿ ನೀಲಾಚಲದಿಂ ಸುವರ್ಣಗಿರಿಯಿಂ ರೂಪ್ಯಾದ್ರಿಯಿಂ ನಂದನೋ
ತ್ಕರಪತ್ರದ್ಯುತಿಯಿಂ ಪಿಶಂಗಕಮಳಶ್ರೀಲೀಲೆಯಿಂ ಪಂಚರ
ತ್ನರುಚಿವ್ಯಾಪ್ತಿ ನಿರಂತರಂ ನೆಗೞ್ದಿನಂ ದಿಕ್ಕನ್ಯಕಾವೃಂದಮಾ
ದರದಿಂ ತೀವಿದುದೊಂದು ನೀರಜವನಂ ಪೋಲ್ತತ್ತು ಧಾತ್ರೀತಳಂ ೨೩

ಆ ಚಿತ್ತೆಯೆಂಬ ಧಾತ್ರೀತಳಕ್ಕೇೞ್ನೂಱತೊಂಬತ್ತು ಯೋಜನಾಂತರದೊಳ್ ಮಧ್ಯಮಲೋಕ ಪ್ರತಿಬದ್ಧಮಪ್ಪ ಚಂದ್ರಾದಿತ್ಯ ಗ್ರಹ ನಕ್ಷತ್ರ ತಾರಕಾಪ್ರಕೀರ್ಣಕ ವಿಕಲ್ಪಜ್ಯೋತಿರ್ಗಣಾಲಂಕೃತಮಾಗಿರ್ದ ದಶೋತ್ತರ [1]ಶತಯೋ[1]ಜನ ವಿಸ್ತಾರ ಬಹಳತೆಯೊಳಂ ಲೋಕಾಂತಪರ್ಯಂತವ್ಯಾಪ್ತಿಯೊಳಂ ಜ್ಯೋತಿರ್ಲೋಕದೊಳ್ ಪುಟ್ಟಿದವರೆಲ್ಲಮುಯೋನಿಸಂಭವರುಮಣಿಮಾದಿ ಗುಣೋಪೇತರುಂ ಸಪ್ತ ಚಾಪೋ ತ್ಸೇಧರುಮಪ್ಪವರಲ್ಲಿ ಚಂದ್ರರೆಲ್ಲಮೇಕಲಕ್ಷಾಧಿಕ ಪಲ್ಯೋಪಮಾಯುಷ್ಕರುಮಾದಿತ್ಯ ರೆಲ್ಲಂ ಸಹಸ್ರಾಧಿಕ ಪಲ್ಯೋಪಮಾಯುಷ್ಕರುಂ ಶುಕ್ರರೆಲ್ಲಂ ಶತಾಧಿಕ ಪಲ್ಯೋಪ ಮಾಯುಷ್ಕರುಂ ಬೃಹಸ್ಪತಿಗಳೆಲ್ಲಂ ಪಲ್ಯೋಪಮಾಯುಷ್ಕರುಮಪ್ಪರಿತರ ಗ್ರಹಗಳೆಲ್ಲಂ ಪಲ್ಯೋಪಮಾರ್ಧಜೀವಿಗಳಪ್ಪರ್ ನಕ್ಷತ್ರತಾ[2]ರಾ[2]ಗಣಕ್ಕೆಲ್ಲಮುತ್ಕೃಷ್ಟ ಪಲ್ಯೋಪಮದ ನಾಲ್ಕನೆಯ ಭಾಗಮಾಯುಃಪ್ರಮಾಣಮಕ್ಕುಂ ಜಘನ್ಯದಿಂ ಪಲ್ಯೋಪಮದೆಂಟ ನೆಯ ಭಾಗಮಕ್ಕುಂ ಮಂದರಾಚಲದ ನಂದನವನದ ಸಾಸಿರದ ನೂ[3]ಱ್ಪರ್[3]ತ್ತೊಂದು ಯೋಜನದಗಲದಲ್ಲಿ ತಾರಕಾಗಣವಿಮಾನಮಿರ್ದುದಲ್ಲಿಂ ಮೇಗೆ ದಶಯೋಜನಾಂತರ ದೊಳಾದಿತ್ಯವಿಮಾನಮಿರ್ದುದಲ್ಲಿಂ ಕೆಳಗಾ ವಿಮಾನಕ್ಕೆ ಸಾತಿರೇಕಮಾಗಿ ಮಹೇಂದ್ರ

1 ಯೋ (ಚ) 2 ರಕಾ (ಗಜಟ) 3 ರೆಪ್ಪ (ಗಜ) ಱಿಪ್ಪ (ಜ)

ನೀಳ [1]ಮಾಣಿಕ್ಯಮು[1]ಯಮಾಗಿರ್ದ ರಾಹುವಿಮಾನವಿರ್ದುದಲ್ಲಿಂ ಮೇ[2]ಗೆಂಬತ್ತು[2] ಯೋಜನಾಂತರದೊಳದಕ್ಕೆ ಸಾತಿರೇಕಮಾಗಿ ಚಂದ್ರವಿಮಾನವಿರ್ದುದಲ್ಲಿಂ ಕೆಳಗಿಂದ್ರ ನೀಳಮಯಮಾಗಿ ನಿತ್ಯ ರಾಹುವಿಮಾನವಿರ್ದುದಲ್ಲಿಂ ಮೇಗೆ ನಾಲ್ಕು ಯೋಜನಾ ನಂತರದೊಳಶ್ವಿನ್ಯಾದಿ [3]ನಕ್ಷತ್ರ[3]ವಿರ್ದುದಲ್ಲಿಂ ಮೇಗೆ ನಾಲ್ಕು ಯೋಜನಾಂತರದೊಳ್ ಬುಧನ ವಿಮಾನವಿರ್ದುದಲ್ಲಿಂದತ್ತ ಶುಕ್ರ ಬೃಹಸ್ಪತ್ಯಂಗಾರಕ ಶನೀಶ್ವರ ವಿಮಾನಂ ಗಳ್ ಪ್ರತ್ಯೇಕಂ ಮೂಱು ಯೋಜನಾಂತರಿತಂಗಳಾಗಿರ್ದ ಚಂದ್ರಾದಿತ್ಯರ ವಿಮಾನಂ ಗಳಿರ್ದುವಲ್ಲಿಂ ಮೇಗೆ ನೂಱು ಯೋಜನಂಬರಂ ಕೆಳಗೆ ಸಾಸಿರದೆಂಟುನೂಱು ಯೋಜನಂಬರಂ ಕೆಲದೊಳ್ಳೈವತ್ತುಸಾಸಿರ ಯೋಜನಾಂತಂಬರಂ ತೊಳಗಿ ಬೆಳಗು ತ್ತಿರ್ಕುಂ

ಮಾತೇಂ ಮನುಜಕ್ಷೇತ್ರಂ
ಜ್ಯೋತಿಸ್ಥಿತಿ ಬಳಸುಗುಂ ಸುರಾದ್ರಿಯನಿರತ
ಜ್ಯೋತಿಸ್ಥಿತಿ ನಿಶ್ಚಳಿತ
ಜ್ಯೋತಿಗಳಿರ್ದೆಡೆಯೊಳಿರ್ದು ಬೆಳಗುತ್ತಿರ್ಕುಂ ೨೪

ಅರುಣಂಗಳ್ ಕನಕಾಭ ಮೇಚಕ ರುಚಿಪ್ರಸ್ಪರ್ಧಿಗಳ್ ಪಾಂಡುಗಳ್
ಗುರು ಶುಕ್ರಂ ರವಿ ಮಂದ ಚಂದ್ರ ಬುಧಸಂವಾಸಿತ್ವದಿಂ ತದ್ರುಚಿ
ಸ್ಫುರಿತಂ ಸಂಧಿಸಿದಂತೆ ವೀ[4]ಚ[4]ವಿಚರದ್ಗರ್ಜದ್ಘನಾಡಂಬರಾಂ
ಬರದೊಳ್ ಮಾಡುಗುಮಿಂದ್ರಚಾಪರುಚಿಯಂ ಜ್ಯೋತಿರ್ಗಣಜ್ಯೋತಿಗಳ್ ೨೫

ಆ ನಕ್ಷತ್ರಗಣಮೆ ತನಗಲಂಕಾರಮಾಗೆ

ಸುರಭೂಭೃನ್ಮೂಲದಿಂದಂ ಕೆಳಗೆಸೆದುದಧೋಲೋಕಮಿಂದ್ರಾಚಲೇಂದ್ರ
ಸ್ಫುರದಗ್ರಪ್ರೋಲ್ಲಸತ್ಪಾಂಡುಕವನಕೃತಮರ್ಯಾದೆಯಿಂ ಮಧ್ಯಲೋಕಂ
ಕರಮೊಪ್ಪುತಿರ್ದುದಾ ಪಾವನ ಗಿರಿವನದಿಂ ಮೇಗೆ ಧರ್ಮಾಸ್ತಿಕಾಯಂ
ಕರಮಿರ್ದತ್ತುದ್ಘರತ್ನಪ್ರಚುರರುಚಿಕೃತಾಲೋಕಮಪ್ಪೂರ್ಧ್ವಲೋಕಂ ೨೬

1 ಮ (ಚ) 2 ಗೆಪತ್ತು (ಚ) 3 ವಿಮಾನ (ಚ) 4 ಚಿ (ಟ)

ಕನಕಾಚಲವೆಂಬ ಕನ
ತ್ಕನಕಾಬ್ಜದ ಕರ್ಣಿಕಾಗ್ರದೊಳ್ ಷಾಯ್ವಳಿಯಂ
ನೆನೆಯಿಸಿ ಕಣ್ಗೊಪ್ಪುವುದಿಂ
ದ್ರನೀಲಮಣಿರುಚಿಯಿನೆಸೆವ ಚೂಳಿಕೆ ನಭದೊಳ್ ೨೭

ಎಂದು ಮಧ್ಯಮಲೋಕಮನಭಿವರ್ಣಿಸಿ ಮಂದರಾಚಲದ ಚೂಳಿಕಾಗ್ರಕ್ಕೆ ಭೋಗಭೂಮಿಜರವಾಳಾಗ್ರಮಾತ್ರದೊಳ್ ಸೌಧರ್ಮರಿತುವಿಮಾನಮಿರ್ದುದಾ ಸೌಧರ್ಮೇಶಾನಕಲ್ಪಂಗಳ ಮೇಗೆ ಸನತ್ಕುಮಾರಕಲ್ಪಂಗಳಿರ್ದುವವರೊಳ್ ಶ್ರೇಣೀಬದ್ಧ ಪ್ರಕೀರ್ಣವಿಮಾನಂಗಳ್ ನಮೇರು ಮಂದಾರ ಸಂತಾನಕ ಪಾರಿಜಾತ [1]ಕಲ್ಪವೃ[1]ಕ್ಷಂಗಳುಮಕ್ಕುಮಲ್ಲಿ ಸಾಮಾನಿಕ ತ್ರಯಸ್ತ್ರಿಂಶತ್ಪಾರಿಷದಾತ್ಮರಕ್ಷ ಲೋಕಪಾಲಾನೀಕ ಪ್ರಕೀರ್ಣಕಾಭಿಯೋಗ್ಯ ಕಿಲ್ಬಿಷಿಕಾದಿ ಪರಿವಾರಪರಿವೃತರುಂ [2]ಗಜ[2] ವೃಷಭ ರಥಾಶ್ವ ಗಂಧರ್ವನರ್ತಕಿ ಪದಾತಿ ಭೇದ ಸಪ್ತಾನೀಕ ಸಮನ್ವಿತರುಂ ಸಹಜಾಂಬರ ಕುಸುಮದಾಮ ಮಣಿಭೂಷಣ ವಿಭೂಷಿತರುಮನೇಕ ದೇವಾಂಗನಾ ಸಂಗತರುಮಣಿಮಾದ್ಯಷ್ಟಗುಣೈಶ್ವರ್ಯಸಮೇತರುಮಪ್ಪ ಕಲ್ಪಜರಿರ್ಪರಲ್ಲಿ ಮೊದಲೆರಡು ಕಲ್ಪಂಗಳ ದೇವರುಂ ಸಪ್ತರತ್ನಿ ಪ್ರಮಾಣೋತ್ಸೇಧರುಂ ದ್ವಿಸಾಗರೋಪಮಾಯುಷ್ಕರುಂ ಕಾಯಪ್ರವಿಚಾರರುಂ ದ್ವಿಸಹಸ್ರವರ್ಷ ಸಂಕ[3]ಲ್ಪಕಲ್ಪಿತಾಮೃತಾ[3]ಹಾರರುಂ ಏಕಮಾಸ [4]ನಿರ್ಯತ್ಸುರಭಿ[4]ಶ್ವಾಸರುಂ ಪದ್ಮಲೇಶ್ಯಾಪರಿಣಾಮರುಮಪ್ಪರಲ್ಲಿಂ ಮೇಗೆ ಮೂಱನೆಯ ನಾಲ್ಕನೆಯ ಕಲ್ಪದವರೆಲ್ಲಂ ಷಡುರತ್ನಿಪ್ರಮಾಣೋತ್ಸೇಧರುಂ ಸಪ್ತಸಮುದ್ರೋಪಮಾನಜೀವಿಗಳುಂ ಸ್ಪರ್ಶಪ್ರವಿಚಾರರುಂ ಸಪ್ತ ಸಹಸ್ರ [5]ವರ್ಷ[5] ಕಲ್ಪಾಹಾರರುಂ ಸಾರ್ಧ ತ್ರಿಮಾಸನಿರ್ಯತ್ಸುರಭಿನಿಶ್ವಾಸಿತರುಮಪ್ಪರಲ್ಲಿಂ ಮೇಲೆ ಐದನೆಯಾಱನೆಯ ಕಲ್ಪಂಗಳಿಗೆ ಬ್ರಹ್ಮೇಂದ್ರನೊರ್ವನೆ ತತ್ಕಲ್ಪದವರೆಲ್ಲಂ ಪಂಚರತ್ನಿಪ್ರಮಾಣೋತ್ಸೇಧರುಂ ದಶಸಾಗರೋಪಮಜೀವಿಗಳುಂ ರೂಪಪ್ರವಿಚಾರರುಂ ದಶ ಸಹಸ್ರ ವರ್ಷ ಸಂಕಲ್ಪಾಹಾರರುಂ ಪಂಚಮಾಸನಿ[6]ರ್ಯತ್ಸುರಭಿ[6] ನಿಶ್ವಾಸರುಮಪ್ಪರ್ ಬ್ರಹ್ಮಕಲ್ಪಾಂತರದೊಳ್ ಲೋಕಾಂತಿಕದೇವರೆಂಬರಿರ್ಪರಲ್ಲಿಂ ಮೇಗೇೞನೆಯ ಎಂಟನೆಯ ಕಲ್ಪಂಗಳೆಲ್ಲಂ ಲಾಂತವೇಂದ್ರನೊರ್ವನೆ ತತ್ಕಲ್ಪದವರೆಲ್ಲಂ ಪಂಚರತ್ನಿಪ್ರಮಾಣೋತ್ಸೇಧರುಂ ಚತುರ್ದಶ ಸಾಗರೋಪಮಜೀವಿಗಳುಂ ರೂಪಪ್ರವಿಚಾರರುಂ ಚತುರ್ದಶ [7]ಸಹಸ್ರವರ್ಷ[7] ಸಂಕಲ್ಪಾಹಾರರುಂ ಸಪ್ತಮಾಸನಿರ್ಯನ್ನಿ

---

1 ವೃ (ಗಚ) ಕವೃ (ಜ) 2 ಗಂಧರ್ವಗಜ (ಗಚಜ) 3 ಲ್ಪಾ (ಚ) 4 ಸುರಭಿನಿ (ಚಜ) 5 [illegible] (ಚ) [illegible] (ಜ) 6 ಯ್ [illegible] (ಗಚಜ) 7 [illegible] (ಟತ)

ಶ್ವಾಸರುಮಪ್ಪರಲ್ಲಿಂ ಮೇಗೊಂಬತ್ತನೆಯ ಪತ್ತನೆಯ ಕಲ್ಪಂಗಳ್ಗೆ ಶುಕ್ರೇಂದ್ರ ನೊರ್ವನೆ ತತ್ಕಲ್ಪದವರೆಲ್ಲಂ [1]ರತ್ನಿ[1]ಚತುಷ್ಕಪ್ರಮಾಣೋತ್ಸೇಧರುಂ ಷೋಡಶಸಾಗ ರೋಪಮಜೀವಿಗಳುಂ ಶಬ್ದಪ್ರವಿಚಾರರುಂ ಷೋಡಶಸಹಸ್ರವರ್ಷ ಸಂಕಲ್ಪಾಹಾ ರರುಂ ಅಷ್ಟಮಾಸನಿರ್ಯನ್ನಿಶ್ವಾಸರುಮಪ್ಪರಲ್ಲಿಂ ಮೇಗೆ ಪನ್ನೊಂದು ಪನ್ನೆರಡನೆಯ ಕಲ್ಪಂಗಳ್ಗೆ [2]ಶತಾ[2]ರೇಂದ್ರನೊರ್ವನೆ ತತ್ಕಲ್ಪದವರೆಲ್ಲಮರತ್ನಿ ಚತುಷ್ಟಯಪ್ರಮಾಣೋ ತ್ಸೇಧರುಂ ಅಷ್ಟಾದಶಸಾಗರೋಪಮಜೀವಿಗಳುಂ ಶಬ್ದಪ್ರವಿಚಾರರುಂ ಅಷ್ಟಾದಶ ಸಹಸ್ರವರ್ಷ ಸಂಕಲ್ಪಾಹಾರರುಂ ನವಮಾಸ ನಿರ್ಯನ್ನಿಶ್ವಾಸರುಮಪ್ಪರಲ್ಲಿಂ ಮೇಗೆ ಪದಿಮೂಱನೆಯ ಪದಿನಾಲ್ಕನೆಯ ಕಲ್ಪಂಗಳ್ಗಾನತಪ್ರಾಣತೇಂದ್ರರಿರ್ಪರಲ್ಲಿಯ ಕಲ್ಪಜರೆಲ್ಲಮರ್ಧಾಧಿಕ ರತ್ನಿಪ್ರಮಾಣೋತ್ಸೇಧರುಂ ವಿಂಶತಿಸಾಗರೋಪಮಜೀವಿ ಗಳುಂ ಮನಃಪ್ರವಿಚಾರರುಂ ವಿಂಶತಿ ಸಹಸ್ರವರ್ಷ ಸಂಕಲ್ಪಾಹಾರರುಂ ದಶಮಾಸ ನಿರ್ಯನ್ನಿಶ್ವಾಸರುಮಪ್ಪರಲ್ಲಿಂ ಮೇಗೆ ಪದಿನೈದನೆಯ ಪದಿನಾಱನೆಯ ಕಲ್ಪಂಗಳ್ಗಾ ರಣಾಚ್ಯುತರೇಂದ್ರರಿರ್ವರಿರ್ಪರಾ ಕಲ್ಪದವರೆಲ್ಲಂ ರತ್ನಿತ್ರಯೋತ್ಸೇಧರುಂ ದ್ವಾವಿಂಶತಿ ಸಾಗರೋಪಮ ಜೀವಿಗಳುಂ ಮನಃಪ್ರವಿಚಾರರುಂ ದ್ವಾವಿಂಶತಿ ಸಹಸ್ರವರ್ಷ ಸಂಕಲ್ಪಾ ಹಾರರುಮೇಕಾದಶಮಾಸನಿರ್ಯನ್ನಿಶ್ವಾಸರುಮಪ್ಪರ್

ಪ್ರಥಮ ದ್ವಿತೀಯ ಕಲ್ಪ  
ಪ್ರಥಿತ ಸುರಾಂಗನೆಯರಿತರ ಕಲ್ಪಜರ್ಗೆ ಮನೋ  
ರಥಮಂ ಪುಟ್ಟಿಸುವರ್ ಮ  
ನ್ಮಥಸುಖದಿಂದನ್ಯಕಲ್ಪದೊಳ್ ಪುಟ್ಟದವರ್ ೨೮

ಸುರಕಾಂತಾ ನಯನಾಮೃತಾಭಿಷವಣಂ ದೇವಾಂಗನಾವಕ್ತ್ರಪಂ  
ಕರುಹಾಮೋದವಿಶೇಷಣಂ ಸುರವಧೂಕರ್ಣೋತ್ಪಲಮ್ಲಾನಶೇ  
ಖರಮಿಂದ್ರಪ್ರಮದಾ ಕಪೋಲವಿಮಲ ಶ್ರೀದರ್ಪಣಂ ಸಂಧಿಸು  
ತ್ತಿರೆ ಸಂತೋಷಮನೆಯ್ದೆ ಬಣ್ಣಿಸದರಾರ್ ಕಲ್ಪೇಶ್ವರೈಶ್ವರ್ಯಮಂ ೨೯

[3]ಉಣಿ[3]ಸಮ್ಮತಂ ಸುರಾಂಗನೆಯರಂಗನೆಯರ್ ಸಹಜಾತಮಾಲ್ಯ ಭೂ  
ಷಣವಸನೋತ್ಕರಂ ಪಸದನಂ ಮನೆ ದಿವ್ಯವಿಮಾನಮಂಡನಂ  
ಮಣಿಮಯಭೂಮಿ ಕಲ್ಪತರುಗಳ್ ತರು ವಾದಿತ ಗೀತನರ್ತನಂ  
ಪೆಣೆದ ವಿನೋದಮೆಂದೊಡೞಿಯೆಂ ಪೊಗೞಲ್ ಸುರಲೋಕಸೌಖ್ಯಮಂ ೩೦

1 ಪಂಚರತ್ನಪ್ರಮಾಣೋಪೇತರುಂ ರತ್ನಿ (ಚ) 2 ಶತಾವ (ಗಚ) 3 ಉಣ (ಗಜ)

ಆ ಪದಿನಾಱು ಕಲ್ಪಂಗಳ ಮೇಲೆ ನವಗ್ರೈವೇಯಕಂಗಳಿರ್ದುವವಱೊಳ್ ಪು[1]ಟ್ಟುವ[1]ಹಮಿಂದ್ರರ್ಗಿಪ್ಪತ್ತುಮೂಱು ಸಾಗರೋಪಮಂ ಮೊದಲಾಗೆ ಮೂವತ್ತೊಂದು ಸಾಗರೋಪಮಮಾಯುಃ ಪೆರ್ಚುರ್ತ್ತಂ ಬರ್ಕುಮವರ ಶರೀರೋತ್ಸೇಧಮು ರತ್ನಿಪ್ರಮಾಣಮೆರಡುವರೆಯುಮೆರಡುಮೊಂದುವರೆಯುಂ ಒಂದಕ್ಕುಮವರ್ಗೆಲ್ಲಂ ಪೂರ್ವೋಕ್ತಕ್ರಮದೊಳೆ ಮಾನಸಾಮೃತಾಹಾರ ಸುರಭಿ ನಿಶ್ವಾಸಂಗಳಕ್ಕುಮಲ್ಲಿಂ ಮೇಗೆ ನವಸಂಖ್ಯೆಯಿಂ ಮೂಱುಗೆಯ್ದು ಮೂಱೊಳಿಯೊಳದ್ವಿಸಂಗಳೆಂಬುವಕ್ಕು ಮಲ್ಲಿಯುಹಮಿಂದ್ರರೆಲ್ಲಮೇಕರತ್ನಿಪ್ರಮಾಣೋತ್ಸೇಧರುಂ ದ್ವಾತ್ರಿಂಶತ್ಸಹಸ್ರ [2]ಸಾಗ[2]ರೋಪಮ ಜೀವಿಗಳುಮಪ್ಪರಲ್ಲಿಂ ಮೇಗೆ ವಿಜಯ ವೈಜಯಂತ ಜಯಂತಾಪರಾಜಿತ ಸರ್ವಾರ್ಥಸಿದ್ಧಿಗಳೆಂಬ ಪಂಚಾಣೂತ್ತರೆಗಳಕ್ಕುಮಲ್ಲಿಂ ಪುಟ್ಟುವಹಮಿಂದ್ರರೆಲ್ಲಮೇಕ ರತ್ನಿಪ್ರಮಾಣೋತ್ಸೇಧರುಂ ಶುದ್ಧಸ್ಫಟಿಕವರ್ಣರುಂ ತ್ರಯಸ್ತ್ರಿಂಶತ್ಸಾಗರೋಪಮಾಯುಷ್ಕರುಂ ತ್ರಯಸ್ತ್ರಿಂಶತ್ಸಹಸ್ರವರ್ಷ ಸಂಕಲ್ಪಕಲ್ಪಿತಾಮೃತಾಹಾರಿಗಳುಂ ಸಪ್ರವಿಚಾರಾನಂತಗುಣ ನಿಷ್ಪ್ರವಿಚಾರರುಂ ಶುಕ್ಲಲೇಶ್ಯಾ ಪರಿಣಾಮರುಮಪ್ಪರಿಂತು

ಪದಿನಾಱುಂ ಕಲ್ಪದೊಳಿ
ರ್ಪ ದೇವರಿತ್ತಣ್ಗೆ ವರ್ಷರೆಱಗಲ್ಕಹರ್
ತ್ಪದಪದ್ಮಕ್ಕಹಮಿಂದ್ರರ್
ತದಂಘ್ರಿಗಿರ್ದಲ್ಲಿ ಕಂಡು ಕರಮಂ ಮುಗಿವರ್ ೩೧

[3]ನಿಖಿಲಾ[3]ಮರಕಲ್ಪಂಗಳ
ಸುಖಮುಹಮಿಂದ್ರರ ಸುಖಕ್ಕೆ ಸಮನಾಗದಣಂ
ಸುಖಮುಯುಮೆನಿಸುವ ಸಿದ್ಧರ
ಸುಖಕ್ಕೆ ನೇರ್ಗಿಱಿದೆನಿಪ್ಪುದಹಮಿಂದ್ರಸುಖಂ ೩೨

ಆ ಸರ್ವಾರ್ಥಸಿದ್ಧಿಗೆ ಪನ್ನೆರಡು ಯೋಜನಾಂತರದೊಳ್ ಮರ್ತ್ಯಲೋಕ ಪ್ರಮಾಣಮಾಗಿರ್ದಪ್ಪಯೋಜನ ಬಹಳತೆಯೊಳಂ ಮಗುಳ್ಚಿಕ್ಕಿದ ಧವಳಚ್ಛತ್ರದಾಕಾರದೊಳಂ ನೆಱೆದು ಸಮವೃತ್ತಮಾಗಿರ್ದುದೀಷತ್ಪ್ರಾಗ್ಭಾರಮೆಂಬುದಕ್ಕುಂ

1 ಟ್ಟಿದ (ಗಚಜ). 2 ವತ್ಸ (ಜ) 3 ಸುಖಮಾ (ಗಚ) ಸುಖ...(ಜ)

ಅದು ಸಿದ್ಧಕ್ಷೇತ್ರಮಾ ಕ್ಷೇತ್ರದೊಳಖಿಳ ಜಗದ್ವಲ್ಲಭರ್ ಮೋಕ್ಷಲಕ್ಷ್ಮೀ
ವದನಾಂಭೋಜಾತಭೃಂಗರ್ ನಿರತಿಶಯ ಶುಭಧ್ಯಾನದಗ್ಧಾಷ್ಟಕರ್ಮರ್
ತ್ರಿದಶಕ್ಷ್ಮಾಭೃದ್ಭುಜಂಗೇಶ್ವರ ಹೃದಯಸರೋಲಗ್ನಪಾದಾರವಿಂದರ್
ವಿದಿತಂ ತ್ರೈಲೋಕ್ಯಚೂಡಾಮಣಿಗಳಧಿಕ ಸೌಖ್ಯಾಸ್ಪದರ್ ಸಿದ್ಧರಿರ್ಪರ್ ೩೩

ಅವರ್ಗೆ ಸಮ್ಯಕ್ತ್ವಮುಮನಂತಜ್ಞಾನಮುಮನಂತಸುಖಮುಮನಂತವೀರ್ಯ ಮುಂ ಸೂಕ್ಷ್ಮತ್ವಮುಂ ಗುರುಲಘುತ್ವಮುಮವ್ಯಾಬಾಧಂಗಳೆಂಬೆಂಟು ಗುಣಂ ಗಳಕ್ಕುಂ

ಅಮಿತಸುಖನಿಳಯಮುಮನ
ಷ್ಟಮ ಪೃಥ್ವಿಯನಾ ನರಾಮರಸ್ತುತಮಂ ಪಂ
ಚಮಗತಿಯಂ ಪರಮಸ್ಥಾ
ನಮನಾ ಶಿವಪದಮನೆಯ್ದೆ ಪೊಗಟ್ಟಿರುವೊಳರೇ ೩೪

ಪರಮಪದಸ್ಥಿತಿ ಸಿದ್ಧರ
ಪರಮಸುಖಂ ಪೊಗಟಲರಿದತೀಂದ್ರಿಯವಿಷಯಂ
[1]ನರಸುರ[1]ಸುಖಂಗಳಿವು ತ
ಚ್ಚರಣಾಬ್ಜಸ್ಮರಣದಿಂದವಾದ ಸುಖಂಗಳ್ ೩೫

ಚರಮಶರೀರಂ ಸಗರಂ
ಚರಮಶರೀರರ್ ನಿಜಾಗ್ರಜಾತರ್ ನೀನುಂ
ಚರಮಶರೀರನೆಯುದಱಿಂ
ಪರಮಪದಂ [2]ನಿಮಗನೆ[2] ನಿಮಗಮಾಸ್ಪದಮಕ್ಕುಂ ೩೬

ಕೇವಲಗಮ್ಯಂ ತ್ರಸಮುಂ
ಸ್ಥಾವರಮುಂ ಕೆಲವು ಪೆತ್ತ ತುಪ್ಪದಿನೆತ್ತಂ
ತೀವಿದ ಕೊಡದಂತಿರ್ದುವು
ಜೀವದ್ರವ್ಯಂಗಳಿಂ ಜಗತ್ರಯಮಧ್ಯಂ ೩೭

---

1 ನರ (ಚ) 2 ನಿಮಗೆ (ಗಚಜ)

ಪರಮಜಿನಧರ್ಮಮಂ ತ
ತ್ಸ್ವರೂಪದಿಂ ನಂಬಲೊಲ್ಲದೀ ಸಂಸೃತಿಯೊಳ್
ತಿರಿದಪುವು ಜೀವಮದನಾ
ದರದಿಂ ನಂಬಿದೊಡೆ ತಿರಿವ ಬೇವಸಮುಂಟೇ ೩೮

ನಾರಕ ತಿರ್ಯಗ್ಗತಿ ಸಂ
ಸಾರಿಗೆ ಪಾಪೋಪಚಯದೆ ಸುರಗತಿ ಪುಣ್ಯ
ಪ್ರೇರಿತದೆ ನೃ[1]ಗ[1]ತಿಮಿಶ್ರದೆ
ಸಾರೆವಲಂ ಸುಗತಿ ಪುಣ್ಯಪಾಪಕ್ಷಯದಿಂ ೩೯

ಪರಿಣಾಮವಸಂಖ್ಯಾತಂ
ಪರಿವರ್ತಿಸುತಿರ್ಪುವಲ್ಲಿ ಶುಭಪರಿಣಾಮಂ
ಬೆರಸೊಸೆದಿರ್ಕಾಗಳುಮಾ
ರ್ತರೌದ್ರದೊಳೆ ಮೂಡಿ ಮುಳುಗುತಿರ್ಪುದೆ ಚದುರಂ ೪೦

ದೊರೆಕೊಂಡಿರ್ದ ಶುಭಾಶುಭ
ಪರಿಣಾಮಮೆ ಪುಣ್ಯಪಾಪಕಾರಣಮದಱಿಂ
ಪರಿಣಾಮಶುದ್ಧಿಯಿಂದಾ
ಚರಿಪುದು ಪರಲೋಕಹಿತಮನಿದೆ ಜಿನತತ್ವಂ ೪೧

ಎನಗುಂಟಿವರ್ಗಿಲ್ಲಿವರ್ಗುಂ
[2]ಟೆನಗಿಲ್ಲೆ[2]ನಬೇಡ ತನ್ನ ಗೆಯ್ದುದು ಪೆಱರ್ಗಂ
ತನಗಂ ಪುದುವಲ್ಲದಱಿಂ
ದನುಭವಿಪುದು ತಾನೆ ತನ್ನ ಮುಂ ನೆಱಪಿದುದಂ ೪೨

ಪೆಱರ ವಿಭವಕ್ಕೆ ಬಯಸುವ
ಮಱುಗುವ ಗಾವಿಲಿಕೆಯೇಕೆ ಪೇೞ್ ಬಯಸುವೊಡಂ
ಮಱು[3]ಗುವೊ[3]ಡಂ ಬರ್ಕುಮೆ ಮುಂ
ಮಱಿದಂ ತಾನಿಂದು ಬಯಸಿ ಮಱುಗಿದೊಡುಂಟೇ ೪೩

---

1 ಪ (ಕರಚಜಟ) 2 ಟ (ಗಚಜ) 3 ಗಿದೊ (ಕಗಚಜ)

ಜಿನಮತದೊಳ್ ಸಮ್ಯಗ್ದ
ರ್ಶನಮುಳ್ಳೊಡೆ ಸಾಲ್ವಡದುವೆ ಬೀಜಂ ಗಡ ನೆ
ಟ್ಟನೆ ಮೋಕ್ಷಸುಖಕೆ ತಾಳ್ದುವು
ದು ನೀನಿದಂ ಸಗರಕುಲವಿಯತ್ತ್ರಲತಿಲಕಾ ೪೪

ಅಣಿಮಾದ್ಯಷ್ಟಗುಣಂಗಳ
ಕಣಿಯೆನಿಸುವ ದೇವಗತಿಗಮುತ್ತಮಗತಿಗಂ
ಮಣಿಮಯ ಸೋಪಾನೋಪಮ
ಮಣುಗುಣ ಶಿಕ್ಷಾವ್ರತಂಗಳೆಂದಱಿ ನೃಪತೀ ೪೫

ಎಂದು

ಮೊದಲಿಂ ತಗುಬ್ದಿ ಥೋಲೋ
ಕದ ಮಧ್ಯಮಲೋಕದೂರ್ಧ್ವಲೋಕದ ತೆಱನಂ
ವಿದಿತಂ ಮಾ[1]ಡೆ[1] ಮುನೀಂದ್ರನ
ಪದಪದ್ಮಕ್ಕೆಱಗಿದಂ ಭಗೀರಥರಾಜಂ ೪೬

ಅಂತೆಱಗಿ ಪೊಡೆವಟ್ಟು

ಬಗೆಯೊಳ್ ಧರ್ಮಾನುರಾಗಂ ನೆಗೞೆ[3] ನೃಪಸಭಾಸೇವ್ಯನಾಸನ್ನಭವ್ಯಂ
ವಿಗಳದ್ಬಾಷ್ಪಾಂಬುನೇತ್ರಂ ವಿಪುಳ ಪುಳಕಸಂದೋಹಸಂಛನ್ನಗಾತ್ರಂ
ಸಗರಕ್ಷ್ಮಾಪಾಲಪುತ್ರಂ ಸಕಲ ವಸುಮತೀ ಪ್ರಾಜ್ಯ ಸಾಮ್ರಾಜ್ಯ ಪಾತ್ರಂ
ವಿಗತವ್ಯಾಮೋಹಭೇದಂ ಜಿನಪತಿ[2]ಮತ[2]ಮಂ ಕೇಳ್ದು ಸಂತುಷ್ಟನಾದಂ ೪೭

ಇದು ಸಕಲ ಮುನೀಂದ್ರ ವೃಂದ ವೃಂದಾರಕ ಶ್ರೀಮದಜಿತಸೇನ ಭಟ್ಟಾರಕ ಶ್ರೀಪಾದಪದ್ಮಪ್ರಸಾದಾಸಾದಿತ ರತ್ನತ್ರಯಾಲಂಕೃತ ಶ್ರೀಮದಭಿನವ ಕವಿಚಕ್ರವರ್ತಿ ಕವಿರತ್ನ ವಿರಚಿತ ಶ್ರೀದಾನಚಿಂತಾಮಣಿ [3]ನಿ[3]ರ್ಮಾಪಿತ ಶ್ರೀಮದಜಿತತೀರ್ಥಂಕರ ಪುರಾಣತಿಲಕದೊಳ್

ಧರ್ಮೋಪದೇಶವರ್ಣನಂ

ಏಕಾದಶಾಶ್ವಾಸಂ

1 ಜೆ (ಜ) 2 ಪದ (ಚ) 3 ವಿನಿ (ಕಟತ)

# ದ್ವಾದಶಾಶ್ವಾಸಂ

ಶ್ರೀವಿಮಳಧರ್ಮಚಕ್ರಮ
ನಾವಂ ಭೂಚಕ್ರದೊಳ್ ನೆಗಟ್ಟಿದನೆಮಗಾ
ದೇವನಜಿತಂ ಜಗತ್ತ್ರಯ
ಪಾವನನೊಸೆಗಸಮಚರಿತನಪಗತದುರಿತಂ ೧

ಎಂದಜಿತನಾಥಂಗೆ ನಮಸ್ಕಾರಂಗೆಯ್ದತ್ಯಂತ ಸಂತುಷ್ಟಚಿತ್ತನಾಗಿ ಮೋಕ್ಷಪುರ [1]ಪ್ರ[1]ಸ್ಥಿತ ಭವ್ಯಪಥಿಕ ಪಾಥೇಯಮಪ್ಪ ಸಮ್ಯಕ್ತ್ವಮುಮಂ ಸ್ವರ್ಗಾಪವರ್ಗ ಸೋಪಾನಮಾರ್ಗಂಗಳಪ್ಪ ಪರಮ ಶ್ರಾವಕಬ್ರತಂಗಳುಮಂ ಭಗೀರಥಮಹೀಪತಿ ಕಯ್ಕೊಂಡುಮಲ್ಲಿ ಸಮ್ಯಕ್ತ್ವಮಾಜ್ಞೆಯೆಂದುಂ ಅಧಿಗಮವೆಂದುಮಿರ್ತೆಱನಕ್ಕುಮವ ಱೊಳಾಜ್ಞಾ ಸಮ್ಯಕ್ತ್ವವೆಂಬುದು

[2]ಅರ್ಹದ್ದೇವ[2]ಸಮೋ ನಾಸ್ತಿ ಧರ್ಮೋ ನಾಸ್ತಿ ದಯಾಪರಃ
ತಪೋ ನಾ[3]ಸ್ತೀತಿ[3] ನೈರ್ಗ್ರಂ[4]ಥ್ಯೆರಿತಿ[4] ಸಮ್ಯಕ್ತ್ವಮುತ್ತಮಂ

ಎಂದುಮಧಿಗಮವೆಂಬುದುಂ ಪಂಚಾಸ್ತಿಕಾಯಷಡ್ದ್ರವ್ಯ ಸಪ್ತತತ್ವ ನವ ಪದಾರ್ಥಂಗಳಂ ನೆಱೆಯಱಿದು ನಂಬುವುದು ಸಮ್ಯಕ್ತ್ವಮುಂ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢದೃಷ್ಟಿತ್ವಮುಂ ಉಪಬೃಂಹತ್ವಮುಂ ಸ್ಥಿತಿಕರಣಮುಂ ವಾತ್ಸಲ್ಯಮುಂ ಪ್ರಭಾವನೆಯುಮೆಂಬಷ್ಟಗುಣಾರ್ಜಿತಮುಂ ತದ್ವಿ ಪರೀತಾಷ್ಟದೋಷ [5]ವಿವ[5]ರ್ಜಿತಮುಂ ಕುಲಮದಂ ಜಾತಿಮದಮಾಜ್ಞಾಮದ ಮೈಶ್ವರ್ಯಮದಂ ವಿಜ್ಞಾನಮದಂ ಬಲಮದಂ ರೂಪಮದಂ ತಪೋಮದಮೆಂಬಷ್ಟ ಮದವ್ಯಪೇತಮುಂ ಮಿಥ್ಯಾದೇವರುಂ ಮಿಥ್ಯಾಲಯಮುಂ ಮಿಥ್ಯಾತಪಮುಂ ಮಿಥ್ಯಾ ತಪಸ್ವಿಯುಂ ಮಿಥ್ಯಾಜ್ಞಾ[6]ನಮುಂ[6] ಮಿಥ್ಯಾ[7]ಜ್ಞಾನಿಯು[7]ಮೆಂಬ ಷಡನಾಯತ ಸೇವಾವಿರಹಿತಮುಂ ಲೋಕಮೂಢ ದೇವತಾಮೂಢ ಸಮಯಮೂಢಮೆಂಬ ಮೂಢ

---

1 ಪ್ರಸಿದ್ಧಪ್ರ (ಚ) 2 ಅದ್ದೇಣ (ಜ) 3 ಸ್ತಿ (ಕ) 4 ಥೆಯಿತಿ (ಕಗಜ) 5 ವ (ಗಜ) 6 ಧಿಯುಂ (ಚ) ಮ (ಚ) 7 ಜ್ಞಾನಮು (ಚ) ನಿಯರುಮು (ಗಚಜ)

ತ್ರಯಬಹಿಸ್ಕೃತಮುಮಕ್ಕುಂ ಇಂತು ಪಂಚವಿಂಶತಿ ಮಲವಿರಹಿತಮುಮಪ್ಪ ಸಮ್ಯಕ್ತ್ವಮಂ ಕೈಕೊಂಡು

ಹಿಂಸಾಸತ್ಯಂ ಸ್ತೇ[1]ಯಾ[1]ಬ್ರಹ್ಮಪರಿಗ್ರಹಂ ಚ ಬಾದರ ಭೇದಾಃ
ದ್ಯೂತಂ ಮದ್ಯಂ ಮಾಂಸಂ ಗೃಹಿಣಾಂ ವ್ರತಮಷ್ಟಧಾ ಪ್ರೋಕ್ತಂ

ಎಂಬ ಪಂಚಾಣುವ್ರತಮಂ ದ್ಯೂತಾದ್ಯಾಶ್ರಯಾನಿವೃತ್ತಿಯುಮಂ ರಾತ್ರಿ ಭೋಜನವಿರಮಣಮುಮೆಂಬ [2]ಷಷ್ಠ[2]ಮಣುವ್ರತಮುಮಂ ದಿಗ್ದೇಶಾನರ್ಥ ದಂಡ ವಿರತಿಯೆಂಬ ಮೂಱುಂ ಗುಣವ್ರತಮುಮಂ ಸಾಮಯಿಕಮುಂ ಪ್ರೋಷಧೋಪ ವಾಸ[3]ಮುಂ[3] ಭೋಗೋಪಭೋಗ ಪರಿಮಾಣಮುಮಂ ಅತಿಥಿಸಂವಿಭಾಗಮೆಂಬ ನಾಲ್ಕುಂ ಶಿಕ್ಷಾವ್ರತಮುಂ ಇಜ್ಯೆಯುಂ ವಾರ್ತೆಯುಂ ದತ್ತಿಯುಂ ಸ್ವಾಧ್ಯಾಯ ಮುಮೆಂಬಾರ್ಯ ಷಟ್ಕರ್ಮಂಗಳುಮನೇಕಧರ್ಮಕ್ಕೆ ಕುಲಧರ್ಮಂಗಳಾಗಿರ್ದುವವ ಱೊಳಿಜ್ಯೆಯೆಂಬುದು ಜಿನಪೂಜಾವಿಧಾನಮದು ನಿತ್ಯಮಹಾಮಹಮೆಂದುಂ ಚತುರ್ಮುಖಮೆಂದುಂ ಕಲ್ಪವೃಕ್ಷಮೆಂದುಂ ಇಂದ್ರಧ್ವಜಮೆಂದುಂ ಬಲಿಸ್ನಪನ ಮೆಂದುಮಕ್ಕುಂ ಅಲ್ಲಿ ನಿತ್ಯಮಹಮೆಂಬುದು ನಿಚ್ಚನಿಚ್ಚಯಥಾಶಕ್ತಿಯಿಂ ಜಿನಗೃಹಕ್ಕೆ ನಿಜಗೃಹದಿಂದಷ್ಟವಿಧಾರ್ಚನೆಯನುಯ್ವುದುಂ ಚೈತ್ಯಾಲಯಂಗಳಂ ಮಾಡಿಸಿ ಭಕ್ತಿ ಪೂರ್ವಕದಿಂ ಶಾಸನಂಬಿಡಿಸುವುದುಂ ಮುನಿಜನಂಗಳಂ ಪೂಜಿಸುವುದುಮಕ್ಕುಂ ಚತುರ್ಮುಖಮೆಂಬುದು ಮಕುಟಬದ್ಧರ್ ಮಾಳ್ಪ ಪೂಜೆ ಸರ್ವತೋಭದ್ರಮೆಂಬುದು ಮಧ್ಯಮಕಲ್ಪವೃಕ್ಷಮೆಂಬುದು ಬೇಡಿದ[4]ರ[4] ಬೇಡಿದುದನೆ ಕೊಟ್ಟು ತಣಪಿ ಚಕ್ರ ವರ್ತಿಗಳ್ ಮಾಳ್ಪ ಪೂಜಾವಿಧಾನಮಕ್ಕುಂ ಅಷ್ಟಾಹ್ನಿಕಮೆಂಬುದು ಸಕಲಶ್ರಾವಕ ಜನಂಗಳ್ ಮಾಳ್ಪ ಪೂಜೆಯ[5]ಕ್ಕುಂ ಇಂದ್ರಧ್ವಜಮೆಂಬುದು ಇಂದ್ರಾದಿಗಳ್ ಮಾಳ್ಪ ಪೂಜೆಯಕ್ಕುಂ[5] ಬಲಿಸ್ನಪನಮೆಂಬುದು ಮೂಱುಂ ಸಂಜೆಯೊಳ್ ಮಾಳ್ಪ ಜಿನಾಭಿ ಷೇಕಂ ಜಿನಪೂಜೆಗಳುಮಂ ಪೇೞ್ದವರ ವಿಕಲ್ಪಮೆ ಪೆಱವು ಪೂಜಾವಿಶೇಷಮಕ್ಕುಂ ವಾರ್ತೆಯೆಂಬುದಸಿಮಷಿಕೃಷಿವಣಿಗ್ವಿದ್ಯಾದಿ ಕರ್ಮಂಗಳೊಳ್ ವಿಶುದ್ಧವೃತ್ತಿ ಯಿನರ್ಥೋಪಾರ್ಜನಂಗೆಯ್ವುದಕ್ಕುಂ ದತ್ತಿಯೆಂಬುದು ದಯಾಪಾತ್ರಸಮಸಕಳ ಭೇದದಿಂ ಚತುರ್ವಿಧಮಕ್ಕುಮಲ್ಲಿ ದಯಾ[6]ದ[6]ತ್ತಿಯೆಂಬುದು ಅನುಕಂಪೆನೆರಸನು ಗ್ರಾಹ್ಯಮಪ್ಪ ಜೀವಂಗಳ್ಗೆ ಕರಣತ್ರಯಶುದ್ಧಿಯಿನಭಯದಾನಂಗುಡುವುದು ಪಾತ್ರ ದತ್ತಿಯೆಂಬುದು ಮಹಾತಪೋಧನರ್ಗೆ ನಿರವದ್ಯಾಹಾರಮುಮಂ ಸಂಯಮೋಪ

---

1 ಯಾನ (ಕ) ಯಂಸ (ಟ) 2 ಅಷ್ಟಮ (ಗಚಜ) 3 ಮುಮೆಂಬ (ಗಚಜ) 4 ವರ್ಗೆ (ಗಚಜ) 5 ಕ್ಕುಂ (ಗಚ) 6 ವ್ಯ (ಕಗಚಜ)

ಕರಣಮುಮಂ ಕುಡುವುದು ಸಮದತ್ತಿಯೆಂಬುದು ತಮ್ಮೊಳ್ ಸಮಾನಕ್ರಿಯಾಮಂತನಪ್ಪ ನಿಸ್ತಾರಮಪ್ಪ ಕಾಸ್ತ್ರ್ಯ[1]ಮಂಗೆ ಕನ್ಯಾಭೂಮಿ ಸುವರ್ಣ ಹಸ್ತ್ಯಶ್ವರಥ[2]ದಿಗಳಂ ಕಡುವುದು ತಮ್ಮೊಳ್ ಸಮಾನರಿಲ್ಲದಂದು ಮಧ್ಯಮ ಪಾತ್ರಕ್ಕೆ ಕುಡುವುದು ಸಕಲದತ್ತಿಯೆಂಬುದು ತನ್ನ ಸಂತತಿಯಂ ನಿಱಿಸಲೆಂದು ಪುತ್ರಂಗಕ್ಕೆ ಗೋತ್ರಜಂಗಕ್ಕೆ ಧರ್ಮಮಂ ಸರ್ವಸ್ವಮುಮನಪ್ಪಯಿಸಿ ಕುಡುವುದು ಅನ್ವಯದತ್ತಿಯೆಂಬುದು ಅನ್ವಯಕ್ಕಂ ಸ್ವಾಧ್ಯಾಯಮೆಂಬುದು ವಿಜ್ಞಾನಮನೋದಿಯೋದಿಸುವುದುಂ ನೆನೆವುದುಮಕ್ಕುಂ ಸಂಯಮಮೆಂಬುದು ಪಂಚಾಣುವ್ರತಪ್ರವರ್ತನಮಕ್ಕುಂ ತಪಮೇತಪಮೆಂಬುದನಶನಾದಿ ದ್ವಾದಶಾನುಷ್ಠಾನಮಕ್ಕುಂ ಆರ್ಯಷಟ್ಕರ್ಮಮುಮ[3]ನಱಿಪಿ[3] ಸದ್ದೃಷ್ಟಿಗಳಿಗನುಷ್ಟಯಮಪ್ಪಾಯತಿ ಮೂಱುಂ ಗರ್ಭಾನ್ವಯಕ್ರಿಯೆಗಳುಮನವಧಾ[4]ರಿಧೀ[4]ಗಳಪ್ಪ ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆಗಳುಮಂ ಸಂಜ್ಞಾತತ್ವಂ ಮೊದಲಾಗೇಳನ್ವಯಕ್ರಿಯೆಗಳುಮನಱಿಪಿ ಕೈಕೊಂಡು ಪೋದನೇಕದೀಕ್ಷಿತರಾಗಿ ಸಕಲಶ್ರಾವಕವ್ರತಂಗ[5]ಳೊಳ್[5] ಪರಿಪೂರ್ಣರಾಗಿ ದೃಢಧರ್ಮಕೇವಳಿಗಳಂ ಪೂಜಿಸಿ ಪೊಡೆವಟ್ಟು ಮನೋರಥಂಬೆರಸು ಭಗೀರಥಂ ಪೋದನಾಗಳ್ ಮಣಿಕೇತು ತನ್ನ ಗೆಯ್ದ ಷಟ್ಪ್ರಪಂಚಮಂ ಪ್ರಕಟಂ ಮಾಡಿ ನಿಶ್ಶಲ್ಯಂಗೆಯ್ದು ನಿಜನಿವಾಸಕ್ಕೆ ಪೋದನಿತ್ತಲ್ ಸಗರಮುನಿವೆರಸಱುವತ್ತು ಸಾಸಿರ ಕುಮಾರಮುನಿಗಳುಮಂ ಚರಮದೇಹಧಾರಿಗಳಾತನ ಪರೋಪಕಾರಬುದ್ಧಿಯುಮಂ "ಇಷ್ಟಂ ಧರ್ಮೇಣ ಯೋಜಯೇತ್" ಎಂಬ ವಾಕ್ಯಮುಮಂ ನೆನೆದಾ ಕಲ್ಯಾಣಮಿತ್ರನಪ್ಪೊಡಿಂತಾಗಲ್ವೇಱ್ಕುಮಾತನಂತು ನಮಗೆ ಪರೋಪಕಾರಿಗಳಾರುಮಿಲ್ಲನಂತಸಂಸಾರ ಚಕ್ರದೊಳ್ ತಿರ್‍ರನೆ ತಿರಿವ ನಮ್ಮನಿ ಬರುಮನಪವರ್ಗಮಾರ್ಗಮಂ ಕಾಣಿಸಿದನೆಂದು ಪರಮಾನಂದಭರಿತನಾಗಿ ಪೊಗೞ್ದು ಸಮ್ಮೇದಾಗ್ರದೊಳುಗ್ರೋಗ್ರ ತಪದೊಳ್ ನೆಗೞ್ದು ಕೆಲವು ಕಾಲದಿಂ ಸಗರಮುನಿ ಕುಂಜರಂ ಸಂಸಾರಬಂಧ ಕಾರಣನಿಗಳ ಬಂಧಂಗಳಂ ಪಱಿಯೆ[6]ಪೊ[6]ಯ್ದು ಕರ್ಮವೀರರಂ ಬೆದಱ ಬೆಂಕೊಂಡು ಸನ್ಮಾರ್ಗವೀಧಿಯೊಳ್ ಪರಿದು ಪರಮಗತಿಯುನೆಯ್ದುವುದುಂ ತದನಂತರಮೆ ತನಗೊಡವುಟ್ಟಿದ ಕುಮಾರಮುನಿಗಳನಿಬರುಮನು ಕ್ರಮದಿಂ ಮುಕ್ತಿಗೆ ಸಂದರೆಂಬುದಂ ಭಗೀರಥಂ ಕೇಳ್ದು ನಿರ್ವೇಗಪರನಾಗಿ ವರದತ್ತನೆಂಬ ನಿಜತನೂಜಂಗೆ ರಾಜ್ಯಭಾರಮಂ ಕೊಟ್ಟು ತಪೋಭಾರಮಂ ಕೈಕೊಳಲೆಂದು ಕೈಲಾಸಶೈಲಕ್ಕೆ ಬಂದು ಶಿವಗುಪ್ತಮುಮುಕ್ಷುಗಳ ಸಮಕ್ಷದೊಳ್ ದೀಕ್ಷೆಯಂ ಕೈಕೊಂಡುಗ್ರೋಗ್ರತಪದೊಳ್ ತಪಮನೆತ್ತಿಕೊಂಡು

---

1 ತ್ರ್ಸ್ಯ (ಕಗಜ) ತ್ರ (ಚ) 2 ಥಾ (ಚ) 3 ನೆಱಿಗಿ (ಗಜ) 4 ೦ (ಗಚಜ)
5 ಳಂ ಕೈಕೊಂಡು (ಗಚಜ) 6 ಪಾ (ಗಜ)

ಪ್ರಾವೃಟ್ಕಾಲದೊಳಡಸಿ ಮ
ಹಾವರ್ತದ ಮೞ[3]ಗಳೋಘಮೋಘಂ ಕೊಳೆ[1]ಸ್ವ
ಸ್ಥಾ[1]ವಿಸ್ಮೃತಚಿತ್ತಂ ಧೈ
ರ್ಯಾವಷ್ಟಂಭದೊಳ್ ವೃಕ್ಷಮೂಲದೊಳಿರ್ದಂ ೨

ಹಿಮಸಮಯದೊ[2]ಳಧಿಪಂ ತಾ[2]
ಹಿಮದಿಂದೆಲುವಡೆಯೆ ಬಗೆಯ ಬಕ್ಕಂಬಯಲೊಳ್
ಹಿಮನಿಧಿಯೆಮನಿಧಿ [ಸಲೆ] ಧೈ
ರ್ಯಮಹಾಂಬುಧಿ ನೆಲಸಿ ಬೆಳ್ಳವಾಸದೊಳಿರ್ದಂ ೩

ಪೊತ್ತ ನೆಲಂ ನೆಲದೊಡನಡೆ
ಯೊತ್ತಿದಪುದು [3]ಸೆ[3]ಲೆಯ ಮೇಲೆ ಸೂರ್ಯಾಂಶುಗಳ
ಟ್ಟುತ್ತುಮಿರೆ ನಿಯಮನಿಶ್ಚಲ
ಚಿತ್ತಂ ಬೇಸಗೆಯೊಳಂದು ಕಲ್ನೆಲೆನಿಂದಂ ೪

ಅಂತಾ ಪರಮಯೋಗೀಶ್ವರಂ ತ್ರಿಕಾಲದೊಳಮಿರ್ಯಾಸಮಿತಿಯುಂ ಭಾ[4]ಷಾ[4] ಸಮಿತಿಯುಮೇಷಣಸಮಿತಿಯುಂ ಆದಾನ ನಿಕ್ಷೇಪಣಾ ಸಮಿತಿಯುಂ ಉತ್ಸರ್ಗ ಸಮಿತಿಯುಮೆಂಬ ಪಂಚಸಮಿತಿಯೊಳಂ ಮನೋಗುಪ್ತಿ ವಾಗ್ಗುಪ್ತಿ ಕಾರ್ಯಗುಪ್ತಿಯು ಮೆಂಬ ಗುಪ್ತಿತ್ರಯದೊಳಂ ಸಾಮಾಯಿಕಮುಂ ಛೇದೋಪಸ್ಥಾಪನಮುಂ ಪರಿಹಾರ ಶುದ್ಧಿಯುಂ ಸೂಕ್ಷ್ಮಸಾಂಪರಾಯಮುಂ ಯಥಾಖ್ಯಾ[5]ತ ಚಾರಿತ್ರಮುಮೆಂಬ ಪಂಚವಿಧ ಚಾರಿತ್ರದೊಳಂ ವಾಚನೆಯುಂ ಪೃಚ್ಛನೆಯುಮನುಪ್ರೇಕ್ಷೆಯು ಮಾಮಯಮುಂ ಧರ್ಮೋಪದೇಶಮುಮೆಂಬ ಪಂಚವಿಧ ಸ್ವಾಧ್ಯಾಯದೊಳಂ ನೆಱೆ[3]ದು ನಿಸ್ಸಂಗರಾಗಿ ಗಂಗಾತೀರಕ್ಕೆವಂದು ಜಂಗಮಸಿದ್ಧಪ್ರತಿಮಾನಂ ಚತುರ್ಮುಖ ಪ್ರತಿಮಾಯೋಗದೊಳಲ್ಲಿ ಕೇವಲ ಜ್ಞಾನೋತ್ಪತ್ತಿಯಾಗೆ ಚತುರ್ವಿಧ ದೇವನಿಕಾಯಂ ಬಂದು ಮಾನಸ್ತಂಭಚತುರ್ವನ ಹೇಮಪ್ರಾಕಾರಮಂಡಿತನಪ್ಪ ಮುಂಡಕೇವಳಿಗಳಿಗೆ ಸುಧಾಪಿಂಡಪಾಂಡುರಮಪ್ಪ ದುಗ್ಧಾಬ್ಧಿಜಲದಿಂ ಪಾದಾಭಿಷೇಕಂಗೆಯ್ಯೆ [6]ತ[6]ದಮಲ ಜಲಪ್ರವಾಹ ಸಂಗಮದಿಂ ಗಂಗಾಜಲಂ ಜಗನ್ಮಂಗಳಮಾದುದು ಅಂದಿಂದಿತ್ತ

1 ಸತಾ (ಕ) ಸತ್ವಾ (ಟ) 2 ಳಧಿಪಂ (ಕ) ಳಧಿಪಂ ತಾಂ (ಗಜ) ಳಾದೀಪಂ (ಟ) ಳಾಧಿಪಂ ತಾ (ತ) 3 ನೆ (ಗಜ) 4 ಷಣ (ಕಟತ) 5 ತ (ಗಜ) 6 ಸ (ಗಜ)

ಗಂಗೆಯುಂ ಭಗೀರಥಂ ತಂದನೆಂಬ ಲೋಕಪ್ರಸಿದ್ಧಿಯಾಗೆ ಭಾಗೀರಥಿಯೆಂದು ಕೊಂಡಾಡಿದರಾ ಭಗೀರಥ ಕೇವಳಿಯುಂ ಕೆಲವು ಕಾಲಕ್ಕೆ ಕರ್ಮಕ್ಷಯಂಗೆಯ್ದು ಮೋಕ್ಷಲಕ್ಷ್ಮೀಕಟಾಕ್ಷವಿಕ್ಷೇಪಲಕ್ಷಿತ ಸುಖಮಯ ಶರೀರನಾಗಿರ್ದಂ ಇತ್ತ ವರದತ್ತ ಮಹಾರಾಜಂ ತಮ್ಮಜ್ಜನಪ್ಪ ಸಗರಚಕ್ರವರ್ತಿಯ ತಮ್ಮಯ್ಯನಪ್ಪ ಭಗೀರಥನ ಸಾಮ್ರಾಜ್ಯಸುಖಪದವಿಯುಂ ತಾಳ್ದಿದ ಕನತ್ಕನಕಮಣಿಮಯಂಗಳುಮಭ್ರಂಕಷ ಕೂಟಕೋಟಿಗಳುಮಭ್ರತಿಲಹಮಾನಸ್ತಂಭಂ ಮಹಾಧ್ವಜವಿರಾಜಮಾನಂಗಳು ಮಪ್ಪನೇಕಚೈತ್ಯಾಲಯಂಗಳಂ ಮಾಡಿಸಿಯುಂ ನಾನಾಚ್ಛಂದ ಸಂದೋಹಮಂ ಸಮೆಯಿಸಿಯುಂ ಮಹಾಮಹಾದಿಜಿನಮಹಾಮಹಿಮೆಗಳಂ ನೆಗೞ್ಚಿ[1]ಯುಂ[1] ಪರಾರ್ಥ್ಯದ ರನ್ನಮಯ ಜಿನಪ್ರತಿಷ್ಠೆಗಳಂ ಪ್ರತಿಷ್ಠಿಸಿಯುಂ ಕನಕರಜತಮಣಿಮಯ ಘಂಟಾಜಾಲಪ್ರದೀಪಮಾಲೆಗಳಂ ನಿರ್ವರ್ತಿಸಿಯುಂ ಮಹಾಭಿಷೇಕ ವಿಧಿಯ ನನುಷ್ಠಿಸಿಯುಂ ಮಹಾಮಹಾದಿ ಚತುರ್ವಿಧಾರ್ಚನೆಗಳಂ ಪ್ರವರ್ತಿಸಿಯುಂ ಪರಮೇಶ್ವರರ ಧರ್ಮಪ್ರಭಾವನೆಯಂ ಪ್ರತಿದಿನಂ [2]ಪ್ರವರ್ತಿಸಿಯುಂ[2] ಮಹೋತ್ಸವಮಂ ಮಾಡಿಸಿಯುಂ ದಿನಾರ್ಚನಾತಿಶಯಮನುತ್ತರೋತ್ತರಂ ಮಾಡಿಯುಂ ಜಿನಶಾಸನ ಮನುದಿತೋದಿತಂ ಮಾಡಿಯುಂ ಸರ್ವಜನಭವ್ಯಜನಂಗಳಭ್ಯುದಯ ಪರಂಪರಾದಿ ವೃದ್ಧಿಯನತ್ಯಧಿಕಂ ಮಾಡಿಯುಂ ಮತ್ತಮಿಂತು

ಪರಮಶ್ರೀ ಜೈನಧರ್ಮೋನ್ನತಿ ಸಗರನಿನೆಮ್ಮಯ್ಯನಿಂ ಸಂದುದಿಂ[3]ತೀ
ಧರೆಗಾ[3]ನುಂ ಕೂಡೆ ಕೊಂಡಾಡುವೆನಿದನದಱಿಂದೆನ್ನ ರಾಜ್ಯೋದಯಂ ಬಿ
ತ್ತರಿಸುತ್ತಿರ್ಕುಂ ಮಹೀಮಧ್ಯದೊಳೆನುತುಮತಿಪ್ರೀತಿಯಿಂ ಧರ್ಮಚಿತ್ತಂ
ವರದತ್ತಂ ದಾನಚಿಂತಾಮಣಿಯೆನಿಸಿ ಯಶೋಭಾರಮಂ ತಾಳ್ದಿ ನಿಂದಂ ೫

ಬಿಳಿಯರ್[4]ಳ್[4]ಯಂತೆ ಗಂ[5]ಗಾ
ಜ[5]ಳದಂತೆಸೆವಜಿತಸೇನಮುನಿಪತಿಯ ಗುಣಾ
ವಳಿಯಂತೆ ನೆಗೞ್ದ ಕೊಪಣಾ
ಚಳದಂತೆ ಪವಿತ್ರಮತ್ತಿಮಬ್ಬೆಯ ಚರಿತಂ ೬

ಪುರುದೇವಾಜಿತದೇವರಿರ್ವರೆ ದಲಾದ್ಯೋಪಾದ್ಯತೀರ್ಥೇಶ್ವರರ್
ಭರತೇಶಂ ಸಗರೇಶನಿರ್ವರೆ ದಲಾದ್ಯೋಪಾದ್ಯ ಚಕ್ರೇಶ್ವರರ್

1 ಯುಂ ಸರ್ವಜನಭವ್ಯಜಿನಂ (ಚ) 2 ಪ್ರವರ್ಧಮಾನ (ಕಟ) ಪ್ರವರ್ಧಿಸಿಯುಂ (ಜ)
3 ತಿಂತಿದಕಾ (ಗ) ತಿರೆತಾ (ಚ) ತಿಕ್ಕಿದಕಾ (ಜ) 4 ೞ (ಕಗಚಜತ) 5 ಧಾಚ (ಗಜ)

ವರದಾನೋತ್ತಮನಾದನಾದಿಯುಗದೊಳ್ ಶ್ರೇಯಾಂಸನೀಕಾಲದೊಳ್
ಪರಮಶ್ರಾವಕಿ ನೀನೆ ದಾನಿಯೆ ವಲಂ ಶ್ರೀದಾನಚಿಂತಾಮಣೀ ೭

ವ್ರತಮಂ ಪೇೞಿಕ್ಕೊಡೆ ನೋಂತು ತಾೞ್ದೊಡಲುಂ ಚಕ್ರೇಶನಾಜ್ಞಾಧಿಪಂ
ಸುತನಂ ಪೇೞಿಕ್ಕೊಡೆ ಚಕ್ರವರ್ತಿ ಕಟಕಕ್ಕಾರಾಧ್ಯೆಯಾಗಿರ್ದೆಯಾ
ಯತಿಯಂ ಪೇೞಿಕ್ಕೊಡೆ ಕೆಟ್ಟ ಕಾಲದೊಳಿದಂ ಕೊಂಡಾಡಿದೈ ಧರ್ಮದು
ನ್ನತಿಯಂ ಪೆರ್ಚಿಸುವಂದು ನೀನೆ ಪಿರಿಯೈ ಶ್ರೀದಾನಚಿಂತಾಮಣೀ ೮

ಪಿರಿಯಂ ಬೂತುಗನಾತ[1]ನಿಂ[1]ಮಮಳನಾತಂ[2]ಗಂ ನೊಳಂಬಾಂತಕಂ[2]
ಪಿರಿಯಂ ನೆಟ್ಟನೆ ದಾನಧರ್ಮದೆಡೆಯೊಳ್ ಚಾವುಂಡರಾಯಂ ಕರಂ
ಪಿರಿಯಂ ಶಂಕರಗಂಡನಲ್ತೆ ಪಿರಿಯಂ ತದ್ಬಾರಮಂ ಪೊತ್ತು ನಿ
ತ್ತರಿಸುತ್ತಿರ್ಪುದಱಿಂದೆ ನೀನೆ ಪಿರಿಯೈ ಶ್ರೀದಾನಚಿಂತಾಮಣೀ ೯

ನೆಗೞ್ದರ್ ದಾನದಿನೊರ್ವರೊರ್ವರಱಿವಂ ತಾಳ್ದಿರ್ದ ಸಮ್ಯಕ್ತ್ವದಿಂ
ನೆಗೞ್ದರ್ ಧರ್ಮದ ಪೆರ್ಮೆಯಿಂ ಕೆಲಕೆಲರ್ ಶೀಲವ್ರತಾಚಾರದಿಂ
ನೆಗೞ್ದೈ ನೀನೆ ಜಗಕ್ಕೆ ದಾನಗುಣದಿಂ ಸಮ್ಯಕ್ತ್ವದಿಂ ಧರ್ಮದಿಂ
ಮಿಗೆ ಶೀಲವ್ರತದಿಂ [3]ಸದಾ[3]ಚರಣದಿಂ ಶ್ರೀದಾನಚಿಂತಾಮಣೀ ೧೦

ದಯೆಯಂ ತಾಳ್ದಿದ ಜೈನಧರ್ಮರುಚಿಯಂ ಕೈಕೊಂಡು ಸಮ್ಯಕ್ತ್ವ ಶು
ದ್ಧಿಯಿನೀಕಾಲದೊಳಪ್ಪುಕೆಯ್ದು ಭುವನಕ್ಕಾಶ್ಚರ್ಯಮಪ್ಪಂತು ಕೀ
ರ್ತಿಯನಾವರ್ಜಿಸುತಿರ್ಪುದಾವ ಚರಿತಪ್ರಾರಂಭದಿಂ ಚಕ್ರವ
ರ್ತಿಯುಮಂ ಪೆರ್ಚಿಸಿದೊಳ್ಪು ನಿನ್ನೊಳೆಸೆಗುಂ ಶ್ರೀದಾನಚಿಂತಾಮಣೀ ೧೧

ಮಹಿಚಕ್ರಕ್ಕಿದು ಚೋದ್ಯಮಲ್ತೆ ನಿಸುವಂತಾರ್ತೀವುದುಂ ಕಂಡು ಸ
ಸ್ಪೃಹರೆಲ್ಲಂ ಗೆಳೆಗೊಂಡು ಬಣ್ಣಿಸುವರಿನ್ನೇಂಚೋದ್ಯಮಾಗಳ್ ಜಗ
ನ್ಮಹನೀಯತ್ವಮನೆಯ್ದೆ ತಾಳ್ದಿದ ಮಹಾಪ್ರಖ್ಯಾತಿಯಂ ಕೇಳ್ದು ನಿ
ಸ್ಪೃಹರುಂ ಬಣ್ಣಿಪರಲ್ತೆ ನಿನ್ನ ಗುಣಮಂ ಶ್ರೀದಾನಚಿಂತಾಮಣೀ ೧೨

---

1 [ನಿ] (ತ) 2 ಗಾತ ನಿಚ್ಯಂತನುಂ (ಗಚಜ) 3 ಪದಾ (ಕ) ದಪಾ (ಚ), ತಪಾ (ಗಜ)

ನಯಮಮಂ ತಾಳ್ದಿ ಪೊಗೞ್ತೆವೆತ್ತು ಭುವನಕ್ಕಾರಾಧ್ಯೆಯಾದತ್ತಿಮ
ಬ್ಬೆಯ ಶೀಲೋನ್ನತಿಗತ್ತಿಮಬ್ಬೆಯ ಮಹಾದಾನೋತ್ಸವಕ್ಕತ್ತಿಮ
ಬ್ಬೆಯ ಧರ್ಮಸ್ಥಿತಿಗತ್ತಿಮಬ್ಬೆಯ ಜಿನೇಂದ್ರಾರಾಧನಕ್ಕತ್ತಿಮ
ಬ್ಬೆಯ ಭಕ್ತಿಕ್ರಮಕತ್ತಿಮಬ್ಬೆಯ ಗುಣಕ್ಕಾರುಂ ಸಮಂ ಪೋಲ್ವರೇ ೧೩

ಗುಣದೊಳ್ಪಿಂ ಸಂದ ತನ್ನನ್ವಯಕೆ ನೆಗೞ್ದಿಳಂಕಾರಮಂ ಮಾಳ್ಪ ಭೂಷಾ
ಮಣಿಯುಂ ಶ್ರೀಜೈನಧರ್ಮೋನ್ನತಿಯ ಮಹಿಮೆ[1]ಯುಂ[1] ಭಕ್ತಿಯಂ ಕಾವ ರಕ್ಷಾ
ಮಣಿ[1]ಯುಂ[1] ಭವ್ಯೋತ್ತಮಾಂಗಾಸ್ಪದದೊಳೆ ಗುಣದುದ್ದಾನಿಯಂ ಮಾಳ್ಪ ಚೂಡಾ
ಮಣಿ[1]ಯುಂ[1] ಶ್ರೀದಾನಚಿಂತಾಮಣಿಯೆ ಪೆಱರೊಳಿಂತೀಗುಣಶ್ರೇಣಿಯಂಟೇ ೧೪

ರಣದೊಳ್ ಮಾಱಾಂತ ಚೂಡಾಮಣಿಗೆ ಮಣಿಯದುದ್ವೃತ್ತನಂ ಗೆಲ್ದ ವಿದ್ಯಾ
ಮಣಿ ವೀರಾರಾತಿರಕ್ಷಾಮಣಿ ನಿಖಿಳವಿನೇಯಾಗ್ರಗಣ್ಯೈಕ ಚೂಡಾ
ಮಣಿ ಧರ್ಮಾಂಭೋಜಷಂಡದ್ಯುಮಣಿ ಬುಧಜನಪ್ರೀಣನಾಗ್ರೇಸರಗ್ರಾ
ಮಣಿಯಾದಂ ದಾನಚಿಂತಾಮಣಿ ಗುಣಮಣಿನಿಶ್ರೇಣಿಕಾಶ್ರೇಣಿಯಿಂದಂ ೧೫

ಜಿನಪೂಜೋತ್ಸವಕೆಲ್ಲಿಯುಂ ಜಿನಕಥಾಳಾಪೋತ್ಸವಕ್ಕೆಲ್ಲಿಯುಂ
ಜಿನತೀರ್ಥೋತ್ಸವಕೆಲ್ಲಿಯುಂ ಜಿನಮುನಿವ್ರಾತೋತ್ಸವಕ್ಕೆಲ್ಲಿಯುಂ
ಜಿನಗೇಹೋತ್ಸವಕೆಲ್ಲಿಯುಂ ಜಿನಮಹಾದಾನೋತ್ಸವಕ್ಕೆಲ್ಲಿಯುಂ
ಧನಮಂ ಪತ್ತಿಸುತಿರ್ಪೆ ನೀನೆ ಪಿರಿಯೈ ಶ್ರೀದಾನಚಿಂತಾಮಣೀ ೧೬

ಅಲಸುತಮಿಾವ ಚಿಂತಿಸುತಮಿಾವ ಮೊಗಂಮುರಿದೀವ [2]ಮುಟ್ಟಮೂ
ದಲಿಸುತಮಿಾವ[2] ಪೆರ್ಚನೊಸೆದೀವತಿ ಬೆಳ್ಮೊಗದಿಂದಮಿಾವ[3]ಮ[3]
ಮ್ಮಲಮಱುಗುತ್ತುಮಿಾವ ಕಡುಲೋಭಕದಾನಗುಣಂಗಳಂ ಪಱಿಂ
ಚಲೆದಪುದಾರ್ತು ಕೂರ್ತು ಪಿರಿದೀವ ಗುಣಂ ಗುಣದಂಕಕಾರ್ತಿಯಾ ೧೭

1 ಯಂ (ಕಗಚಜ) 2 ಪೆಚ್ಚ, ಪೆಚ್ಚ್ಲ (ಗಚಜ) 3 ಕುನುಂಗುತಮಿಾವ ಮ (ಗಜ)

*ನುಡಿದುದನೀಗಳಾಗ ಪೊಗಸುಂ ಪರೆ ಪೊತ್ತರೆ ನಾಳೆ ನಾಡಿದಂ
[1][ದಡಗದೆ][1] ನಿಚ್ಚಲುಂ ಪುಸಿವ ಲೋಭದ ಮಾತಿನೊಳೇನೋ ಧಾತ್ರಿಯೊ
ಳ್ನುಡಿದುದೆ ನನ್ನಿ ಮಾಡಿದುದೆ ಶಾಸನಮಿತ್ತುದೆ ದೇವರಿತ್ತುದಂ
ದೊಡೆಗುಣದೊಳ್ಪನೇಕೆ ಬೆಸಗೊಂಡಪೆ ನೀ ಗುಣದಂಕಕಾರ್ತಿಯಾ ೧೮

ಪಡೆದೆರೆದರ್ಥಿಗೀಯದೆ ಜಸಕ್ಕೆ ತಗುಳ್ಚದೆ ತಮ್ಮ ದಾನಧ
ರ್ಮದೊಳುಪಯೋಗಮಾಗದುಪಭೋಗಿಸದರ್ಥಮನಾದಮಾನೆಗಂ
ಕುದುರೆಗಮಾರ್ತುವೆಚ್ಚಿಸ[2]ದೆ ಪೂಜಿಸಿ[3] ಪೂಜಿಸಿಯಾಳ್ದು ಪೂಟ್ಬಿ ಬ
ಯ್ತುದೆ ಪೆಱಗೆಂಬುದೀದೊರೆತು ದಾನಗುಣಂ ಗುಣದಂಕಕಾರ್ತಿಯಾ ೧೯

ಎನಿಸಿ ನೆಗಟ್ದ್ದತ್ತಿಮಬ್ಬೆಯ
ತನಯಂ ಪ[3]ಡೆ[3]ವಳ್ಳ ತೈಲನಣ್ಣಿಗದೇವಂ
ವಿನಯಾರ್ಣವನೂರ್ಜಿತ ಶೌ
ರ್ಯನಿದಾನಂ ಚಕ್ರವರ್ತಿ ಸೈನ್ಯಾಧೀಶಂ ೨೦

ಶ್ರೀನೇಮಿಚಂದ್ರಮುನಿಗಳ್
ಕಾನೂರ್ಗಣತಿಲಕರವರ ಶಿಷ್ಯರ್ ಸದ್ವಿ
ದ್ಯಾನಿಳಯಣಯ್ಯಣಯ್ಯಂ
ತಾನೋದಿಸೆ ಕುಶಲನಾದನಣ್ಣಿಗದೇವಂ ೨೧

ಮುಂ ಗಡಮಾಬ್ರಹ್ಮಂ ದೇ
ವಾಂಗನೆಯುಂ ನೋಡಿ ಸೋಲ್ತು [4]ತದ್ಬ್ರ[4]ಹ್ಮಂ ಚಿಂ
ತಾಂಗಜನಂತರಮುಂ ಬ್ರ
ಹ್ಮಂಗಮುದಕ್ಕೀ ತ್ರಿವಿಕ್ರಮಂ ಬ್ರಹ್ಮಂಗಂ ೨೨

ಪದಯಿದನೆನೆ ಪದುಳಿದನೆನೆ
ಪದಸ್ಥನೆನೆ ಸತ್ಯ ಶೌರ್ಯಶೌಚಾದಿಗುಣಾ

---

1 ದೆಡಗಡೆ (ಗ) ಡಿಗಡೆ (ಚ) ದಸಡೆ (ಜ) 2 ಧೆ (ಗಚಜ) 3 ಡ (ಗಜ) 4 ಮಾಬ್ರ (ಗಚಜ)
* 'ಕಟ' ಪ್ರತಿಯಲ್ಲಿಲ್ಲ.

ಸ್ಪದನೆನೆ ನೆಗಬ್ದಿ ಹವವು
ಲ್ಲದೇವನಂ ಮನದೆಗೊಂಡನಣ್ಣಿಗದೇವಂ ೨೩

ವಿನುತಾರ್ಥಿಗೆ ಗಡ ಮಾಣಿಕ
ಮೆನೆ ನಚ್ಚುವ ನಾಗದೇವನಗ್ರಸುತಂ ಮಾಂ
ತನದಿಂ ಮಕ್ಕಳ ಮಾಣಿಕ
ಮೆನಿಸಿದನಭಿಮಾನಿ ದಾನಿ ಪಡೆವಳ ತೈಲಂ ೨೪

ಅದಿರದ ಗಂಡನೆಂಬುದುದಿತೋದಿತನೆಂಬುದಗಣ್ಯಪುಣ್ಯನೆಂ
ಬುದು ಗುಣವಂತನೆಂಬುದು ದಯಾಪರನೆಂಬುದು ಧರ್ಮಚಿತ್ತನೆಂ
[1]ಬುದು ಶುಭವೃತ್ತನೆಂಬುದು[1] ಮಹೋದಯನೆಂಬುದು ದೇವಭಕ್ತನೆಂ
[2]ಬುದು ಪತಿಭಕ್ತನೆಂಬುದು[2] ಜಗದ್ವಳಯಂ ಪಡೆವಳ್ಳತೈಲನಂ ೨೫

ದಿನಕರಸುತವಚನಂ ರಾ
ಮ[3]ನೇಸು[3] ಕಂಡರಿಸಿ ಕಲ್ಲೊಳಿಟ್ಟಕ್ಕರವೆಂ
ಬಿನೆಗಮೆಸೆದಪುದು ನೃಪ ಶಾ
ಸನಮೆನಿಸುವ ನನ್ನಿ ನನ್ನಿನಾರಾಯಣನಾ ೨೬

ಜಗತೀಚಕ್ರಮನಾಳ್ಗೆ ತೈಲನೃಪನೇಕಚ್ಛತ್ರದಿಂ ಚಕ್ರವ
ರ್ತಿಗೆ ದಿಗ್ಭಿತ್ತಿವರಂ ನಿಮಿರ್ಗೆ ನೆಲನಾಸ್ವಾಮಿ ಪ್ರಸಾದೋದಯಂ
ಮಿಗೆ ತೈಲಂ ನೆಗಬ್ದಿತ್ತಿಮಬ್ಬೆಯುಮುಗಂ ಮತ್ಕಾವ್ಯಮಂ "ಮೆಚ್ಚಿ" ಕೇ
ಳ್ವ ಗುಣಂಗೊಳ್ವ ಜನಕ್ಕಮಕ್ಕೆ ವಿಭವಂ ಭದ್ರಂ ಶುಭಂ ಮಂಗಳಂ ೨೭

ಕತೆಯೊಳಗಱಿಯದೆ ವಿಪರೀ
ತತೆಯಿಂದಂ ಪೇಟ್ದಿ ಕೃತಿಗಳಿರ್ಕೆ ಪುರಾಣ
ಸ್ಥಿತಿಯೊಳೆ ಕವಿರತ್ನನಿನ
ನ್ವಿತಮಾದುದು ಸಗರಚಕ್ರವರ್ತಿಯ ಚರಿತಂ ೨೮

---

1 ಬುದು (ಚಜ) 2 ಬುದು (ಗಜ) 3 ನೆನಿಸು (ಕಟ) 4 ಮೆಚ್ಚೆ (ಗಜ)

ಸಗರಸುತರೆಲ್ಲರುಂ ಮೋ
ಕ್ಷಗಾಮಿಗಳ್ ಚರಮದೇಹಧಾರಿಗಳಂತಾ
ಬಗೆಗೆಟ್ಟವಂದಿರಂ ಪ
ನ್ನಗರಾಜಂ ಕೊಂದನೆಂಬುದಪಸಿದ್ಧಾಂತಂ ೨೯

ಜಿನರ್ಗಂ ತ್ರಿಕಾಲಯೋಗಂ
ಜಿನರ್ಗಂ ಸ್ವಾಧ್ಯಾಯಮಯ್ದುಮಾಸಮಿತಿಗಳುಂ
ಜಿನರ್ಗಮೊಳವುಳ್ಳೊಡಂ ನೆಱೆ
ಯೆ ನೋಡಿ ನಂಬುಗೆ ಮಹಾಪುರಾಣದೊಳೆ ಬುಧರ್ ೩೦

ಪ್ರಾಯಶ್ಚಿತ್ತಂ ವಿನಯಂ
ವೈಯಾಪೃತ್ಯಂ ಜಿನಂಗೆ ಕೂಡದು ದೋಷಾ
ಪಾಯತಿಯಿಂ ಧ್ಯಾನಂ ಸ್ವಾ
ಧ್ಯಾಯವ್ಯುತ್ಸರ್ಗಮುಂಟು ಸಂದೆಯಮುಂಟೇ ೩೧

ಎನಿತೊಳವು ಮನದ ಸಂದೆಯ
ಮನಿತುಮಸಂದಿಗ್ಧಮೆನಿಸುಗುಂ ಧರ್ಮದೊಳ
ಪ್ಪನುರಾಗವೊದವುಗುಂ ರ
ತ್ನನ ಪೇಳ್ದಜಿತನ ಪುರಾಣಮಂ ಕೇಳಲೊಡಂ ೩೨

[1]ಪೆಱವುಳವುಳ್ಳು[1]ವಿಲ್ಲಿಯೊಳವಾಗಮಭಾಷೆಗಳಲ್ಲಿಯುಂಳ್ಳುವಂ
ಪೆಱವುಳಿ ಕಾಣಲಾಗದೆನೆ ಪಂಪನ ಪೊನ್ನನ ಪೇಳ್ದ ಕಬ್ಬದೊಳ್
ನೆಱೆಯೆ ಪರಿಸ್ಫುಟಂ ನೆಱೆಯದಿರ್ದುದುಮಂ ನುಡಿದೆಯ್ದೆ ಬಲ್ಮೆ ಕ
ಣ್ದೆಱೆಯೆ ನೆಗಳ್ಚಿದಂ ಕವಿಚತುರ್ಮುಖನಾಗಮವೇದಿಯಪ್ಪುದಂ ೩೩

ಈ ದೊರೆಯ ಕಥಾನಾಯಕ
ನೀ ದೊರೆಯ ಮಹಾಪ್ರಸಿದ್ಧಕವಿ ಪೋದರೊಳಿ
ಲ್ಲಾದರೊಳಿಲ್ಲಪ್ಪರೊಳಿ
ಲ್ಲೀ ದೊರೆಯವು ಕೃತಿಗಳಿಲ್ಲ ಸದಲಂಕೃತಿಗಳ್ ೩೪

1 ಪೆಱವುಳಿ...(ಕ) ಪೆಱಿವುಳ್ಳಿವುಳ್ಳ (ಜ) ಪೆಱವೊಳವುಳ್ಳು (ಟ)

ಇನಿತುಪಪತ್ತಿಯಿಲ್ಲಿನಿತು ಬಿನ್ನಣವಿಲ್ಲಿನಿತರ್ಥದೃಷ್ಟಿಯಿ
ಲ್ಲಿನಿತುಚಿತೋಕ್ತಿಯಿಲ್ಲಿನಿತಳಂಕೃತಿಯಿಲ್ಲಿನಿತಾಗಮಾರ್ಥವಿ
ಲ್ಲಿನಿತುವರಂ ಪ್ರಬೋಧವಮಣವಿಲ್ಲ ಪೆಱರ್ಗಿದು ಕಾವ್ಯರತ್ನಮಂ
[1]ಘನ[1]ಮೆನೆ ಮೆಚ್ಚಿ ಬಣ್ಣಿಸದರಾರ್ ಕವಿರತ್ನನ ಕಾವ್ಯರತ್ನಮಂ ೩೫

ಜಗದೊಳಗಾದಿಪುರಾಣಂ
ನೆಗೞ್ದುದು ಮುಂ ಪಂಪನಿಂದೆ ಪೊನ್ನಿಗನಿಂದಂ
ನೆಗೞ್ದುದು ಶಾಂತಿಪುರಾಣಂ
ನೆಗೞ್ದುದು ಕವಿರತ್ನನಿಂದಮಜಿತಪುರಾಣಂ ೩೬

ಉಪಮಾತೀತಮೆನಿಪ್ಪಾ
ದಿಪುರಾಣದ ರೇಖೆಗಂ ಬರಲ್ ನೆಱೆಗುಮೆ ಶಾಂ
ತಿಪುರಾಣದ ರೇಖೆಗಮಜಿ
ತಪುರಾಣದ ರೇಖೆಗಂ ಪುರಾಣದ ಕೃತಿಗಳ್ ೩೭

ಕವಿಜನದೊಳ್ ರತ್ನತ್ರಯ
ಪವಿತ್ರಮೆನೆ ನೆಗೞ್ದ ಪಂಪನುಂ ಪೊನ್ನಿಗನುಂ
ಕವಿರತ್ನನುಮಿೀ ಮೂವರ್
ಕವಿಗಳ್ ಜಿನಸಮಯದೀಪಕರ್ ಪೆಱರೊಳರೇ ೩೮

ಸುಭಗಕವಿ ಪಂಪನಿಂ ವಾ
ಗ್ವಿಭವೋನ್ನತಿ ನೆಗೞ್ದವನ ಗುಣದೊಳಗೆಸೆದಿ
ರ್ದುಭಯಕವಿಚಕ್ರವರ್ತಿಗ
ಮಭಿನವಕವಿಚಕ್ರವರ್ತಿಗಂ ದೊರೆಯೊಳರೇ ೩೯

ಕವಿಗಳೊಳವರಿರ್ವರೆ ಪು
ಣ್ಯವಂತರಿರ್ವರೆ ಕೃತಾರ್ಥರಿರ್ವರೆ ಸೊಬಗರ್
ಕವಿತಾಗುಣಾರ್ಣವಂ ಮೇಣ್
ಕವಿರತ್ನಂ ಮೇಣ್ ಗುಣಕ್ಕೆ ಮಚ್ಚರಮುಂಟೇ ೪೦

1 ಗಳ (ಗಜ)

ತ್ರಿಜಗದೊಳಾದಿಪುರಾಣಮು
ಮಜಿತಪುರಾಣಮು[1]ಮನೆ[1]ಸೆಯೆ ಪೇೞ್ದುದಱಿಂದಂ
ದ್ವಿಜವಂಶಧ್ವಜ ವೈಶ್ಯ
ಧ್ವಜ[2]ರೆ[2]ನ್ನದರೊಳರೆ ಪಂಪನಂ ರತ್ನನುಮಂ ೪೧

ಧರಣಿಗೆ ನೆಗೞ್ದರ್ ಸಲೆ ರ
ಟ್ಟರಾಜ್ಯದೊಳ್ ಮುನ್ನೆ ಪಂಪನುಂ ಪೊನ್ನಿಗನುಂ
ನರಪತಿಪೂಜ್ಯಂ ಚಾಳು
ಕ್ಯ ರಾಜ್ಯದೊಳ್ ನೆಗೞ್ದನುಭಯಕವಿ ಕವಿರತ್ನಂ ೪೨

ಅಭಿಮತಜೈನೇಂದ್ರ ವಚೋ
ವಿಭವಂ ಶಬ್ದಾನುಶಾಸನಪ್ರಭವ ವಚೋ
ವಿಭವಮೊಡನೆಸೆಯೆ ರಂಜಿಪ
ನುಭಯವ್ಯಾಕರಣ ಪರಿಣತಂ ಕವಿರತ್ನಂ ೪೩

ಕರಮೆಸೆದುವು ರತ್ನತ್ರಯ
ಪರಿಕಲ್ಪದೆ ಪರಶುರಾಮಚರಿತಂ ಚಕ್ರೇ
ಶ್ವರಚರಿತಮಜಿತತೀರ್ಥೇ
ಶ್ವರಚರಿತಂ ರತ್ನನಿಂದೆ ಭುವನತ್ರಯದೊಳ್ ೪೪

ಬೆಳುಗರೆ ನಾಡೊಳ್ ಪುಟ್ಟಿದ
ಬಳೆಗಾಱಿರ ಕುಲದೊಳೆಱೆದಜಿತಶಾಸನಮಂ
ಬೆಳಗುವ ಚಕ್ರೇಶ್ವರಮಂ
ಡಳೇಶ್ವರಂ ಬೆಸಸೆ ನೆಗೞ್ದ ಕವಿ ಕವಿರತ್ನಂ ೪೫

ಅಱಿಕೆಯ ಗಟ್ಟಗೆಯುಂ ಪೆ
ದೋರ್ಗಱೆಯುಂ ಪರಿವಲ್ಲಿ ತದ್ದವಾಡಿಗೆ ತೆಂಕಲ್
ತೊಱಗ[3]ಲೆಗೆ[3] ಬಡಗಲಿದುರ್ದು
ನೆಱೆಯೆ ಸುಖೋದ್ದೀಪವೆನಿಸಿ ಬೆಳುಗಲಿದೇಶಂ ೪೬

---

1 ಮೆ (ಕಗಚಜ) 2 ಮೆ (ಕಗಚಜ) 3 ಲಿಗೆ (ಜ)

[1]ಬೆಳು[1]ಗಲಿಯಯ್ನೂಱರೊಳ
ಗ್ಗಳವೆನಿಸುವ ಜಂಬುಖಂಡಿಯೆಪ್ಪತ್ತಱ್ಕಂ
ತಿಳಕವೆನೆ ನೆಗೞ್ದ ಮುದುವೊೞ
ಲೊಳೆ ಪುಟ್ಟ ಸುಪುತ್ರನೆನಿಸಿದಂ ಕವಿರತ್ನಂ ೪೭

ಸಂದ ಪತಿವ್ರತಾಗುಣ ವಿಭೂಷಣದಿಂ ನೆಗೞ್ದಬ್ಬಲಬ್ಬೆ ತಾಯ್
ತಂದೆ ಜಿನೇಂದ್ರಪಾದಕಮಲಭ್ರಮರಂ ಜಿನವಲ್ಲಭೇಂದ್ರನ
ಣ್ಣಂ ದೃಢಬಾಹು ರೇಚಣನುದಾರಗುಣಂ ಗುಣಿಮಾರಮಯ್ಯನೆಂ
ದಂದೆ ವಣಿಕ್ಕುಳಾರ್ಕನೆನಿಸಿತ್ತೆಸಕಂ ಕವಿಚಕ್ರವರ್ತಿಯಾ ೪೮

ದೊರೆಕೊಂ[2]ಡ[2] ಸೌಮ್ಯಸಂವ
ತ್ಸರದೊಳ್ ಕರ್ಕಟಕರಾಶಿಯೊಳ್ ಸೌಮ್ಯಮುಖಂ
ಗುರು ವತ್ಸಳನುದಯಿಸಿದಂ
ಸರಸ್ವತೀರತ್ನಮಂಡನಂ ಕವಿರತ್ನಂ ೪೯

ಗುರುಗಳಜಿತಸೇನಾಚಾರ್ಯರಿಂದ್ರಾದಿವಂದ್ಯಾ
ಚರಿತರಜಿತ ಶೌರ್ಯ ಸ್ವಾಮಿ ಚಾವುಂಡರಾಯಂ
ವರದನಜಿತನಾಥಂ ಸತ್ಯನೆಂದಂದು ರತ್ನಂ
ಬರೆಗಮಧಿಕಪುಣ್ಯಂ ನೋಡೆಯೇಂ ನೋಂತನಾವೊಂ ೫೦

ಮದನಾವತಾರಮುಂ ಕನ
ಕದಂಡ ಚಾಮರಮನುನ್ಮದೇಭಮನುತ್ತುಂ
ಗದ ಛತ್ತ್ರಗಾವೆಯುಂ ಪಡೆ
ದುದಾತ್ತ ಕವಿತಿಲಕನೆನಿಸಿದಂ ಕವಿರತ್ನಂ ೫೧

ಸಂತತ ದೇವಭಕ್ತಿ ಪತಿಭಕ್ತಿಗುಣಂಗಳೆ ಭೂಷಣಂಗಳ್
ಪರ್ಂತೆಸೆದಿರ್ಪಿನಂ ತನಗೆ ಧರ್ಮಕುಲೋಚಿತ ಶುದ್ಧವೃತ್ತಿಯಿಂ
ಕಾಂತೆಯರೊಳ್ಗಣಂಬಡೆದ ಧರ್ಮದ ಪೆರ್ಮೆಗೆ ನೋಂತ ಜಕ್ಕಿಯುಂ
ಶಾಂತಿಯುಮೆಂಬರಿರ್ವರೆ ಕುಲಾಂಗನೆಯರ್ ಕವಿಚಕ್ರವರ್ತಿಯಾ ೫೨

---

1 ಬೆಳ (ಜ) 2 ಡ (ಕಜಟತ)

ವಿದಿತ ವಿರೋಧಿ ವತ್ಸರದ ಭಾದ್ರಪದೋದಿತ ಶುಕ್ಲಪಕ್ಷದೊಳ್
ಬಿದಿಗೆಯೊಳಾದಿವಾಸರದೊಳುತ್ತರೆಯೊಳ್ ಶಿವಯೋಗದೊಳ್ ಸುಖ
ಪ್ರದಮೆನೆ ಕನ್ನೆರಾಸಿಯೊಳೆ ವೃಶ್ಚಿಕಲಗ್ನದೊಳರ್ಕಜಾಂಶಮಾ
ದುದು ಕವಿರತ್ನನಂದನನ ರಾಯನ ಜಾತಕಮುತ್ತರೋತ್ತರಂ ೫೩

ವಿಜಯಾಬ್ದಂ ನೆಗಟ್ದಿಂದು ಮಾರ್ಗಶಿರಶುದ್ಧೈಕಾದಶೀವಾಸರಂ
ರಜನೀವಲ್ಲಭವಾರಮಶ್ವಿನಿ· ನಿಶಾನಾಥಾಂಶಕಂ ಕೂಡೆ ನಾ
ಕಜಮಂತ್ರಿಪ್ರಕಟೋದಯಂ ನೆಗೞ್ವಿನಂ ತನ್ನುಚ್ಚದೊಳ್ ಪುಟ್ಟಿದಳ್
ನಿಜವರ್ಣೋತ್ತಮೆಯತ್ತಿಮಬ್ಬೆ ಕವಿರತ್ನಾಂಬೋಧಿಯೊಳ್ ಲಕ್ಷ್ಮಿಯೊಲ್
೫೪

ನೆಗಟ್ದ ವರಿರ್ವರ ಪೆಸರ್ಗಳ್
ನೆಗಟ್ದುವು ತನ್ನೆರಡುಮುದ್ವಕೃತಿಗಳ್ ರಾಯಂ
ಮಗನತ್ತಿಮಬ್ಬೆ ಮಗಳೆನೆ
ನೆಗಟ್ದಂ ಸಂತಾನವೃದ್ಧಿಯಿಂ ಕವಿರತ್ನಂ ೫೫

ಶಕವರ್ಷ ಪಂಚದಶಾ
ಧಿಕ ನವಶತಮಾಗೆ ವಿಜಯ ಸಂವತ್ಸರ ಕಾ
ರ್ತಿಕ ನಂದೀಶ್ವರ ದಿನದೊಳ್
ಪ್ರಕಟಸಿದುದು ರತ್ನನಿಂದಮಜಿತಪುರಾಣಂ ೫೬

ಇದು ಸಕಲ ಮುನೀಂದ್ರ ವೃಂದ ವೃಂದಾರಕ ಶ್ರೀಮದಜಿತಸೇನಭಟ್ಟಾರಕ ಶ್ರೀಪಾದಪದ್ಮ ಪ್ರಸಾದಾಸಾದಿತ ರತ್ನತ್ರಯಾಲಂಕೃತ ಶ್ರೀಮದಭಿನವ ಕವಿಚಕ್ರವರ್ತಿ ಕವಿರತ್ನ ವಿರಚಿತ ಶ್ರೀ ದಾನಚಿಂತಾಮಣಿ [1]ನಿ[1]ರ್ಮಾಪಿತ ಶ್ರೀಮದಜಿತತೀರ್ಥಕರ ಪುರಾಣತಿಲಕದೊಳ್

[2]ಪುರಾಣ ನಿರ್ಮಾಣ[2] ವರ್ಣನಂ

ದ್ವಾದಶಾಶ್ವಾಸಂ

ಅಜಿತತೀರ್ಥಕರ ಪುರಾಣತಿಲಕಂ ಸಮಾಪ್ತಂ

1 ನಿನಿ (ಕಟ) 2 ಪುರಾಣ ನಿರ್ವಾಣ (ಕಚ) ಪರಿನಿರ್ವಾಣ (ಗ) ಕವಿನಿರ್ವಾಣ (ಜ)

# ಟಿಪ್ಪಣಿಗಳು

## ಪ್ರಥಮಾಶ್ವಾಸಂ

೧. ನಮ್ರ—ಬಾಗಿದ, ನಮಸ್ಕರಿಸಿದ. ಅರುಣಮಣಿ—ಕೆಂಪುರತ್ನ. ಬಾಲಾರ್ಕ—ಬಾಲ ಸೂರ್ಯ. ಕಾಶ್ಮೀರರಾಗ—ಕುಂಕುಮದ ಬಣ್ಣ. ವಿನತ—ಬಾಗಿದ. ಹೈಮ—ಚಿನ್ನದ. ಕರ್ಣಾವತಂಸ—ಕಿವಿಯ ಆಭರಣ. ಕರಂ—ಅತಿಶಯವಾಗಿ. ಧಾಮ—ವಾಸಸ್ಥಾನ. ಕ್ರಮಾಂಭೋರುಹ—ಪಾದಕಮಲ. ಅರ್ಹಂತ—ಪಂಚಪರಮೇಷ್ಠಿಗಳಲ್ಲಿ ಒಬ್ಬ.

೨. ಸಿದ್ಧಮಾತೃಕೆ—ಸಿದ್ಧರಲ್ಲಿ ಪ್ರೀತಿ. ಸಿದ್ಧಶೇಷೆ—ಮಂತ್ರಾಕ್ಷತೆ, ಪ್ರಸಾದ. ಸಿದ್ಧ—ಪಂಚಪರಮೇಷ್ಠಿಗಳಲ್ಲಿ ಒಬ್ಬ. ನಿರ್ಮಿ—ಉಂಟುಮಾಡು.

೩. ನೆಗೞ್—ಪ್ರಸಿದ್ಧವಾಗು. ನೆಗೞ್ಚು—ತೊಡಗಿಸು, ಪ್ರಸಿದ್ಧಿಸು. ಆಚಾರ್ಯ—ಪಂಚಪರಮೇಷ್ಠಿಗಳಲ್ಲಿ ಒಬ್ಬ. ತಾಮೆ—ತಾವೆ. ಕಣಿ—ಗಣಿ. ನಿಜ—ತನ್ನ.

೪. ಬಟ್ಟೆ—ದಾರಿ. ಕೂಪ—ಬಾವಿ. ಅಱಿಪಿ—ತಿಳಿಸಿ. ವಿನೇಯ—ಶಿಷ್ಯ, ಜಿನಧರ್ಮಾನುಯಾಯಿ. ಈಗೆ—ಕೊಡಲಿ. ಉಪಾಧ್ಯಾಯ—ಪಂಚಪರಮೇಷ್ಠಿಗಳಲ್ಲಿ ಒಬ್ಬ.

೫. ಭವ—ಸಂಸಾರ. ಕಾಂತಾರ—ಅರಣ್ಯ. ವಿಷಯ—ಇಂದ್ರಿಯಸುಖ, ಭೋಗಾಭಿಲಾಷೆ. ಚಿತ್ತಸಂಭವ—ಮನ್ಮಥ. ಕಷಾಯ—ಸುಖದುಃಖಗಳನ್ನುಂಟುಮಾಡುವ ಕ್ರೋಧ ಮಾನ ಮಾಯ ಲೋಭ ಎಂಬ ನಾಲ್ಕು ಬಗೆಯ ದೋಷಗಳು. ಭವ್ಯಜನ—ಸಿದ್ಧಿ ಹೊಂದುವ ಸಾಮರ್ಥ್ಯವುಳ್ಳ ಜನ. 'ಶಾಂತಿಮಿಚ್ಛಂತಿ ಸಾಧವಾ'—'ಸಾಧುಗಳು ಶಾಂತಿಯನ್ನು ಅಪೇಕ್ಷಿಸುವರು.' ಸಾಧು—ಪಂಚಪರಮೇಷ್ಠಿಗಳಲ್ಲಿ ಒಬ್ಬ. ಅಪವರ್ಗ—ಮೋಕ್ಷ. ಬರ—ಅಲ್ಲಿಯವರೆಗೆ.

೬. ವೃಂದಾರಕ—ದೇವತೆ. ಶಾಸನದೇವಿ—ತೀರ್ಥಂಕರನ ಯಕ್ಷಿ. ಅಕ್ಷಯ—ಶಾಶ್ವತ.

೭. ಗಂಗಮಂಡಲೇಶ್ವರ—ಗಂಗದೊರೆ, ಎರಡನೆಯ ಮಾರಸಿಂಹ. ಮಕುಟ—ಕಿರೀಟ. ನೆಗೞ್ತೆ—ಪ್ರಸಿದ್ಧಿ. ಅಜಿತಸೇನಮುನಿ—ಜೈನಮುನಿ, ರನ್ನನ ಗುರು.

೮. ಸಮ್ಯಗ್ದರ್ಶನ — ರತ್ನತ್ರಯಗಳಲ್ಲಿ ಒಂದು ; ಉಳಿದವು ಸಮ್ಯಕ್‌ಜ್ಞಾನ, ಸಮ್ಯಕ್ಚಾರಿತ್ರ.

೯. ಅಱಿವು—ಜ್ಞಾನ. ನೆಗೞ್ತೆ—ಆಚರಣೆ. ಹೇತು—ಕಾರಣ. ಅಂತುಟಲ್ತು—ಹಾಗಲ್ಲ. ಮಿಕ್ಕಱಿವು—ಶ್ರೇಷ್ಠ ಸಮ್ಯಕ್‌ಜ್ಞಾನ. ಮಿಕ್ಕ ನಂಬುಗೆ—ಅತಿಶಯವಾದ ದರ್ಶನ. ಮಿಕ್ಕ ನೆಗೞ್ತೆ—ಶ್ರೇಷ್ಠ ಚಾರಿತ್ರ. ಎಱಗು—ನಮಸ್ಕರಿಸು. ಅಪವರ್ಗಮಾರ್ಗ—ಮೋಕ್ಷಮಾರ್ಗ.

೧೦. ಅಜೇಯ—ಜಯಿಸಲಸಾಧ್ಯವಾದ. ಕರ್ಮಾರಿ—ಶತ್ರುಗಳಂತೆ ಜೀವನಿಗೆ ನಾನಾ ದುಃಖಗಳನ್ನುಂಟುಮಾಡುವ ಜ್ಞಾನಾವರಣಾದಿ ಕರ್ಮಗಳು. ಅಗಿಯೆ—ಹೆದರಲು. ಸಿಂಹಸೇನ—ಅಜಿತತೀರ್ಥಂಕರನಿಗೆ ಸಿಂಹಸೇನ ಮೊದಲಾದ ತೊಂಬತ್ತು ಮಂದಿ ಗಣಧರರಿದ್ದರು (ಉತ್ತರಪುರಾಣ).

೧೧. ಅಕ್ಕುಂ—ಆಗುತ್ತದೆ. ಶ್ರುತ—ಶಾಸ್ತ್ರ. ಸುಗತಿ—ಮೋಕ್ಷ. ಉಭಯಭವ—ಇಹಪರ.

೧೨. ಸಾಮಾನ್ಯ ಅಂಗನೆಗಿಂತ ಕಾವ್ಯಾಂಗನೆ ಮಿಗಿಲು ಎಂಬುದು ಇಲ್ಲಿಯ ಅರ್ಥ. ಸಾಮಾನ್ಯಸ್ತ್ರೀ ಅಲಂಕಾರಭೂಷಿತೆಯಾದರೂ ಕಾವ್ಯದೇವಿ ಮತ್ತೂ ಹೆಚ್ಚು ಶೋಭಾಯಮಾನಳು. ಇವಳು ಮೂವತ್ತಾರು ಅಲಂಕಾರಗಳಿಂದಲೂ ನವರಸಗಳಿಂದಲೂ ಕೂಡಿದವಳು. ಇಂತಹ ವಾಗ್ದೇವಿಯ ಸಾನ್ನಿಧ್ಯವನ್ನು ಕವಿ ಬೇಡುತ್ತಾನೆ. ಅಸ್ಮನ್ಮುಖ—ನನ್ನ ಮುಖ.

೧೪. ಅಜಿತತೀರ್ಥಂಕರನ ಯಕ್ಷಿಯಾದ ರೋಹಿಣಿಯನ್ನು ಆಶ್ರಯದಾತೆ ಅತ್ತಿಮಬ್ಬೆಗೆ ಹೋಲಿಸಲಾಗಿದೆ. ಭೃಂಗಿ—ದುಂಬಿ. ಅಂಕದ—ಪ್ರಸಿದ್ಧಳಾದ.

೧೫. ಆಯತವಕ್ಷ—ವಿಶಾಲವಾದ ಎದೆ. ಅಂಬುರುಹಪತ್ರಾಕ್ಷ—ತಾವರೆಯ ದಳದಂತೆ ಕಣ್ಣುಳ್ಳವನು. ಅಂಘ್ರಿ—ಪಾದ. ಪಂಕರುಹ—ತಾವರೆ. ಕೃತ್—ರಚಿತವಾದ. ಸಿಂಹವಿಷ್ಟರ—ಸಿಂಹಪೀಠ (ಸಮವಸರಣದ)

೧೬. ಪಸರಿಸು-ಹಬ್ಬು. ಕುತೀರ್ಥಧ್ವಾಂತ—ಕೆಟ್ಟಮತವೆಂಬ ಕತ್ತಲೆ. ತೂಳ್ದಿ—ತೊಲಗಿಸಿ. ಪೆಂಪು—ಹಿರಿಮೆ, ಶ್ರೇಷ್ಠ. ಅರ್ಕ—ಸೂರ್ಯ. ಉದ್ಯೋತಿಸು—ಪ್ರಕಾಶಿಸು.

೧೭. ದುರಿತ—ಪಾಪ. ನೀಡುಂ—ವಿಶೇಷವಾಗಿ.

೧೮. ವಿಷಯವಿಷ—ಅರಿಷಡ್ವರ್ಗಗಳು. ಅನಂಗ—ಮನ್ಮಥ. ಅಪವೃಜಿನ—ಪಾಪದಿಂದ ಮುಕ್ತನಾದ. ಅಪಾಕೃತ—ಹೊರದೂಡಿದ.

೧೯. ಪಯೋರುಹ—ಕಮಲ. ರಜಸ್—ಧೂಳು. ಸಮಾಸಂಗಿ—ಆಸಕ್ತ, ಸೇರಿರುವ. ನಾಡೆ—ವಿಶೇಷವಾಗಿ. ಸುವಿನೇಯಜನ—ಜಿನಭಕ್ತರು.

೨೦. ದಿಗಿಭ—ದಿಗ್ಗಜ. ಅಮರಕರಿ—ಐರಾವತ. ಅಗ್ಗಳ—ಶ್ರೇಷ್ಠ. ಆಹವಮಲ್ಲ—ಇಮ್ಮಡಿ ತೈಲಪ. ವಿಷಯ—ದೇಶ.

೨೧. ತುಂಗ—ಶ್ರೇಷ್ಠ, ಎತ್ತರ. ಮತಂಗಜ—ಆನೆ. ನಾಳಿಕೇರ—ತೆಂಗು. ಅದ್ರಿ—ಬೆಟ್ಟ. ಶಾಳಿವನ-ಬತ್ತದ ಗದ್ದೆ. ಚಳತ್—ಚಲಿಸುವ. ಭೃಂಗಕುಳ—ದುಂಬಿಗಳ ಸಮೂಹ. ಆಕುಳೀಕೃತ—ಅಸ್ತವ್ಯಸ್ತವಾದ, ವ್ಯಾಪ್ತವಾದ. ಸರೋರುಹಷಂಡ—ಕಮಲದ ಸಮೂಹ. ಇಕ್ಷು—ಕಬ್ಬು. ಪುಷ್ಪವಾಟ—ಹೂದೋಟ.

೨೧ವ. ಅಜ—ಧರ್ಮ. ಗೋಸಾಸ—ಗೋಗ್ರಹಣದಲ್ಲಿ ಹಸುಗಳನ್ನು ಬಿಡಿಸಿಕೊಳ್ಳುವಲ್ಲಿ ತೋರುವ ಸಾಹಸ. ಕನ್ನೆಗೋಸಾಸ—ಕನ್ಯಾಪಹರಣದಲ್ಲಿ ತೋರುವ ಸಾಹಸ.

೨೨. ಸಂಹತಿ—ಗುಂಪು, ಸಮೂಹ. ಅವಗ್ರಹ—ನಾಲ್ಕು ಬಗೆಯ ಪ್ರತ್ಯಕ್ಷ ಪ್ರಮಾಣಗಳಿಂದ ಬರುವ ಜ್ಞಾನಗಳಲ್ಲಿ ಒಂದು. ದೇವಮಾತೃಕ—ಮಳೆಯನೀರಿನಿಂದ ಬೆಳೆ ಬೆಳೆಯುವ ಪ್ರದೇಶ. ಅಕೃಷ್ಟಪಚ್ಯ—ಬೇಸಾಯಮಾಡದೆ ಬೆಳೆಯನ್ನು ಕೊಡುವ.

೨೪. ಜಳಧಿತರಂಗತಾಡಿತ—ಸಮುದ್ರದ ಅಲೆಗಳಿಂದ ಹೊಡೆಯಲ್ಪಟ್ಟ. ನೆಗಟ್ದಿತ್ತು—ಸಿದ್ಧವಾಗಿತ್ತು. ಜಿತ—ಗೆದ್ದ. ಅಗ್ಗಳಿಕೆ—ಪ್ರಸಿದ್ಧ. ಪೆಂಪು—ಹಿರಿಮೆ.

೨೫. ಅರ್ಥಿ—ಬೇಡುವವ. ಘನ—ಮೋಡ. ಅಧಿಕರಿಪೊಂ—ತಿಳಿದವನು, ಅವಲಂಬಿಸಿದವನು. ದಿಗ್ನಾಗ—ದಿಗ್ಗಜ. ಅಕ್ಷೂಣ—ಕಡಮೆಯಿಲ್ಲದ.

೨೬. ಸೂನು—ಮಗ. ದಲ್—ಅಲ್ಲವೆ. ಅನೂನ—ಕುಂದಿಲ್ಲದ.

೨೭. ಅರ್ತಿ—ಸಮರ್ಥವಾಗಿ. ಮಾನವಾನೀಕ—ಮಾನವಸಮೂಹ.

೨೯. ಗೆಂಟು—ದೂರ. ಮತ—ಅಭಿಪ್ರಾಯ.

೩೦. ಮೊದಲ ಸಾಲಿನ 'ಸಿನಕ್ಕುಂ' ಬದಲಾಗಿ 'ದಿನಕ್ಕುಂ' ಎಂದಿರಬೇಕೆಂದು ತೋರುತ್ತದೆ. ಎಂದರೆ ಇದು ಒಂದೇ ದಿನದಲ್ಲಿ ಪಡೆದ ಜಯ ಎಂದಾಗುತ್ತದೆ. ಗುಡಿ—ಧ್ವಜ.

೩೧. ಇಱಿತವೆಡೆ—ಯುದ್ಧದಲ್ಲಿ.

೩೨. ಅನ್ನ—ಅಂಥ. ಅಜ—ಬ್ರಹ್ಮ.

೩೩. ಇಱಾಪು—ಕಡಮೆಮಾತ್ತು, ಅವಗಣಿಸು.

೩೪. ತಮ್ಮುತಿರ್ವರು—ತಾವಿಬ್ಬರು. ಉರ್ವಿ—ಭೂಮಿ. ಪರೆಯಿಸು—ಹರಡು. ಸಲೆ—ಹೆಚ್ಚಾಗಿ.

೩೫. ಮಾಂತನ—ಹಿರಿಮೆ. ಅಳವು—ಶೌರ್ಯ. ಅಜನ್—ಸಮರ್ಥನಲ್ಲ. ಮಂಡನ—ಅಲಂಕಾರ.

೩೬. ಸೆರಗುಪಾರದೆ—ಆಶ್ರಯವನ್ನು ನಿರೀಕ್ಷಿಸದೆ. ಬಾಳ್—ಕತ್ತಿ. ಸಾರ್ಚು—ಸಮೀಪಿಸು. ಪಡಲ್ವಡಿಸು—ನಾಶಮಾಡು.

೩೭. ಪತಿ—ಒಡೆಯ. ಭಂಡಾರ—ಭಾಂಡಾರ—ಉಗ್ರಾಣ. ಮೊನೆ—ಯುದ್ಧ.

೩೭ವ. ಪತಿ—ಒಡೆಯ, ರಾಜ. ವೈರೋಚನ—ಚಂದ್ರ, ಪ್ರಕಾಶಿಸುವ.

೩೮ವ. ಸಂವಾಸ—ಸಹವಾಸ. ಚತುರುಪಧಾ—1. ಧರ್ಮ ಅರ್ಥ ಕಾಮ ಭಯ. 2. ದೇಶ ಜನ್ಮ ಆಚಾರ ಕುಲ. ರತ್ನತ್ರಯ—ಸಮ್ಯಕ್‌ಜ್ಞಾನ, ಸಮ್ಯಕ್‌ದರ್ಶನ, ಸಮ್ಯಕ್ಚಾರಿತ್ರ.

೩೯. ಗೋನರ—ಗೋವಿಂದರ (?). ಪೆಣದಿಱ—ಒಬ್ಬರಿಗೊಬ್ಬರು ತೊಡರಿ ಇರಿಯುವುದು. ಪರೆ—ಹರಡು. ನೆಗಱ್ಚು—ಪ್ರಸಿದ್ಧಿಪಡೆ.

೪೨. ತಲೆಸಂದು—ವಿಶ್ವಸಿ. ಕಡಿತಲೆ—ಕತ್ತಿ. ಪೊಣರ್—ಹೋರಾಡು.

೪೩. ಚಮೂಪತಿ—ದಳಪತಿ. ಅದಟ—ಪರಾಕ್ರಮಿ. ಅಣ—ಪದಾತಿಸೈನ್ಯ. ದುರಂಧರ—ವೀರ. ಆಜಿ—ಯುದ್ಧ. ಅಂಗರಕ್ಕಸ—'ಅಂಗರಕ್ಕರ' ಇರಬಹುದು; ಅಂಗರಕ್ಕ—ಅಂಗರಕ್ಷಕ, ಮೈಗಾಲಿನವನು.

೪೪. ಕಳಕುಳ—ಚೆಲ್ಲಾಪಿಲ್ಲಿ. ಪಂಚಲ—ಪಾಂಚಾಲ ಎಂಬ ಗಂಗದೊರೆ. ದಂತಿಘಟಾವಳಿ—ಆನೆಯ ಸಮೂಹ. ಮಕ್ಕಳ ಕರುವಾಗರ—?

೪೫. ಬಲ್ಲಪ—ವಲ್ಲಭ (ತೈಲಪ). ಮಲ್ಲಮ—ಈ ಚಾರಿತ್ರಿಕ ವ್ಯಕ್ತಿ ಯಾರು ಎಂಬುದನ್ನು ಗುರುತಿಸಬೇಕಾಗಿದೆ.

೪೬. ಅಳಿಪು—ಆಸೆ. ದೊರೆ—ಸಮಾನ.

೪೭. ಬೆಸಕೇಳ್—ಅಪ್ಪಣೆ ಪಡೆದು. ಅಣ್ಮ—ಸಾಹಸದಿಂದ, ಧೈರ್ಯದಿಂದ. ಪೆಂಪು—ಹಿರಿಮೆ.

೪೭ವ. ಗುಂಡು—ಗುಂಪು, ಸಮೂಹ.

೪೮. ಸುಭಟತ್ರಿಣೇತ್ರ—ಮುಕ್ಕಣ್ಣನಂತಹ ವೀರ.

೪೮ವ. ಗೀರ್ವಾಣಲೋಕ—ದೇವಲೋಕ.

೪೯. ದಹನಾರ್ಚಿ—ಅಗ್ನಿಯ ಜ್ವಾಲೆ. ದಿವ್ಯೋದಿತ—ಸ್ವರ್ಗದಲ್ಲಿ ಹುಟ್ಟಿದ. ತನುವಂತನುಮಾಡುತಿರ್ಪೆನ್—ಶರೀರವನ್ನು ಕೃಶಮಾಡುತ್ತಿದ್ದೇನೆ. ಅತನು—ಮನ್ಮಥ.

೫೦. ವಿಗಮ—ಅಗಲಿಕೆ. ಅಸಿಧಾರಾವ್ರತ—ಕತ್ತಿಯ ಅಲಗಿನ ಮೇಲೆ ಹೆಜ್ಜೆಯಿಟ್ಟು ನಡೆಯುವಂತೆ ಆಚರಿಸುವ ಕಷ್ಟಕರವಾದ ವ್ರತ. ಮಾಣ್ಬಳೆ—ಮಾಡುವಳೆ. ಮಾಣಳ್—ಮಾಡುವುದಿಲ್ಲ.

೫೧. ಒಡಮೆ—ಒಡವೆ, ಆಸ್ತಿ. ಅನವರತ—ಯಾವಾಗಲೂ. ತವಿಸು—ಕ್ಷೀಣಗೊಳಿಸು, ಕುಗ್ಗಿಸು. ಜಸ—ಯಶಸ್ಸು.

೫೨. ಅಮಳ—ಶ್ರೇಷ್ಠ, ಪರಿಶುದ್ಧ.

೫೩. ಶ್ರಾವಕಧರ್ಮ—ಜೈನ ಗೃಹಸ್ಥ ಧರ್ಮ. ದೊರೆ—ಸಮಾನ. ರೇವತೀ ಶ್ರಾವಕಿ—ಶ್ರಾವಸ್ತಿನಗರದ ಸಮ್ಯಕ್ತ್ವ ಶೋಭಿತೆಯಾದ ಒಬ್ಬ ಶ್ರಾವಕಿ. ಸುಲೋಚನೆ—ಕಾಶೀರಾಜ ಅಕಂಪನನ ಮಗಳು. ಜಯಸೇನನನ್ನು ವರಿಸಿದ ಈಕೆ ಕೊನೆಯಲ್ಲಿ ದೀಕ್ಷೆಯನ್ನು ತೆಗೆದುಕೊಂಡು ಮೋಕ್ಷವನ್ನು ಪಡೆದಳು.

೫೫. ಜಿನಶಾಸನ—ಜೈನಸಿದ್ಧಾಂತ ಧರ್ಮ.

೫೭. ಆಸನ್ನಭವ್ಯೆ—ಜೈನತತ್ತ್ವೋಪದೇಶದಿಂದ ಮನಃಪರಿಪಾಕವನ್ನು ಹೊಂದಿದವಳು. ಉದಾಸಿ—ಹೊಳೆಯುವ. ಅರ್ತಿ—ಪ್ರೀತಿ.

೫೮. ಸ್ಫುರಿತ—ಹೊಳೆಯುವ. ಉದ್ಧೃತ—ಎತ್ತಿಹಿಡಿದ. ವಿತಾನ—ಮೇಲ್ಕಟ್ಟು. ಭಾಸುರ—ಹೊಳೆಯುವ, ಸೊಗಸಾದ. ಧ್ವಜೋತ್ಕರ—ಧ್ವಜಸಮೂಹ.

೬೦. ಉನ್ನತ—ಶ್ರೇಷ್ಠ. ಕುಕ್ಕುಟೇಶ್ವರ—ಗೊಮ್ಮಟ. ಅನ್ನೆಗಂ—ಅಲ್ಲಿಯವರೆಗೆ. ಆಸನ್ನ—ಹತ್ತಿರ.

೬೧. ಕಣಿ—ಗಣಿ, ಆಶ್ರಯ. ಅವಸರ್ಪಿಣಿ—ಮನುಷ್ಯರ ಆಯುಸ್ಸು ಸುಖ ಮುಂತಾದುವು ಕುಂದುವ ಕಾಲ, ಅಪಕರ್ಷ, ಕೆಟ್ಟ ಕಾಲ. ಉತ್ಸರ್ಪಿಣಿ—ಒಳ್ಳೆಯ ಕಾಲ.

೬೨. ಮಹಿ—ಭೂಮಿ. ಅಗ್ಗಳ—ಶ್ರೇಷ್ಠ. ಅಗ್ರಣಿ—ಮುಂದಾಳು. ಸುರಭೂರುಹ—ಕಲ್ಪವೃಕ್ಷ. ತಾಮರಸೋದ್ಭವ—ಕಮಲದಲ್ಲಿ ಹುಟ್ಟಿದವನು, ಬ್ರಹ್ಮ. ಜಲಜಜ—ಕಮಲದಲ್ಲಿ ಹುಟ್ಟಿದವ, ಬ್ರಹ್ಮ.

೬೩. ಸವತ್ಸ—ಕರುಸಹಿತವಾದ.

೬೪. ಪದೆ—ಪ್ರೀತಿ. ಎಱಿ—ಬೇಡು. ಅರ್ಥಿಜನ—ಬೇಡುವವರು.

೬೫. ಕಸವರ—ಚಿನ್ನ, ಸಂಪತ್ತು. ಅಂಕಕಾರ್ತಿ—ವೀರರಮಣಿ. ಮೊನೆ—ಯುದ್ಧ.

೬೬. ಸಂದ—ಪ್ರಸಿದ್ಧ. ತಗುಳ್—ಮೆಚ್ಚು.

೬೭. ಸಂದೆಯ—ಸಂದೇಹ. ಒಡಮೆ—ಒಡವೆ.

೬೮. ನೆಗಱ್ತೆ—ಪ್ರಸಿದ್ಧಿ. ಭಾಜನ—ಪಾತ್ರ.

೬೯. ಅಜಿರ—ಶರೀರ. ವಿಭ್ರಾಜಿತೆ—ಹೊಳೆಯುವವಳು, ಬೆಳಗುವವಳು.

೭೦. ಸದ್ವೃತ್ತೆ—ಒಳ್ಳೆಯ ಚಾರಿತ್ರವುಳ್ಳವಳು. ಪಿಕ್ಕು—ಹಿಸಿ, ಪರಿಶೀಲಿಸು.

೭೧. ಕುಭೃತ್—ಪರ್ವತ.

೭೪. ಖಳಕಲಂಕ—ಕೆಟ್ಟ ಕಳಂಕ. ಪೊರ್ದು—ಹೊಂದು, ಸೇರು.

೭೫. ಅಳುರ್—ವ್ಯಾಪಿಸು. ವಿಷಾಹಿ—ಸರ್ಪ. ನೋಂತ—ವ್ರತವನ್ನು ಕೈಗೊಂಡ.

೮೧. ಮಂಡನ—ಅಲಂಕಾರ.

೮೨. ಒಖ್ಖಾಣಿಪ—ವ್ಯಾಖ್ಯಾನಿಸುವ. ಕವಣಿಪ—ಕೂಡಿಸುವ. ಕಮ್ಮೈಸು—ಶೋಭೆಗೊಳಿಸು, ಪರಿಷ್ಕಾರಗೊಳಿಸು.

೮೫. ಕಂಠಿಕೆ—ಕಂಠಹಾರ. ಶ್ವೇತಾತಪತ್ರ—ಬೆಳ್ಗೊಡೆ. ಚಮರೀಜ—ಚಾಮರ. ಕವಿ ತನ್ನನ್ನು ರಾಜನಿಗೆ ಹೋಲಿಸಿಕೊಂಡು ತನ್ನ ಕವಿಚಕ್ರವರ್ತಿ ಬಿರುದು ಎಷ್ಟರಮಟ್ಟಿಗೆ ತನಗೊಪ್ಪುತ್ತದೆಂಬುದನ್ನು ರೂಪಕಾಲಂಕಾರದ ಮೂಲಕ ವ್ಯಕ್ತಗೊಳಿಸಿದ್ದಾನೆ.

೮೭. [illegible] ಸಮೂಹ.

೮೮. ದರವುರ—ಸಾಮಾನ್ಯ, ತುಚ್ಛ. ಅಂಟಸುಂಟ—ನಿಂದಾವಾಚಕ ಶಬ್ದ. ಅರೆವೊರಕ—ಅರ್ಧ ಪಕ್ವವಾದುದು. ತಟತಟ—ಅಸಂಬದ್ಧ.

೯೧. ಬೈತಿಪು—ಹೂಳಿಡು, ಮುಚ್ಚಿಡು.

೯೨. ಎಳವೆಱಕೆ—ಬಾಲಚಂದ್ರ. ಮಾಂಗಾಯ್—ಒಂದು ಬಗೆಯ ಮಾವಿನಕಾಯಿ ಆಕಾರದ ಆಭರಣ.

೯೩. . ಕಿಂ ಕೇನ ಸಂಗತಂ—ಯಾವುದು ಯಾವುದಕ್ಕೆ ಸಂಬಂಧ.

೯೪. ಮೊಗ್ಗಾಯ್ತೆ—ಸಾಧ್ಯವಾಯಿತೆ, ಶಕ್ಯವಾಯಿತೆ ?

೯೫. ಸುರಲೋಕಾವತರೋತ್ಸವ — ಗರ್ಭಾವತರಣಕಲ್ಯಾಣ. ಪರಿಕೃತ — ಸಂಭ್ರಮ. ಪ್ರವಿಮಲ—ಪರಿಶುದ್ಧ. ಇದರಲ್ಲಿ ಪಂಚಕಲ್ಯಾಣಗಳನ್ನು ಹೇಳಲಾಗಿದೆ.

೯೬. ವ್ರಾತ—ಸಮೂಹ. ಮನೋಜಾತ—ಮನ್ಮಥ. ಜಿತ—ಗೆದ್ದವ.

## ದ್ವಿತೀಯಾಶ್ವಾಸಂ

೧. ರುಂದ್ರ—ವಿಸ್ತಾರ. ಅಪಗತ—ಹೋಗಲಾಡಿಸಿದ. ದುರಿತ—ಪಾಪ.

೨ವ. ಬಧಿರ—ಕಿವುಡು. ಉಚ್ಚಲಿತ—ಮೇಲಕ್ಕೆ ಎದ್ದ. ಉಪಲಕ್ಷಿತ—ಗೋಚರಿಸಿದ.

೩. ವನಧಿ—ಸಮುದ್ರ. ಪ್ರಭಂಜನ—ಬಿರುಗಾಳಿ. ನಿರಾಳಂಬ—ಆಶ್ರಯವಿಲ್ಲದುದು. ರಸೆ—ಭೂಮಿ. ದೇವನಗ—ಮಂದರಪರ್ವತ.

೪. ಪರಿಭ್ರಮಣ—ಸುತ್ತುವಿಕೆ.

೫. ನೀರಾಜನ—ದೀಪಾರತಿ. ಅಹೋರಾತ್ರಿ—ಹಗಲೂ ರಾತ್ರಿ.

೬. ನಾಭೇಯ—ನಾಭಿರಾಜನ ಮಗ ಆದಿನಾಥ.

೭. ಪ್ರಸೂತ—ಹುಟ್ಟಿದ. ಕ್ಷ್ಮಾಪಾಲ—ರಾಜ. ಅಧಿಷ್ಠಾನ—ವಾಸಸ್ಥಾನ.

೭ವ. ಚೂತ—ಮಾವಿನಮರ. ಮಿಸುಪ—ಹೊಳೆಯುವ. ನಾಗ—ಸುರಗಿ. ನಕ್ತಮಾಲ—ಒಂದು ಬಗೆಯ ಮರ, ಹುಲಿಗಿಲು. ತಮಾಲ—ಹೊಂಗೆ. ಪೂಗ—ಅಡಿಕೆ. ಸೆಳ್ಳೆಗೊಂಬು—ಮರದ ಸಣ್ಣ ಕೊನೆ. ಶುಕ—ಗಿಳಿ. ಸೋಗೆ—ನವಿಲು. ಪುಱಲು—ಮರಗಳ ತೋಪು. ಕಡಂಗಿ—ಉತ್ಸಾಹಿಸಿ. ಕಾವಣ—ಚಪ್ಪರ. ಉರ್ಚು—ಚುಚ್ಚು ಮೃಣಾಳ—ತಾವರೆ. ವಿದಳ—ಅರಳಿದ. ತಾರಹಾರ—ಮುತ್ತಿನಹಾರ. ತಾಳವೃಂತ—ಬೀಸಣಿಗೆ. ಅದವಳಲ್—ಬೇಗುದಿ.

೯. ಹರಿತಾಳ—ಹಸಿರುಬಣ್ಣ. ನಖ—ಉಗುರು.

೧೦. ಅಡೆವೊತ್ತು—ಸುತ್ತಲೂ ಹೊತ್ತಿಕೊ. ತಳಿರ್ವಾಸು—ಚಿಗುರಿನಹಾಸು. ಪುಟಪಾಕ—ಔಷಧಿ ತಯಾರಿಸುವ ಕ್ರಮ.

೧೧. ಕಣಿಶ—ತೆನೆ. ಶಾಲಿವನ—ಬತ್ತದ ಗದ್ದೆ.

೧೨. ಚಾಪ—ಬಿಲ್ಲು. ಅಂಗೋದ್ಭವ—ಮನ್ಮಥ. ಪುಂಡ್ರೇಕ್ಷುವಾಟ—ಕಬ್ಬಿನ ತೋಟ.

೧೩. ತೊಂಗಲು—ಗೊಂಚಲು. ಸೋರ್ವ—ನೇತಾಡುವ, ತೂಗಾಡುವ. ಸಹಕಾರ—ಮಾವು. ಪುಟ್ಟು (?)—ಪಾಠಾಂತರ ಘಟ್ಟ ಎಂದಿದೆ. ಇದಕ್ಕೆ ಸುಗಂಧದ್ರವ್ಯದ ಕರಣಿ ಎಂಬ ಅರ್ಥವಿದೆ.

೧೪. ಜೊಂಪ—ಜೊಂಪೆ, ಗೊಂಚಲು. ಜಡಿಪು—ದನಿ, ಕೂಗು.

೧೫. ಅಚ್ಚುನನೆ—ಒಳ್ಳೆಯ ಹೂವು, ಮೊಗ್ಗು. ಭೂಷಾವಿಧೇಯ—ಅಲಂಕರಿಸಿರುವುದು.

೧೬. ಖಾತ—ಕಂದಕ. ಅಟ್ಟಳೆ—ಕೊತ್ತಳ, ಬುರುಜು. ಉದ್ಯೋತಿಸು—ಪ್ರಕಾಶಿಸು, ವಿಜೃಂಭಿಸು.

೧೭. ಕಳಾಪ—ಸಮೂಹ. ಬಲಭಿತ್—ಇಂದ್ರ. ಕಳಾಪಿ—ಗಂಡುನವಿಲು.

೧೮. ಗವಾಕ್ಷಜಾಳ—ಬೆಳಕುಕಿಂಡಿ. ಧೂಮಯಷ್ಟಿ—ಹೊಗೆಯ ಸರಳು.

೧೯. ಶೋಣ—ಕೆಂಪು. ದೀಪ್ತಿ—ಕಿರಣ. ಕೋಣ್ಗೋಣ್—ಮೂಲೆಮೂಲೆ. ಪಜ್ಜಳಿಸು—ಪ್ರಕಾಶಿಸು. ನೇರಾಣಿ—ಕುಸುರಿಗೆಲಸ. ಪೊಂಬೆಸ—ಚಿನ್ನದ ಕೆಲಸ. ಸಮೆ—ಮಾಡು.

೨೦. ರೂವಾರ—ಶಿಲ್ಪ. ಕಲುಮಾಡ—ಉಪ್ಪರಿಗೆ.

೨೧. ಅಚ್ಚರಸಿ—ಅಪ್ಸರೆ. ಸಂಕ್ರಂದನ—ಇಂದ್ರ. ಪುರುಹೂತ—ಇಂದ್ರ. ಆಹೂತಿ—ಆಹ್ವಾನ. ಕೇತುಹಸ್ತ—ಧ್ವಜಸ್ತಂಭ.

೨೨. ಪವಣ್—ಅಳತೆ, ಪ್ರಮಾಣ. ನಿಕೇತನ—ಮನೆ.

೨೫. ವಿಲೋಚನ—ಕಣ್ಣು. ಲಲಾಟ—ಹಣೆ. ಕಟಿ—ನಡು. ಅಳಕ—ಮುಂಗುರುಳು. ಅಸಿತ—ಬಿಳಿಯ. ಉತ್ಪಲ—ಕನ್ನೈದಿಲೆ.

೨೬. ವಿಳಸತ್—ಹೊಳೆಯುವ. ಅಧರ—ತುಟಿ. ಪಲ್ಲವ—ಚಿಗುರು.

೨೭. ಸೆಳ್ಳುಗುರ್—ಹೆಂಗಸರ ಚೂಪಾದ ಉಗುರು.

೨೯. ಕಮಳಾಸ್ಯೆ—ಕಮಲದಂತಹ ಮುಖವುಳ್ಳವಳು.

೩೦. ಅರ್ಣವ—ಸಮುದ್ರ. ದ್ವಿಪ—ಆನೆ. ಕಾಂಚೀದಾಮ—ಕಟಿಸೂತ್ರ, ಡಾಬು.

೩೧. ವಿದ್ಯುಲ್ಲತೆ—ಮಿಂಚಿನಬಳ್ಳಿ. ಪಯೋಧರ—ಸ್ತನ. ಶುನಾಸೀರ—ಇಂದ್ರ.

೩೬. ಪಾಣಿ—ಅಂಗೈ. ಸಂಗಳಿಸು—ಕೂಡು, ಸೇರು. ಮಿಸುಪ—ಹೊಳೆಯುವ. ಚಯ—ಗುಂಪು. ದಶನ—ಹಲ್ಲು.

೩೭. ಇಕ್ಷುಚಾಪ—ಕಬ್ಬಿನಬಿಲ್ಲು. ದಾಹೋತ್ತರ—ಪುಟವಿಟ್ಟ.

೪೦. ಪದ್ಮಷಂಡ—ತಾವರೆಕೊಳ. ಉದ್ಭಾಸಿ—ಹೊಳೆಯುವ. ಲೋಲೇಕ್ಷಣ—ಚಂಚಲ ದೃಷ್ಟಿ. ಭ್ರೂ—ಹುಬ್ಬು. ಫುಲ್ಲ—ಅರಳಿದ.

೪೧. ಆಲೋಲ—ಅಲುಗಾಡುವ. ಮಂಜೀರಕ—ಕಾಲಂದುಗೆ. ರಶನೆ—ಕನ್ನೆಯ ಒಡ್ಯಾಣ.

ಕಿಂಕಿಣಿ—ಕಿರುಗೆಜ್ಜೆ. ತೂರ್ಯತ್ರಿಕ—ತೂರ್ಯತ್ರಯ—ನೃತ್ಯ ಗೀತ ವಾದ್ಯ ಮೂರರ ಮೇಳ. ಜವನಿಕೆ—ತೆರೆ.

೪೨. ದರಹಾಸ—ಮುಗುಳುನಗೆ. ಮಜ್ಜನ—ಸ್ನಾನ. ಆವಹ—ಉಂಟುಮಾಡುವ. ವಕ್ತ್ರ—ಮುಖ. ಅಪಾಂಗ—ಕಡೆಗಣ್ಣು. ವಿದ್ರುಮಾಧರ—ಹವಳದ ತುಟಿ. ಅಲಕ—ಮುಂಗುರುಳು.

೪೩. ಕಚ—ತಲೆಗೂದಲು. ಅಸಿ—ತೆಳ್ಳನೆಯ.

೪೪. ಅಲರ್—ಹೂವು. ಉಪಲ—ಶಿಲೆ. ದೂರ್ವಾಂಕುರ—ಗರಿಕೆಯ ಚಿಗುರು. ಅಭ—ಹೊಳೆ.

೪೫. ಋಜ್ವಾಗತ—ನೇರವಾದ ಮಾರ್ಗ. ಸಾಚಿ—(?)

೪೬. ದೋರ್ದರ್ಪ—ತೋಳಶಕ್ತಿ. ಪುಷ್ಪೇಷು—ಮನ್ಮಥ. ಅದಟು—ಪರಾಕ್ರಮ.

೪೮. ನಾಗ—ಆನೆ, ಸರ್ಪ. ವಾಹ—ವಾಹನ. ವಾರಿವಾಹ—ಮೋಡ. ಗೆಂಟು—ದೂರ ಪತ್ತಿ—ಕಾಲ್ದಳ.

೪೯. ಅದಿರ್ಪು—ಬೆದರಿಸು.

೪೯ವ. ವಿಜಿಗೀಷುವೃತ್ತ—ವಿಜಯಾಕಾಂಕ್ಷಿ. ಹೇತುಭೂತ—ಕಾರಣಕರ್ತ. ಪಳನಾಳ—? ಕಪೋಲ—ಕೆನ್ನೆ. ಪಳಿತ—ನರೆಗೂದಲು.

೫೦. ಆರಯೆ—ವಿಚಾರಿಸೆ. ಮೂತ್ರಪುರೀಷ—ಮಲಮೂತ್ರ.

೫೧. ಪುಟ್ಟಗೆ—ವಸ್ತ್ರ, ಉಡುಪು. ಎದವೀಳೆ—ಒಂದು ಸುಗಂಧದ್ರವ್ಯ. ಸಾಂದು—ಸಾದು. ಪೂಸು—ಲೇಪಿಸು.

೫೨. ಮೇಣ್—ಅಥವಾ. ಪಿಷ್ಟ—ಹಿಟ್ಟು. ನಿಟ್ಟೆ—ನಿಷ್ಟೆ. ಕಮನೀಯ—ಸುಂದರ.

೫೫ ಒಡಮೆ—ಆಸ್ತಿ. ಅಪವರ್ಗ—ಮೋಕ್ಷ.

೫೬. ಕೇದಾರ—ಭೂಮಿ. ದಾರ—ಪತ್ನಿ. ದಾರಕ—ಮಗ.

೫೭. ಮಾ—ಬೇಡ. ಅಮ್ಮು—ಸಮರ್ಥ. ಆರ್ಮ—ಆಶ್ರಯಸ್ಥಾನ, ನೆಲೆ.

೫೯. ಕೞಿ—ಹರಿ, ಸಾಗು. ಜರೆ—ಮುಪ್ಪು.

೬೧. ಕುಕ್ಕುಟಿಗುದಿ—ತಳಮಳಿಸು. ಕಕ್ಕಳಗೞಲ್—ಕಳಚಿಬೀಳು, ಶಿಥಿಲವಾಗು.

೬೫. ಉಪಾದೇಯ—ಸ್ವೀಕಾರಾರ್ಹ.

೬೬. ತಿರ್ಯಕ್—ಪ್ರಾಣಿವರ್ಗ. ಎನಸುಂ—ಸ್ವಲ್ಪವೂ.

೬೮. ಕುಲಟೆ—ವೇಶ್ಯೆ. ಗರ್ತ—ಸುಳಿ. ಹೇತು—ಕಾರಣ.

೬೯. ಜನ—ಯಮ. ನೀರ್ತೆಗೆ—ಕಾಂತಿಗುಂದು.

೭೨. ಎಱಕಿಯ—ಒಡೆಯ. ತುಱುಗು—ಮುಚ್ಚು.

೭೪. ಉಚ್ಛಿಷ್ಟ—ಎಂಜಲು. ನಿಯತ್ಯಂಗನೆ—ಮೃತ್ಯುದೇವತೆ.

೭೫. ಪುದುವಾೞ್—ಸಹಬಾಳುವೆ.

೭೮. ಮಾನಸವಾಟಿಏ್—ಮನುಷ್ಯಜೀವನ. ಅರ್ತಿ—ಪ್ರೀತಿ.

೭೯. ಬಳ—ಬಲ, ಶಕ್ತಿ. ವಪು—ಶರೀರ. ಅವಚಱು—ಜಿಗುಪ್ಸೆ.

೮೨. ಅಧಿ—ಮಾನಸಿಕವಾದ ತೊಂದರೆ. ದುರಿತ—ಪಾಪ. ಅಳ್ಳೆಜೊಳ್ಳೆಯ—ನಿಸ್ಸಾರನಾದವನು, ಅಶಕ್ತ. ಅಳ್ಳೇಱು—ಬಲವಾದ ಪೆಟ್ಟು.

೮೫. ಅರೆಬರ್—ಕೆಲವರು. ಅನ್ನೆವರ—ಅಲ್ಲಿಯವರೆಗೆ. ಸಯ್ತು—ಸುಮ್ಮನೆ. ಅಂತಕ—ಯಮ. ಗೋಣ್—ಕತ್ತು.

೮೬. ಬೆಂಕೊಳೆ—ಬೆನ್ನುಹತ್ತಿ ಬರಲು. ಕಡಿಕೆಯ್—ಕತ್ತರಿಸು. ಬಸನ—ವ್ಯಸನ. ಬಸ—ವಶ.

೮೭. ಕಡುಪು—ಉಗ್ರತೆ, ತೀವ್ರತೆ. ಪಂಚತೆ—ಸಾವು.

೮೮. ಇನಿಸಾನುಂ—ಬೇಗ, ಸ್ವಲ್ಪಹೊತ್ತು. ಸಯ್ತು—ಕ್ರಮ.

೯೧. ತೆ—ಛೀ, ತೆಗೆ. 'ತೆ' ಎಂಬುದು ಅವ್ಯಯ.

೯೨. ಕೆರ್ಚು—ಗರ್ವ. ಪೈತ್ತಿಕ—ಪಿತ್ತಸಂಬಂಧ. ಕೈಪೆ—ಕಹಿ.

೯೩. ಮುಪ್ಪಾವಳಿ—ವೃದ್ಧಾಪ್ಯ. ಮೂವಣ್ಣ—ಮೂರು ಬಣ್ಣ.

೯೪. ಬರ್ದಿಸು—ಸಾಯಿಸು. ನಾಣಿಲಿ—ನಾಚಿಕೆಯಿಲ್ಲದ.

೯೬. ಉನ್ನುನ್ನ—ಮಧ್ಯೆಮಧ್ಯೆ. ತಱಿಸಲ್—ನಿಶ್ಚಯಿಸು.

೯೭. ಆಣಲ್—ಅಂಗುಳು. ಅಡಸು—ಸೇರು.

೯೮. ಕಱಿ—ಕಪ್ಪು. ಸಾಸಿಗ—ಸಾಹಸಿಗ.

೯೯. ಕೈಯಾನೆ—ಕೈಯೊಡ್ಡು. ಒಟ್ಟಜ—ಕಾಣಿಕೆ, ಒತ್ತೆ.

೧೦೦. ಮುಸು—ಕಪಿ. ಏಡಿಸು—ಹೀಯಾಳಿಸು.

೧೦೩. ಪುಡುಕೆ—ಕುಡುಕೆ, ಭರಣಿ. ವಾಜಿ—ಕುದುರೆ. ಆತಪತ್ರ—ಬೆಳ್ಗೊಡೆ. ವಿಭೂತಿ—ಸಂಪತ್ತು.

೧೦೫. ನಿಷೇಕ—ಸಾವು (?). ಮೃತಕತೂರ್ಯ—ದುಃಖಸೂಚಕವಾದ್ಯ. ಇಂಡೆಯಾಡಿ—ಎಸೆದಾಡಿ.

೧೦೭. ಮಡಗೂಟಿಏ್—ಎಂಜಲನ್ನ. ಅಱ—ಧರ್ಮ.

೧೦೮. ಬುದ್ಬುದ—ಗುಳ್ಳೆ. ಬಳಂಪುಶರಾಸನ—ಕಾಮನಬಿಲ್ಲು.

೧೧೦. ಪತದ್ಗ್ರಹಣೆ—(?) ಪಡಿಗವನ್ನು ಹಿಡಿಯುವವಳು ?

೧೧೩. ದಕ್ಕ—ಮೊನೆ, ತುದಿ.

೧೧೪. ಸೆರಗು—ಅಂಜಿಕೆ, ಭಯ. ಕಲಿಯ ದಂಡೆ—(?)

## ತೃತೀಯಾಶ್ವಾಸಂ

೧ವ. ಸಪ್ತರ್ಧಿ—ಏಳು ಋದ್ಧಿಗಳು. ವ್ಯಪೇತ—ತೊರೆದವನು. ಉಪೇತ—ಕೂಡಿದ ಪರಿವರ್ಜಿತ—ತ್ಯಜಿಸಿದ. ಉಪಲಕ್ಷಿತ—ದೃಷ್ಟಿಗೆ ಬಿದ್ದ.

೨. ತನು—ಶರೀರ. ತನು—ಕೃಶ.—ನೋಂತು—ವ್ರತಮಾಡಿ.

೨ವ. ಸಮಾಧಿಮರಣ—ಸಮಾಧಾನದಿಂದ ಸಾವನ್ನಪ್ಪುವುದು, ಸಲ್ಲೇಖನ. ಶಶಾಂಕಸಂಕಾಶ—ಚಂದ್ರಕಾಂತಿ. ಸಪ್ರವೀಚಾರ—ಇಂದ್ರಿಯಜನ್ಯವಾದ ಸತ್‌ಸೌಖ್ಯ. ಅವಧಿಜ್ಞಾನ—ಕಾಲಜ್ಞಾನ.

೩. ಭಾನು—ಸೂರ್ಯ. ಅವನಿ—ಭೂಮಿ. ನಿಳಿಂಪ—ದೇವತೆ.

೫. ವಸುಧಾರೆ—ಸುವರ್ಣವೃಷ್ಟಿ. ಅರೆ—ಅರ್ಧ. ವಸುಪತಿ—ಕುಬೇರ. ಅವಸಥ—ವಾಸಸ್ಥಾನ.

೬. ಪ್ರಧ್ವಾನ—ಧ್ವನಿ. ಇಂದ್ರತರು—ಕಲ್ಪವೃಕ್ಷ. ಪ್ರಸೂನ—ಹೂವು. ಮುಂಸಿಂಚದೆ—ಹಿಂದೆ ಸರಿಯದೆ.

೭. ಚಂದ್ರಕವಳ—ಒಂದು ಬಗೆಯ ಕೆಂಪುಬಣ್ಣದ ಸುಗಂಧಿತ ಅಲಂಕಾರ ದ್ರವ್ಯ. ಅಲಕ್ತಕರಸ—ಅರಗಿನ ರಸ.

೮. ಭರತ—ಭರತನ ನಾಟ್ಯಶಾಸ್ತ್ರ. ವಿದ್ಧ—ಚಿತ್ರ. ಪರಚಕ್ರ—ಶತ್ರುಸೈನ್ಯ ಇಕ್ಕು—ಹೊಡೆ.

೯. ಆಂದೋಳ—ಉಯ್ಯಾಲೆ.

೧೧ವ. ಶಾತಕುಂಭ—ಚಿನ್ನ. ಮರಕತ—ಪಚ್ಚೆ. ಯಕ್ಷಕರ್ದಮ—ಸುಗಂಧದ್ರವ್ಯಗಳ ಒಂದು ಲೇಪನದ್ರವ್ಯ. ಸಾರವಣೆ—ಲೇಪನ. ಪೂವಲಿ—ಹೂವುಗಳಿಂದಾದ ಅಲಂಕಾರ ಚಿತ್ರ. ಜತಿಯಬ್ಬು—? ಪರ್ಯಂಕ—ಹಾಸಿಗೆ.

೧೨. ಶ್ರೀವಧು—ಲಕ್ಷ್ಮಿ. ಹರಿಣಧರ—ಚಂದ್ರ. ವಿವಸ್ವತ್—ಸೂರ್ಯ.

೧೨ವ. ಉನ್ನಿದ್ರೆ—ಎಚ್ಚರಗೊಂಡವಳು. ಮಂಡನ—ಅಲಂಕಾರ.

೧೩ವ. ವೀಜ್ಯಮಾನ—ಬೀಸಣಿಗೆಯ ಗಾಳಿ. ಕಂಚುಕ—ಕುಪ್ಪಸ. ಅವಚ್ಛನ್ನ—ಮುಚ್ಚಿದ.

೧೪. ದಯಿತೆ—ಪ್ರಿಯೆ.

೧೪ವ. ವಿಯತ್ತಳ—ಆಕಾಶ. ಉದ್ಭಾಸಿ—ಶೋಭಿಸುವ. ವಿನಿರ್ಜಿತ—ಜಯಿಸಿದ. ಅವತೀರ್ಣ—ಇಳಿದ. ಕುಂಜರ—ಆನೆ.

೧೫. ಪರಿಷೇಕ—ಚಿಮುಕಿಸುವುದು.

೧೫ವ. ಪಲ್ಯ—ಒಂದು ಕಾಲಗಣನೆ. ಷಟ್ಚರಣ—ದುಂಬಿ.

೧೬. ಬೆಳ್ಪು—ಬಿಳುಪು. ಪೊದಟಿಙ್—ಹೊಮ್ಮು. ಪಜ್ಜಳಿಸು—ಹೊಳೆಯುವುದು, ಅರ್ಭಕ—ಶಿಶು.

೧೭. ದಶನ—ಹಲ್ಲು. ಸಮ್ಮದ—ಹರ್ಷ, ಉಲ್ಲಾಸ.

೧೮. ಪೆಂಪು—ಹಿರಿಮೆ. ಅಭ್ಯರ್ಚಿತೆ—ಪೂಜಿತೆ.

೧೯. ಉತ್ತಪ್ತ—ಚೆನ್ನಾಗಿ ಕಾಯಿಸಿದ. ಕನಕರುಚಿ—ಚಿನ್ನದ ಕಾಂತಿ. ಭಾಸುರ—ಹೊಳೆಯುವ.

೨೧ನ. ಸ್ತವನ—ಸ್ತುತಿ. ಅಂಕಕಾರ್ತಿ—ವೀರರಮಣಿ, ಬಿರುದಾಂಕಿತೆ. ಭೈಷಜ್ಯ—ವೈದ್ಯ. ಲತಿಕೆ—ಸಣ್ಣಬಳ್ಳಿ. ಚಂಚತ್—ಹೊಳೆಯುವ. ವೈಯಾಪೃತ್ಯಕರಣ—ಷೋಡಶ ಭಾವನೆಗಳಲ್ಲೊಂದು. ದೋಹಳ—ಬಯಕೆ.

೨೨. ಪುಣ್ಯಾಹ—ಶುಭದಿನ. ತೂರ್ಯ—ವಾದ್ಯ. ಸರಿತ್ಪತಿ—ಸಮುದ್ರ.

## ಚತುರ್ಥಾಶ್ವಾಸಂ

೧. ಅಪವರ್ಗ—ಮೋಕ್ಷ. ಪ್ರಾಕಾರ—ಗೋಡೆ, ರಕ್ಷಣೆ.

೩. ಅಘ—ಪಾಪ.

೪. ಅಹಿಮಕೃತ್—ಸೂರ್ಯ. ಅಭ್ಯರ್ಣ—ಸಮೀಪ.

೫. ಪರಮೇಶ್ವರಿ—ಜಿನನ ತಾಯಿಯಾದ ವಿಜಯಸೇನಾದೇವಿ. ಪುಳಕ—ರೋಮಾಂಚನ. ಕರಂ—ವಿಶೇಷವಾಗಿ. ಆಮ್ರಲತಿಕೆ—ಕೋಮಲವಾದ ಮಾವಿನಗಿಡ.

೬. ಗುಡಿ—ಬಾವುಟ. ಆತಪವಾರಣ—ಛತ್ರಿ, ಕೊಡೆ. ವಾರನಾರಿ—ವೇಶ್ಯೆ. ಚಾರಣ—ಸ್ತುತಿಪಾಠಕ. ಪರೆ—ಹಬ್ಬು. ಭೃಂಗಾರ—ಚಿನ್ನದ ಕಳಶ. ಬಿಣ್ಪು—ತೂಕ. ಪೊಣವಾಟು—ನಿತಂಬ. ದಿಣ್ಪು—ತಿಣ್ಪು, ಭಾರ. ತೆಲ್ಲಂಟಿ—ಬಳುವಳಿ. ಸಂದೋಹ—ಗುಂಪು.

೮. ವಿರಿಂಚ—ಬ್ರಹ್ಮ. ತಳರ್—ಚಲಿಸು. ವಿಯಚ್ಚಕ್ರ—ಆಕಾಶಮಂಡಲ.

೯. ತ್ರಿದಶಪತಿ—ದೇವತೆಗಳ ಒಡೆಯ, ಇಂದ್ರ. ಧವಳ—ಬಿಳುಪು. ಅರುಣ—ಕೆಂಪು. ರುಚಿ—ಕಾಂತಿ.

೧೦. ಸ್ಫುರಿತ—ಹೊಳೆಯುವ. ಆತಪತ್ರ—ಬೆಳ್ಗೊಡೆ. ಉತ್ಕರ—ರಾಶಿ, ಸಮೂಹ. ಸುರವಾಹಿನಿ—ದೇವತಾಸಮೂಹ. ಸುರವಾಹಿನಿ—ದೇವನದಿ, ಗಂಗೆ.

೧೧. ಅಹಿಲೋಕ—ನಾಗಲೋಕ. ತೀವ್ರು—ತುಂಬು.

೧೨. ತ್ರಿದಶಸ್ತ್ರೀ—ದೇವತಾಸ್ತ್ರೀ. ಉಪಾಧ್ಯ—ಎರಡನೆಯ. ಪಾದ್ಯ—ಕಾಲುತೊಳೆದ ನೀರು.

೧೨ನ. ಪೊಡೆವಟ್ಟು—ನಮಸ್ಕರಿಸಿ. ಕಂಚುಕಿತ—ಆವರಿಸಿಕೊಂಡ. ಪೂರ—ಪ್ರವಾಹ ಪರಿಪ್ಲಾವಿತ—ಕಂಪಿತ.

೧೪. ವಕ್ತ್ರ—ಮುಖ. ಪಸವೋಡು—ತಣಿಯುವವರೆಗಿನ ಬಯಕೆ. ಸಮುಲ್ಲಸ—ಅತಿಯಾದ ಸಂತೋಷ. ಅಚ್ಚಿ—ಪ್ರೀತಿ. ಪುಲೋಮಪುತ್ರಿ—ಶಚೀದೇವಿ.

೧೪ನ. ಕೈಯೆಡೆಗುಡು—ನ್ಯಾಸವಾಗಿ ಕೊಡು.

೧೬. ಸಂಕ್ರಂದನ—ಇಂದ್ರ.

೧೯. ಆನತ—ನಮಸ್ಕರಿಸಿದ.

೨೦ವ. ಅಪಹಸಿತ—ಹಾಸ್ಯಮಾಡಲ್ಪಟ್ಟ. ಪಾಟಳ—ಎಳಗೆಂಪು. ಅಪಾಂಗ—ಕಡೆಗಣ್ಣು. ಪೃಥು—ವಿಶಾಲವಾದ, ದೊಡ್ಡದಾದ. ಪೀನ—ತುಂಬಿದ. ಗ್ರೀವ—ಕೊರಳು. ಉಪಚಿತಾಂಸ—ವೃದ್ಧಿಹೊಂದಿದವನು. ಪ್ರಲಂಬ—ಉದ್ದವಾದ. ಬಧಿರಿತ—ಕಿವುಡಾಗುವಂತಹ. ಮುಖರಿತ—ಗದ್ದಲಮಾಡು.

೨೧. ಸುರಕರಿ—ಐರಾವತ. ರದನ—ದಂತ.

೨೪ವ. ವಿಕ್ರಿಯಾಬಲ—ಅಣಿಮಾದಿ ಶಕ್ತಿಗಳ ಬಲದಿಂದ ರೂಪಾಂತರ. ಗೀರ್ವಾಣವಾರಣ—ದೇವಗಜ, ಐರಾವತ. ವಿಗುರ್ವಿಸು—ಹೆಚ್ಚಾಗು, ಭಯಗೊಳಿಸು.

೨೫. ವೇಷ್ಟಿಸು—ಸುತ್ತುವರಿ. ಓಳಿ—ಸಮೂಹ.

೨೬. ಖಗಾದ್ರಿ—ವಿಜಯಾರ್ಧಪರ್ವತ. ಬಿರ್ದು—ಔತಣ.

೨೭. ಭದ್ರಶಾಲ—ಉಪ್ಪರಿಗೆ. ಮಿಸುಪ—ಹೊಳೆಯುವ. ಪಾಂಡುಕವನ—ಮಂದರ ಪರ್ವತದ ಮೇಗಣ ವನಗಳಲ್ಲಿ ಒಂದು ; ಇದರಲ್ಲಿ ಜಿನಶಿಶುವಿನ ಜನ್ಮಾಭಿಷೇಕ. ಗಾಡಿ—ಸೌಂದರ್ಯ.

೨೮. ಸಹಕಾರ—ಮಾವು. ಅಚ್ಛವಾರಿ—ಸ್ವಚ್ಛವಾದ ನೀರು. ನಿಷ್ಯಂದನ—ಚಲಿಸು, ಉದುರು

೨೯. ಕನನ್ಮಣಿ—ಹೊಳೆಯುವ ಮಣಿ. ಕಾರ್ತಸ್ವರ—ಚಿನ್ನ.

೩೦. ಸೂಟಿ—ಬಾರಿ. ಜಿನಸವನ—ಜಿನಾಭಿಷೇಕ.

೩೧. ನಿಳಿಂಪ—ದೇವತೆ. ಕುಭೃತ್—ಪರ್ವತ. ಕಟಿಸೂತ್ರ—ಒಡ್ಯಾಣ, ಡಾಬು.

೩೧ವ. ಬಳಾಹಕ—ಮುಗಿಲು.

೩೩ವ. ವಿದ್ರುಮವರ್ಣ—ಹವಳದ ಬಣ್ಣ. ಜಾಂಬೂನದವರ್ಣ—ಚಿನ್ನದ ಬಣ್ಣ.

೩೪. ವಿಷ್ಕಂಭ—ವಿಸ್ತಾರ. ಪ್ರೋಚ್ಛಿತ— ?

೩೬. ಕನಕಾಭ—ಚಿನ್ನದ ಸಮಾನ. ಲಂಬಣ—ಹಾರ. ಈಟಿಱ್ಕೊಳ್—ಸೆಳೆದುಕೊ. ಪ್ರತಾನ—ಗುಂಪು. ವಿತಾನ—ಆಧಿಕ್ಯ. ಆಖಂಡಲ—ಇಂದ್ರ.

೪೦. ನೆಲೆವಡಲಿಗೆ—ನೆಲೆಪಡಲಿಗೆ—ಇಟ್ಟ ಚಿಬ್ಬಲು, ಬಿದಿರುತಟ್ಟೆ ಜಾಗ

೪೧. ತಾಳವ್ಯಜನ—ತಾಳೆಯ ಬೀಸಣಿಗೆ.

೪೨. ಚರು—ನೈವೇದ್ಯ.

೪೩ವ. ಪ್ರೇಯಸ—ಪ್ರಿಯತಮ.

೪೫. ಕೂಪ—ಬಾವಿ. ಸರಿತ್—ನದಿ.

೪೬. ಓಳಿಗಟ್ಟು—ಸಾಲುಗಟ್ಟು.

೪೭. ಭಾಜನ—ಪಾತ್ರೆ.

೪೯. ತುಂಗತೆ—ಶ್ರೇಷ್ಠತೆ. ಪಿಶಂಗತೆ—ಕಂದುಬಣ್ಣದಿಂದ.

೫೦. ಪರಿಕಲಿಸು—ತುಂಬು. ಕರಜ—ಬೆರಳು.

೫೦ವ. ಸರ್ಷಪ—ಸಾಸುವೆ. ಗೋಮಯ—ಸಗಣಿ. ಅರ್ಘ್ಯ—ಕೈಕಾಲು ತೊಳೆವ ನೀರು.

೫೧. ಅನೀಕ—ಸಮೂಹ. ಧ್ವಾನ—ಧ್ವನಿ.

೫೨. ಮಸಗು—ವಿಜೃಂಭಿಸು. ನಿಸ್ಸೃತ—ಸುರಿಯುವಂತಹ. ನಿಬಿಡ—ತುಂಬಿದ.

೫೨ವ. ಮೃಣಾಳ—ತಾವರೆಯದೇಟು. ನಾಳಿಕೇರ—ತೆಂಗು. ಇಕ್ಷುರಸ—ಕಬ್ಬಿನರಸ. ಸಹಕಾರ—ಮಾವು. ದಧಿ—ಮೊಸರು.

೫೩. ಅಭಿಷವ—ಅಭಿಷೇಕ. ಜಂಭಾರಿ—ಜಂಭ ಎಂಬ ರಾಕ್ಷಸನ ಶತ್ರು, ಇಂದ್ರ.

೫೩ವ. ಶಾತಕುಂಭ—ಚಿನ್ನ. ಅನಿತೆ—ಅಷ್ಟೆ. ನಿಗುರ್ವಿಸು—ಭಯಗೊಳಿಸು.

೫೪. ವಿಗಳಿತ—ಕೆಳಗೆ ಬಂದ. ಮಿಸಿಸು—ಮೀಯಿಸು, ಅಭಿಷೇಕ ಮಾಡಿಸು. ಕೂಟ ವಿಟಂಕ—ಶಿಖರದ ತುದಿ. ಲಸತ್—ಹೊಳೆಯುವ.

೫೫. ಅರಘಟ್ಟಘಟೀಯಂತ್ರ—ಬಾವಿಯಿಂದ ನೀರನ್ನು ಮೇಲೆತ್ತುವ ಯಂತ್ರ.

೫೬. ಕಳಧೌತ—ಚಿನ್ನ, ಬೆಳ್ಳಿ. ಅಂಭಃಕಣ—ನೀರಿನ ಹನಿ. ಓಘ—ರಾಶಿ. ಆಯತ—ವಿಶಾಲವಾದ.

೫೭. ಪೊನಲ್—ಪ್ರವಾಹ. ತಾರಕಾನಿವಹ—ನಕ್ಷತ್ರಸಮೂಹ. ತೇಂಕು—ತೇಲಾಡು. ಆಕುಳಚಿತ್ತ—ವ್ಯಸನಿ. ಬೆಂಬಿರ್ದ—ಬೆನ್ನುಬಿದ್ದ, ಹಿಂದಟ್ಟಿದ. ಅಂಭಃಪ್ರವಾಹಪ್ಲವ. ಅಂಭಃಪ್ರವಾಹ—ನೀರಿನ ಪ್ರವಾಹ. ಪ್ಲವ—ಹರಿಯುವುದು. ಪ್ಲವ ಎಂಬಲ್ಲಿ ದ್ವಿರುಕ್ತಿಯಿದೆ.

೫೮. ಅವಸರ—ಸಮಯ. ವಿನಮಜ್ಜನ—ನಮಸ್ಕರಿಸಿದ ಜನ. ದುಗ್ಧ—ಹಾಲು. ಆರ್ತುದು—ಸಮರ್ಥವಾಯಿತು.

೫೯. ಆನನ—ಮುಖ. ಚಿಬ್ಬಂಬೊಯ್—ಚರ್ಮದ ಮೇಲೆ ಬಿಳಿಯ ಚುಕ್ಕೆಗಳಾಗುವುದು, ಚಿಬ್ಬಲುಹೊಯ್ಯು. ಬೆಳ್ಪಸದನ—ಬಿಳಿಯ ಅಲಂಕಾರ. ಸವನ—ಮಂಗಳಸ್ನಾನ.

೬೦. ಏಕಾವಳಿ—ಒಂದೇ ಎಳೆಯ ಸರ. ದುಗ್ಧವಾರಿ—ಹಾಲು.

೬೧. ಪ್ಲವಗಪ್ಲುತ—ಕುಪ್ಪಳಿಸು. ಪಯಃಪ್ಲವ—ಹಾಲಿನ ಪ್ರವಾಹ. ಪಾರಿಪ್ಲವ—ಚಂಚಲ.

೬೨. ಪೊದಱ್—ಹೊರಹೊಮ್ಮು. ಭುಜಂಗ—ಹಾವು. ನಗೋಪಕಂಠ—ಪರ್ವತದ ಸಮೀಪ.

೬೪. ಕ್ಷೀರವರ್ಷ—ಹಾಲಿನ ಮಳೆ. ವಾಸವ—ಇಂದ್ರ.

೬೬. ಪಾಂಡುರಿತ—ಹಳದಿಮಿಶ್ರಿತ ಬಿಳಿಬಣ್ಣ. ದರೀಗೃಹ—ಕಣಿವೆಪ್ರದೇಶ. ಸುಧಾಗೃಹ—ಸುಣ್ಣ ಬಳಿದ ಮನೆ.

೬೭ವ. ಬೆಳ್ಮೃಗ—ಬಿಳಿಯ ಮೃಗ. ಇಕ್ಷುವಾಟ—ಕಬ್ಬಿನ ತೋಟ. ಪುಂಡ್ರೇಕ್ಷುವಾಟ—ಕೆಂಪು ಕಬ್ಬಿನ ತೋಟ. ಇಲ್ಲಿ ಹಾಲಿನ ಅಭಿಷೇಕದಿಂದಾದ ಪರಿಣಾಮಗಳನ್ನು ವರ್ಣಿಸಲಾಗಿದೆ.

೬೮. ಕನತ್—ಹೊಳೆಯುವ. ನಗ—ಬೆಟ್ಟ. ಚಂಚತ್—ಪ್ರಕಾಶಿಸುವ. ರೌಪ್ಯಾದ್ರಿ—ಬೆಳ್ಳಿ ಬೆಟ್ಟ.

೬೮ವ. ಉತ್ತಪ್ತ—ಪುಟವಿಟ್ಟ. ಕುಂಜರ—ಆನೆ. ನೀರಾಜನ—ಆರತಿ.

೬೯. ತಿಗುಳ್—ತೊಗಟೆ (?) ವಿಗತಕಷಾಯ—ಕ್ರೋಧ ಮಾನ ಮಾಯೆ ಲೋಭ ಕಷಾಯಗಳಿಂದ ಮುಕ್ತನಾದ.

೭೦. ಕಾರ್ತಸ್ವರ—ಚಿನ್ನ. ಆಳಿಪಟಳ—ದುಂಬಿಗಳ ಸಮೂಹ.

೭೦ವ. ಕರ್ಚುರ—ತೊಳೆ. ತೋಯ—ನೀರು. ಕಾಳಾಗರು—ಕಾಲಾಗುರು—ಕರಿಯ ಅಗರು. ಕರ್ಕೋಳ—ಕರ್ಕೋಳ ಎಂಬ ಸುಗಂಧಮರದಿಂದ ಸಿದ್ಧಪಡಿಸಿದ ಸುಗಂಧದ್ರವ್ಯ. ಜಾತೀಫಲ—ಜಾಯಿಕಾಯಿ. ಜಾತೀಪತ್ರ—ಜಾಯಿಪತ್ರೆ. ಗೋಶೀರ್ಷ—ಒಂದು ಜಾತಿ ಗಂಧದಮರ. ಚಂದನ—ಶ್ರೀಗಂಧ. ಕುಂದುರುಷ್ಕ—ಕುಂದುರುಕ—ಒಂದು ಬಗೆಯ ಸುಗಂಧದ ಬೇರು.

೭೧. ಮಳಯೋರ್ವೀರುಹ—ಶ್ರೀಗಂಧದ ಮರ. ಮಘವ—ಇಂದ್ರ.

೭೨. ಪವಿ—ವಜ್ರಾಯುಧ. ವಿನಮತ್—ಬಾಗಿದ, ನಮಸ್ಕರಿಸಿದ.

೭೪. ಮೋದ—ಸಂತೋಷ. ಕುಲಿಶಿ—ಇಂದ್ರ. ಅವಭೃತಸವನ—ಮಂಗಳಸ್ನಾನ.

೭೬. ವೃಷ—ಇಂದ್ರ. ದಾನಚಿಂತಾಮಣಿ ಅತ್ತಿಮಬ್ಬೆ ಮಾಡಿದ ಮಹಾಭಿಷೇಕವನ್ನು ಇಲ್ಲಿ ಉದ್ಧರಿಸಲಾಗಿದೆ.

೭೭ವ. ಅರಾತಿ—ಶತ್ರು. ನಿರ್ವರ್ತಿಸು—ನೆರವೇರಿಸು.

೭೮. ಆಮೋದ—ಸುವಾಸನೆ. ಅಸಿತಾಗರು—ಕಾಳಾಗರು. ಅವನೀಜ—ಮರ.

೭೯. ಶಕ್ರಾಂಗನೆ—ಶಚೀದೇವಿ. ನಾಗದೇವಾಂಗನೆ—ಅತ್ತಿಮಬ್ಬೆ. ಇಲ್ಲಿ ಶಚೀದೇವಿಯನ್ನು ಅತ್ತಿಮಬ್ಬೆಯೊಡನೆ ಸಮೀಕರಿಸಿ ಶ್ಲೇಷೆಯನ್ನು ತಂದಿದ್ದಾನೆ.

೭೯ವ. ಮಸೃಣ—ಹೊಳೆಯುವ. ಮಯೂಖ—ಕಾಂತಿ, ಕಿರಣ. ಬಾಲಾತಪ—ಎಳಬಿಸಿಲು ಕಾಶ್ಮೀರಾಂಗರಾಗ—ಕುಂಕುಮಕೇಸರಿ ಬಣ್ಣ. ಅಭಿಷ್ಟುತಿ—ಸ್ತುತಿ.

೮೨. ಪ್ರತ್ನ—ಪ್ರಾಚೀನ. ಪ್ರವರ—ಶ್ರೇಷ್ಠ. ಇಲ್ಲಿ ಕವಿಯ ಸ್ವಪ್ರತಿಷ್ಠೆಯನ್ನು ಕಾಣಬಹುದು. (ನೋಡಿ : ಪ್ರಸ್ತಾವನೆ)

೮೪. ಉರ್ವೀಧರ—ಬೆಟ್ಟ. ವಜ್ರಿ—ಇಂದ್ರ. ಮಜ್ಜನವಳ್ಳ—ಸ್ನಾನ ಮಾಡಿಸುವವನು. ಅರ್ಕ—ಸೂರ್ಯ.

## ಪಂಚಮಾಶ್ವಾಸಂ

೨. ಎಱಗು—ನಮಸ್ಕರಿಸು. ಪದದ್ವಿತಯ—ಎರಡು ಪಾದಗಳು. ಪರಿವೃತ—ಆವರಿಸಿದ.

೩. ದ್ವೈತೀಯಕ—ಎರಡನೆಯ. ದಯಿತ—ಒಡೆಯ. ದೈತೇಂದ್ರ—ಒಡೆಯರ ಒಡೆಯ (ದೇವತೆ). ಆತತ—ಅತಿಶಯವಾದ.

೪. ಅವನತ—ಬಾಗಿದ, ನಮಸ್ಕರಿಸಿದ. ಅಭ್ಯರ್ಚಿಸು—ಪೂಜಿಸು.

೫. ಪುಂಗವ—ಶ್ರೇಷ್ಠ. ಪಾಂಗು—ಸಾಧ್ಯತೆ, ಅವಕಾಶ. ಪ್ರಣತ—ಬಾಗಿದ.

೭. ಅಂಬುದಸಮಯ—ಮಳೆಗಾಲ. ಸಮನಿಸು—ಒದಗು. ಆಖಂಡಲ—ಇಂದ್ರ.

೮. ಅಂಗಹಾರ—ಅಭಿನಯಮುದ್ರೆ.

೯. ನಾಟ್ಯಕ್ಕೆ ಸಂಬಂಧಿಸಿದ ಅಭಿನಯ ವಿಧಗಳನ್ನು ಹೇಳಲಾಗಿದೆ. ಆಹಾರ್ಯ—ವೇಷ ಭೂಷಣಗಳಿಂದಾದ ಅಭಿನಯ. ಕೌಶಿಕ—ಇಂದ್ರ.

೧೦. ಸಾಮಾನಿಕ—ಜೈನದೇವತೆಗಳಲ್ಲಿ ಒಂದು ವರ್ಗ. ಚೇತೋಮ—? ಧ್ರುವ—ದೇಸಿ ಗೀತೆಗಳಲ್ಲಿ ಒಂದು ಪ್ರಕಾರ. ಸಂಗೀತ ಶಾಸ್ತ್ರದ ಪಾರಿಭಾಷಿಕ ಪದಗಳನ್ನು ಉಪಯೋಗಿಸಲಾಗಿದೆ.

೧೧. ಅಕಬಳ—?

೧೧. ಆಸ್ಥಾಯಿಕೆ—ಆಸ್ಥಾನ.

೧೨. ಗೋಪುಚ್ಛ—? ಚತ್ರಕೀಯ—? ಕೂಚ—?

೧೩. ಕ್ವಣ—ಧ್ವನಿ. ಮುರಜ—ಮದ್ದಲೆ. ಪ್ರಣಾದ—ಘೋಷ, ಧ್ವನಿ. ವಂಶ—ಕೊಳಲು. ಸುಷಿರವಾದ್ಯ—ಊದುವ ವಾದ್ಯ.

೧೫. ಭ್ರಮರಿಗುಡು—ವೃತ್ತಾಕಾರವಾಗಿ ಚಲಿಸು. ಅಸಿತರುಚಿ—ಕಪ್ಪುಬಣ್ಣ—ಕಾಂತಿ. ಬಾಸಿಗ-ಮಾಲೆ.

೧೬. ಜರ್ವು—ಕೊಂಕು-ಗೊಂದಳದೆ—ಸಾಮೂಹಿಕವಾಗಿ. ಮಘವ—ಇಂದ್ರ.

೧೮. ಕಕುಭ—ದಿಕ್ಕು, ಅನಿಲಪಥ—ಆಕಾಶ.

೨೨. ನಾಡಾಡಿ—ಸಾಮಾನ್ಯ. ಗಾಡಿ—ಸೌಂದರ್ಯ. ತೋಡು—ಜೋಡಿ, ಜೊತೆ.

೨೩. ಪರಮ—ಜಿನ. ಚರಮ—ಕೊನೆಯ. ಔದಾರಿಕ—ಸ್ಥೂಲದೇಹ.

೨೫. ದ್ರೋಹಸ್ಸರ್ಪಿತ—? ನಿರಾಕುಳತೆ—ಕ್ಲೇಶರಹಿತ. ಅಕ್ಷಿವೆಸರ್ಪಿತ—?

೨೬. ಸಪ್ತಚ್ಛದವನ—ಪ್ರತಿಯೊಂದು ಗಂಟಿನಲ್ಲೂ ಏಳು ಎಲೆಗಳನ್ನು ಧರಿಸಿರುವ ಏಳೆಲೆ ಬಾಳೆವನ. ಏಳಾವನ—ಏಲಕ್ಕಿ ವನ. ಚೂತವನ—ಮಾವಿನ ತೋಟ.

೨೭. ಜಂಬೂನದಗಿರಿ—ಮೇರುಪರ್ವತ. ಸ್ತಂಬೇರಮ—ಆನೆ. ಲಂಬಣ—ಕುಚ್ಚು

೨೮. ಅಂಬರ—ಬಟ್ಟೆ. ಸ್ರಗ್ರಾಜಿ—ಹೂವಿನ ಹಾರಗಳ ಸಮೂಹ.

೩೦. ಸಂತಾನಕ ಸಮೇರು—ದೇವಲೋಕದ ಮರ. ಪ್ರಕರ—ಗುಂಪು.

೩೦ವ. ಇಲ್ಲಿ ನಾಟ್ಯ ಸಂಗೀತ ಮತ್ತು ನಾಟಕಾದಿ ವಿವಿಧ ರೂಪಭಂಗಿಗಳ ವರ್ಣನೆಯಿದೆ.

೩೨. ಪಳವ—ಚರ್ಮವಾದ್ಯ. ಜುಂಕ—ಒಂದು ಬಗೆ ವಾದ್ಯ. ಎಳಲ್—ಆಯಾಸಪಡು, ಜೋಲು. ಕಳರುತಿ—ಮಧುರವಾದ ಧ್ವನಿ.

೩೨ವ. ಚುಬುಕ—ಗಲ್ಲ. ಗ್ರೀವ—ಕತ್ತು. ಕಟಿ—ನಡು.

೩೩. ಸುರಗೆವೆಕ್ಕಣ—ಒಂದು ಬಗೆಯ ಪೆಕ್ಕಣವೆಂಬ ನೃತ್ಯ. ಮಾಸರಂ—ಮನೋಹರತೆ

೩೪. ಗಾಣ—ಗಾಯಕ, ಸಂಗೀತಗಾರ.

೩೫. ಓಜೆ—ಕ್ರಮ; ...

೩೬. ಮೆಟ್ಟು—ನರ್ತಿಸು. ಅನುರಗಜ—ಐರಾವತ.

೩೭. ಎವೆ—ಕಣ್ಣುರೆಪ್ಪೆ. ಸುರವಧುವರ—ಇಂದ್ರ. ಆಸ್ಥಾಯಿಕೆ—ಆಸ್ಥಾನ.

೩೯. ಸುಟ್ಟಿತೋಱು—ಬೆರಳಿನಿಂದ ತೋರಿಸು.

೪೦. ಮಿಱುಗು—ಹೊಳಪು, ಕಾಂತಿ. ಕಿತ್ತು—ಕೆತ್ತು—ಮಿಡುಕು, ಚಲನೆ, ಸ್ಪಂದನ ಪೊಗರ್—ಹೊಳಪು. ಕೊದಳ್—ತೊದಲುವಮಾತು. ಪೊದಱ್—ಹೊರಹೊಮ್ಮು. ಒಟ್ಟಜೆ—ಅತಿಶಯತೆ. ಕೂಂಕು—ಮೇಲಕ್ಕೆ ನೆಗೆ. ಪವಣ್—ಪ್ರಮಾಣ. ಇಂಗೊರಲ್ —ಇಂಪಾದ ಧ್ವನಿ.

೪೧. ಅಮರಲಂಜಿಕೆ—ದೇವತಾಸ್ತ್ರೀಯರು. ಎಡೆಯೊತ್ತು—ಒಂದು ಬಗೆಯ ತಾಳ, ಮಧ್ಯತಾಳ (?)

೪೨. ಗುಂಜತ್—ಮರ್ಮರ ಶಬ್ದ. ಮಂಜೀರಕ—ಕಾಲಂದುಗೆ. ಮಂಜುಸಿಂಜಿತ— ಇಂಪಾದ ಝಣತ್ಕಾರ.

೪೩. ಉಳಿತ—ಅಲುಗಾಡು. ವಳಿತ—ಸುತ್ತುವರಿಯುವುದು. ಗೊಂದಳ—ಗುಂಪು, ಸಮೂಹ.

೪೪. ಅಳ್ಳಾಟ—ಕಂಪನ. ಪಾಟ—ಹಾಡು. ಗೋರಿ—ಒಂದು ಬಗೆಯ ಬೇಟೆ.

೪೬. ಉನ್ಮಿಲ—ಉನ್ಮೀಲನ, ತೆರೆಯುವುದು. ನಿಮೀಲನ—ಮುಚ್ಚುವುದು. ಸುತ್ರಾಮ —ಇಂದ್ರ.

೫೨. ಮುಯ್ಪು—ಮುಯ್ವು—ಭುಜಾಗ್ರ.

೫೩. ಜಾತಪ್ರಿಯ—ಎಲ್ಲ ಜೀವಿಗಳ ಮೇಲೆ ದಯೆಯುಳ್ಳವನು. ದ್ಯೋತಿ—ಪ್ರಕಾಶ.

೫೫. ಎಳವಿ—ಎಳೆದು.

೫೬. ಕಣ್ಣೆಱಕಮೆ ಗೆತ್ತು—ದೃಷ್ಟಿ ಬಿದ್ದಿದೆಯೆಂದೇ ಭಾವಿಸಿ. ಉಃಪಿರಿಯಲ್—ದೃಷ್ಟಿ ತೆಗೆಯುವುದು.

೫೮. ಅಱ್—ಸಮರ್ಥವಾಗು. ಉಗಿಬಗಿ—ಹೊಯ್ದಾಡು.

೬೦ವ. ಚತುರ್ನಿಕಾಯಾಮರಜನ—ಭವನವಾಸಿ, ಜ್ಯೋತಿಷ್ಕ, ವ್ಯಂತರ, ವೈಮಾನಿಕರೆಂಬ ನಾಲ್ಕು ಬಗೆಯ ದೇವತೆಗಳು.

೬೧. ಕುಳಿಶಿ—ಇಂದ್ರ. ಅಂಗುಲಿ—ಬೆರಳು. ನತಭುವನ—ಜಗತ್ತಿನಿಂದ ಪೂಜಿಸಲ್ಪಡು ವವನು. ಇಂದ್ರನು ಜಿನನ ಮಧ್ಯೆ ಬೆರಳಿನಲ್ಲಿ ಅಮೃತವನ್ನು ಇರಿಸಿದ ಕಲ್ಪನೆ ಒಂದು ಜನಪದ ಆಶಯ (Motif)ವೆಂದು ತೆಗೆದುಕೊಳ್ಳಬೇಕು.

೬೨. ಆಳರೆಲೆ—ಅರಳಲೆ—ಅರಳಿ ಎಲೆಯ ಆಕಾರದ ಒಂದು ಒಡವೆ. ಪೊಂಗುನೂಲ್— ಒಂದು ಆಭರಣ. ಕಲ—ಮಧುರ ಧ್ವನಿ.

೬೪. ವದ—ಮಾತು.

೬೫. ಅರ್ಧಮಾಗಧಿ—ಒಂದು ಪ್ರಾಚೀನ ಭಾಷೆ. ಪರಿಜಪನ—ಪರಿಜಪ—ಮಂತ್ರಪಠನ.

೭೦. ವಿದಳ—ಸಂದಿಗ್ಧತೆ, ನಾಶ. ಅಗಣ್ಯ—ಎಣಿಸಲಾಗದ.

೭೧. ಮಾತಂಗ—ಆನೆ. ಪುಣ್ಯಾವಹ—ಪುಣ್ಯವನ್ನು ಉಂಟುಮಾಡುವ.

೭೨. ದಾರಕ—ಬಾಲಕ. ವೃಂದಾರಕ—ದೇವತೆ. ದುರಿತವಿದಾರಕ—ಪಾಪನಾಶಕ.

೭೩. ಮಣಿಕುಟ್ಟಿಮ—ರತ್ನಖಚಿತ ನೆಲೆಗಟ್ಟು.

೭೫. ಅನಾರತ—ಒಂದೇಸಮನೆ. ಅಡಕು—ಅಡುಕು—ಒಂದರಮೇಲೊಂದನ್ನು ಹೇರು. ತರಟು—ತಲೆಬೋಳಾಗು.

೭೭. ಎಱೆವೆಸ—ಸ್ವಾಮಿಕಾರ್ಯ. ಪುಲ್ಲವಟುಕ—ಹೂಮಾರುವವ; ಹೂವಾಡಿಗ.

೭೯. ಸಂತಾನಕ—ಸಮೂಹ. ದಾಮ—ಹಾರ. ಕೇಯೂರ—ತೋಳುಬಂದಿ.

೮೦. ತ್ರಿದಶ—ದೇವತೆ. ನೆತ್ತ—ಪಗಡೆದಾಳ. ಮುಟ್ಟು—ಸಾಮಗ್ರಿ, ಸಲಕರಣೆ. ಮರವಟ್ಟು—ಮರದ ಗೋಲಿ (?) ಪದಪು—ಪ್ರೀತಿ, ಉತ್ಸಾಹ.

೮೧. ಮಹಿಷ—ಕೋಣ. ಮೇಷ—ಹೋತ. ವೀತರಾಗ—ನಿರ್ಲಿಪ್ತ.

೮೩. ಬವಣಿಗೆ—ಸುತ್ತುಹಾಕುವುದು, ಸುತ್ತಾಟ.

೮೬. ಅನಿವಂ—(?)

೮೭. ಅಣಮೆ—ಸ್ವಲ್ಪವೂ. ಎಱಗು—ಮುತ್ತು, ಆಸೆಪಡು.

೮೯. ಜಂಕರಿಸು—ಹೆದರು. ಮೂಂಕರಿಸು—ತಿರಸ್ಕರಿಸು. ಬೆಕ್ಕರಿಸು—ಭಯಪಡು ನಿರ್ವಿನಿಸು—(?) ಜೇಂಕರಿಸು—ಹೊಗಳು. ಕೊಕ್ಕರಿಸು—ಅಸಹ್ಯಪಡು. ಜಿನುಗು—ಗೊಣಗು. ಅವಸಿಸು—ಆತುರಪಡು. ಈ ಪದ 'ಅನಿವಿಸು' ಪದದ ಅಪಪಾಠವಿರಬಹುದು. ಅನಿವಿಸು-ನಿರ್ಬಂಧಿಸು.

೯೦. ಅಳವಳಿಸು—ಶಕ್ತಿಗುಂದು. ಕನಲ್—ಕೋಪಿಸು. ಒನಲು—ಕೆರಳು. ಚಳವಳಿಸು—ಚಲಿಸು. ಬೆಳ್ಮೊಗ—ಕಳೆಗುಂದಿದ ಮುಖ.

೯೧. ಮಿಳ್ಳೆಗೊಳ್—? ಅಜನಿಸು—ಹೆದರು, ತಿರಸ್ಕರಿಸು

೯೨. ಪಕ್ಕು—ನೆಲೆ. ಅಗಲಗಲ್—ಬೇರೆ ಬೇರೆ, ದೂರದೂರ.

೯೩. ಎಡೆಮುಡಗು—ತೆರಪುಮಾಡು. ತುಱುಂಬು—ಹೂಮುಡಿ. ಸ್ರಕ್—ಹೂವು ಮಜ್ಜನವಳ್ಳ—ಸ್ನಾನ ಮಾಡಿಸುವವ.

೯೪. ವಿಶದ—ಶುಭ್ರವಾದ. ಇಭಕರ—ಆನೆಯ ಸೊಂಡಿಲು. ಪೃಥುಲ—ವಿಸ್ತಾರವಾದ.

೯೪ಅ. ಮಸೃಣ—ಮೃದುವಾದ. ಊರು—ತೊಡೆ. ಅಭ್ಯರ್ಚಿತನ—ಪೂಜಿಸಿಕೊಳ್ಳುವವನ.

೯೫. ಔದಾರಿಕ—ಸ್ಥೂಲತನು, ಶರೀರ. ಹೇಮಪ್ರಭಾ—ಸುವರ್ಣಕಾಂತಿ. ಭಾಸುರ—ಹೊಳೆಯುವ. ವಿಲೋಲ—ಅಲುಗುವ, ಹೊರಳುವ. ಅಪಾಂಗ—ಕಡೆಗಣ್ಣು. ದರಹಾಸ—ಮುಗುಳುನಗೆ. ಈಟ್ಟು—ಆಕರ್ಷಿಸಿ. ಸ್ವಾಂತ—ಮನಸ್ಸು, ಚಿತ್ತ.

೯೫ಅ. ಮಂತ್ರಣ—ಆಲೋಚನೆ. ಕೆತ್ತು ಪಣ್ಣಂಗೆಯ್—ಜೊತೆಗೊಳಿಸು (?)



೯೬. ಬಟ್ಟೆ—ದಾರಿ. ಪಾಂಗು—ರೀತಿ.

೯೮. ವೆಱಂ—ನಿಶ್ಚಯವಾಗಿ. ಜೈತ್ರಶಾತ್ರವ—ಶತ್ರುಸಮೂಹವನ್ನು ಗೆದ್ದವನು. ಅಜಿತ ಮದುವೆಗೆ ಒಪ್ಪಿಕೊಳ್ಳುವ ಧ್ವನಿಪೂರ್ಣಚಿತ್ರವಿದೆ.

೯೮ವ. ಉದ್ದವಣ—ಮಂಗಳವಾದ್ಯ. ಉತ್ತಂಸ—ಶ್ರೇಷ್ಠ. ಅಜಿತನಿಗೆ ಸಾವಿರ ಕನ್ನೆಯರನ್ನು ವಿವಾಹಮಾಡಿದ ಚಿತ್ರ.

೯೯. ಕಡುಗಾಡಿ—ಅತಿಶಯ ಸೊಬಗು. ಕಲ್ಪಾವನೀಜ—ಕಲ್ಪವೃಕ್ಷ. ಸಹಸ್ರಾಂಗನೆಯರ ನಡುವೆ ಶೋಭಿಸುತ್ತಿದ್ದ ಅಜಿತನನ್ನು "ಕಲ್ಪಲತೆಗಳ ನಡುವೆ ಕಲ್ಪವೃಕ್ಷದಂತಿದ್ದ" ನೆಂದು ವರ್ಣಿಸುವುದು ಚೆನ್ನಾಗಿದೆ.

## ಷಷ್ಠಾಶ್ವಾಸಂ

೧. ನಿರವದ್ಯ—ನಿರ್ದೋಷಿ.

೧ವ. ಸಮುಲ್ಲಸಿತ—ಸಂತೋಷ. ಲಲಾಟಪಟ್ಟ—ಪಟ್ಟಾಭಿಷಿಕ್ತ. ತೆಲ್ಲಂಟ—ಉಡುಗೊರೆ.

೨. ಕಳ—ಮಧುರಧ್ವನಿ. ಅಖಂಡಳ—ಇಂದ್ರ.

೩. ಗುರೋರಪಿ ಗುರು—ಗುರುವಿಗೆ ಗುರು.

೫. ಪದನಖ—ಪಾದದ ಉಗುರು. ಓಳಿ—ಸಾಲು.

೭. ಪೆಂಡವಾಸ—ಅಂತಃಪುರ. ನಿಯೋಗಿ—ಕಾರ್ಯಭಾರಿ. ಚಾರಣ—ಸ್ತುತಿಪಾಠಕ.

೮. ಧುರ—ಯುದ್ಧ. ಪದಾನತರ್—ನಮಸ್ಕರಿಸಿದವರು. ದಾಯಿಗ—ದಾಯಾದಿ. ಪುದಿ—ಸೇರು.

೧೦. ಆನಕ—ನಗಾರಿ. ಕ್ಷೀಬ—ಮದಿಸಿದ. ಕೀರ—ಗಿಳಿ. ಪರಭೃತ—ಕೋಗಿಲೆ.

೧೨. ತಮಾಲ—ಹೊಂಗೆ. ಓಳಿವಟ್ಟು—ಸಾಲುಗಟ್ಟು. ಇಂದ್ರಚಾಪ—ಕಾಮನಬಿಲ್ಲು.

೧೩. ಕಂತು—ಮನ್ಮಥ. ಆಮ್ರದ್ರುಮ—ಮಾವಿನಮರ.

೧೫. ಕೊರಗ—ಮೊಗ್ಗು. ನೇಲ್—ನೇತಾಡು. ಕೊಂಬು—ಮರದ ಕೊನೆ.

೧೬. ಪರವರಿ—ವ್ಯಾಪ್ತಿ, ಹರವು, ಹಬ್ಬುಗೆ.

೧೭. ಚುಂಬಿ—ತಾಗುವ. ಕಪೋಲ—ಕೆನ್ನೆ. ಸ್ಕಂಧ—ಹೆಗಲು. ಪುನ್ನಾಗ—ಸುರಹೊನ್ನೆ.

೧೮. ಪೆಱಗಣ—ಹಿಂದಣ. ಮಧುಕರ—ದುಂಬಿ.

೧೯. ಪತ್ತುವಿಡು—ಸಂಬಂಧ ಬಿಡು. ಆಯತ್ತ—ಸುಲಭ, ಅನಾಯಸ.

೨೧. ಪಪ್ಪಲ—ಪರ್ಪಟ—ಹಪ್ಪಳ (?) ಪಪ್ಪಕ—ಸೋವುವುದು (ಬೇಟೆಯಲ್ಲಿ). ಪಱಮೆ—ದುಂಬಿ. ಉಪ್ಪಯಣ—ಪ್ರಯಾಣದ ನಡುವೆ ತಂಗುವುದು.

೨೨. ಸಾತ್ಕೃತ—ಆಕರ್ಷಿಸು, ವಶಪಡಿಸು. ಕೋರಕ—ಮೊಗ್ಗು. ಇಱಿಸು—ಹೀಯಾಳಿಸು.

೨೩. ಎಳವೆಱೆ—ಬಾಲಚಂದ್ರ. ಅಳ್ಳಿಗೊಂಬು—ಸಣ್ಣಕೊಂಬೆ. ಮಿಳಿರ್—ಚಲಿಸು. ಉತ್ಕ—ಉತ್ಸುಕವಾದ. ತರ್ಜಿಸು—ಹೆದರಿಸು, ನಿಂದಿಸು.

೨೪. ಕಳಿಕ—ಜೋಳ. ಕುಟ್ಮಲ—ನನೆ, ಮೊಗ್ಗು. ಮಧೂತ್ಸವ—ವಸಂತೋತ್ಸವ. ಒಡಮೆ—ಒಡವೆ. ಲೆಕ್ಕವಣಿಗೆ—ಲೆಕ್ಕ, ವಿವರ?

೨೫. ಪದೆ—ಬಯಸು, ಆಸೆಪಡು. ಸಹಕಾರ—ಮಾವು. ಷಟ್ಪದ—ದುಂಬಿ. ಪ್ರಸೂನ—ಹೂವು.

೨೬. ಸ್ಮರಶರ—ಮನ್ಮಥಬಾಣ. ತಣ್ಗದಿರ—ತಂಪಾದ ಕಿರಣ,,ಬೆಳದಿಂಗಳು. ತೆಂಬೆರಲ್—ತೆಂಗಣಗಾಳಿ. ಬಗ್ಗಣೆ—ಕೋಗಿಲೆಯ ಧ್ವನಿ. ಗಾವರ—ಝೇಂಕಾರ. ಗೋಸಣೆ—ಘೋಷಣೆ. ಬದ್ಧರ—ಆನೆ. ವಾರಣ—ಆನೆ.

೨೭. ವಿಕಚ—ಅರಳಿದ. ನಿಶ್ವಸಿತ—ನಿಶ್ವಾಸ, ಹೊರಬಿಟ್ಟ. ಅಳಕ—ಮುಂಗುರುಳು.

೨೮. ಪಿಡಿ—ಆನೆ. ಕುತ್ತುವಡೆ—ಏಟುತಿನ್ನು. ಬಾಳ್—ಕತ್ತಿ. ಮೋದು—ಹೊಡೆ. ನಿರ್ವಂಡ—ನಿರ್ಬಂಧ. ಉಗಿ—ಉಟಿ, ಒಂದು ಬಗೆಯ ವ್ರತ.

೩೪. ಉದ್ಘ—ಹಿರಿಯ, ಪ್ರಶಸ್ತ. ತನ್ವಿ—ಕೋಮಲ ಶರೀರವುಳ್ಳವಳು. ಸಡಸುಡಂಗೆಯ್—ಸಡಗರಿಸು, ತ್ವರೆಗೊಳಿಸು. ಅಗಿ—ಭಯಪಡು.

೩೫. ಉಪರೋಧಿಸು—ಬಲಾತ್ಕರಿಸು. ಅಲಂಘನೀಯ—ಉಲ್ಲಂಘಿಸಲಾಗದ. ಪರಿಣಯನ—ಪರಿಣಯ—ವಿವಾಹ.

೩೯. ತಾರಕ—ನಕ್ಷತ್ರ. ಉಡುವರ—ಚಂದ್ರ.

೪೦. ಖಳಾನನ—ಕೆಟ್ಟಮುಖ. ತನುದೊಡ್ಡು—ಕತ್ತಲರಾಶಿ. ಉಗಿ—ಹೊರಚೆಲ್ಲು. ಸ್ಮರ—ಮನ್ಮಥ. ಗೆತ್ತು—ಭಾವಿಸಿ. ಸುಗಿ—ಭಯ. ತಾರಕಾತರಳ—ಚಂದ್ರ. ದೀಧಿತಿ—ಕಿರಣ, ಕಾಂತಿ.

೪೧. ಮುಕುರ—ಕನ್ನಡಿ. ದಿಗ್ನಾಗ—ಆನೆ. ಕಳಿತ—ಕೂಡಿದ. ತುಹಿನಕರ—ಚಂದ್ರ.

೪೨. ಕಂತು—ಮನ್ಮಥ. ಪಿಂಡ—ಗುಂಪು. ಆಕೂತ—ಇಂಗಿತ, ಆಶಯ. ಕುರಂಗ—ಜಿಂಕೆ. ಅರ್ಣವ—ಸಮುದ್ರ. ವೀಚಿ—ಅಲೆ. ಸುಧಾಸೂತಿ—ಚಂದ್ರ.

೪೩. ಉಣ್ಮು—ಹೊರಹೊಮ್ಮು. ಆಕುಳ—ಚಿಂತೆ. ಪೆಣಬು—ಹೋರಾಡು.

೪೪. ಉಡುತತಿ—ನಕ್ಷತ್ರಸಮೂಹ. ಹರಿಣಾಂಕ—ಜಿಂಕೆಯ ಗುರುತುಳ್ಳವ, ಚಂದ್ರ.

೪೫. ಬೆಲಗಸೆ—ಬೊಗಸೆ, ಅಂಜಲಿ. ಪಱುಗೋಲ್—ಹರಿಗೋಲು, ತೆಪ್ಪ. ಅಲಂಪು—ಸಂತೋಷ.

೪೬. ಕಣ್ಣುಳ್ಕು—ಕಣ್ಣುಕೋರೈಸು. ನಿರಾಲಂಬನ—ನೆಲೆಯಿಲ್ಲದ.

೪೬ವ. ಅಸುಂಗೊಳ್—ಹೆದರು, ಗಾಬರಿಯಾಗು.

೪೭. ಭಂಗುರ—ನಶ್ವರ. ಉಳ್ಕು—ಸ್ರವಿಸು. ತೊಡರ್ಚು—ಬಂಧಿಸು. ಬೆಳ್ತನ—ಮರುಳುತನ.

೪೯. ರತ್ನತ್ರಯ—ಸಮ್ಯಕ್‍ಜ್ಞಾನ, ಸಮ್ಯಕ್ಚಾರಿತ್ರ, ಸಮ್ಯಗ್ದರ್ಶನ. ನಿರ್ವೇಗತ್ರಯ—ಸಂಸಾರನಿರ್ವೇಗ, ಶರೀರನಿರ್ವೇಗ, ಭೋಗನಿರ್ವೇಗ.

೫೦. ಜಲದ—ಮೋಡ. ಬುದ್ಬುದ—ನೀರಗುಳ್ಳೆ. ಫೇನ—ನೊರೆ.

೫೧. ಕೃತಾಂತ—ಯಮ. ಗೋಣ್ಮುರಿ—ಕತ್ತುತಿರುಚು. ಪದ—ಸಮಯ. ಕಾಗು—ರಕ್ಷಿಸು.

೫೩. ಕಟಿಂದ—ಕಳೆದುಹೋದ. ತನೂಭವ—ಮಗ. ಅವಧರಿಸು—ಕೇಳು.

೫೪. ಕೆರಂಕು—ತುರಿ. ಅಸೃಗಂಬು—ರಕ್ತ. ಪುರೀಷ—ಕಲ್ಮಶ. ಪಂದೊವಲು—ಹಸಿಯ ಚರ್ಮ. ಪಸುಂಬೆ—ಹಸುಬೆ ಚೀಲ (ಶರೀರ).

೫೫. ದ್ರವ್ಯ—ಷಡ್ದ್ರವ್ಯ—ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ ಕ್ಷೇತ್ರ—ಸಪ್ತಕ್ಷೇತ್ರ.

೫೭. ಆಸ್ರವ—ಸಪ್ತತತ್ತ್ವಗಳಲ್ಲಿ ಒಂದು. ಪುಣ್ಯಪಾಪರೂಪವಾದ ಕರ್ಮವು ಜೀವದೊಳಕ್ಕೆ ಹರಿಯುವುದು.

೫೮. ಗುಪ್ತಿ—ತ್ರಿಗುಪ್ತಿ—ಮನೋಗುಪ್ತಿ, ವಚನಗುಪ್ತಿ, ಕಾಯಗುಪ್ತಿ.

೫೯. ಉಪಚಿತ—ಕೂಡಿದ, ಶೇಖರಿಸಿದ. ಅಘ—ಪಾಪ.

೬೦. ಅರಿದು—ಅಸಾಧ್ಯವಾದುದು. ತಳೀಸಲ್—ನಿಶ್ಚಯಿಸು.

೬೧ವ. ಅನುಪ್ರೇಕ್ಷೆ—ಯತಿಗಳು ಧ್ಯಾನಮಾಡಬೇಕಾದ ೧೨ ತತ್ವಗಳ ಅನುಚಿಂತನೆ.

೬೨. ಪಳಚ್ಚನೆ—ಥಳಥಳನೆ, ಓಪಳೆಗೆತ್ತು—ಪ್ರಿಯೆಯೆಂದು ಭಾವಿಸಿ. ವಿಹಂಗ—ಮೋಡ, ಪಕ್ಷಿ.

೬೩. ಮದಿರಾ—ಮದ್ಯ. ಸ್ವೇದಾಂಬು—ಬೆವರು. ತವೆ—ಸಂಪೂರ್ಣವಾಗಿ ಪುದಿದು—ತುಂಬಿ, ವ್ಯಾಪಿಸಿ. ಪ್ರಭಾತ ಸಮೀರಣ—ಬೆಳಗಿನ ಗಾಳಿ.

೬೪. ಪುಂಡರೀಕ—ತಾವರೆ. ಸುಪ್ರತೀಕ—ದಿಗ್ಗಜ. ಅಮರೇಭ—ಐರಾವತ. ನಿಶಾಂತ—ರಾತ್ರಿಯ ಕೊನೆ, ಬೆಳಗಿನಜಾವ.

೬೫. ಬಿರಿ—ಅರಳು. ಮುಕುಳ—ಮೊಗ್ಗು. ವೇಟ—ಬೇಟ—ಅನುರಾಗ. ಸುಸಿಲ್—ರತಿ.

೬೬. ಮುಸುಂಬು—ಮುಖ. ಅಘ್ರಾಣಿಸು—ವಾಸನೆನೋಡು. ಆಳವಳಿಸು—(?) ಪಸವೇಡು—ಬಯಕೆ ತೀರು. ಅತ್ಯಯ—ಕಡೆ, ಮುಕ್ತಾಯ.

೬೭. ಕುಶೇಶಯ—ತಾವರೆ. ಕರ—ಕಿರಣ. ಮಿತ್ರ—ಸೂರ್ಯ.

೬೮. ಎಱಪ—ಮುತ್ತುವ. ತಮ—ಕತ್ತಲು.

೬೯. ವನಜ—ಕಮಲ. ಶಫಲ—ಮೀನು. ಕಳಸ್ವನ—ಮಧುರಧ್ವನಿ. ಕಳಕ್ಕಳ—ತಳಮಳ, ಸಂಭ್ರಮ, ಆತುರ. ಈಟುಕೊಳ್—ಆಕರ್ಷಿಸು, ಸೆಳೆ.

೭೦. ವಾಸವದಿಕ್—ಇಂದ್ರದಿಕ್ಕು, ಪೂರ್ವದಿಕ್ಕು. ಸಮೆ—ಸಿದ್ಧಗೊಳಿಸು. ಏರಣಿಗ—ಚಿನ್ನಗೆಲಸದವ. ನಿದಾಘ—ಬೇಗೆ. ದೀಪ್ತಿ—ಬೆಳಕು. ವರ್ತಿ—ಬತ್ತಿ. ಪಿಂಜರಿ—

ಬೆಳ್ಳಿ. ಪೞಂಗಾಸು—'ಪಳಗಾಸು' ಎಂಬ ಶುದ್ಧ ಚಿನ್ನದ ಪ್ರಾಚೀನಕಾಲದ ಒಂದು ನಾಣ್ಯ.

೭೧. ಪಯೋರುಹ—ತಾವರೆ. ಕೈಗಣ್ಮು—ಕೈಮೀರು, ಹೆಚ್ಚು. ದಂದುಗ—ತೊಂದರೆ.

೭೩. ಪಂಚೇಷು—ಮನ್ಮಥ. ಜೆಚ್ಚರ—ಜಾಗರೂಕತೆ. ಪಂಚಮಗತಿ—ಐದನೆಯ ಗತಿ, ಮೋಕ್ಷ.

೭೪. ಕಷಾಯಚತುಷ್ಟಯ—ಕ್ರೋಧ ಮಾನ ಮಾಯಾ ಲೋಭ. ಭವಚಾತುಷ್ಟಯ—ದೇವ ಮಾನವ ತಿರ್ಯಂಚ ಮತ್ತು ನರಕ. ಪೊರ್ದು—ಹೊಂದು. ಸಂಸೃತಿ—ಸಂಸಾರ.

೭೭. ವಿಜಿತ—ಜಯಿಸಿದ. ಕಿಲ್ಬಿಷ—ದೋಷ, ಪಾಪಕರ್ಮ. ಪರಿಗ್ರಹ—ಅನವಶ್ಯಕವಾಗಿ ವಸ್ತುಸಂಗ್ರಹ ಮಾಡುವುದು. ಪ್ರಾಜ್ಯ—ಶ್ರೇಷ್ಠ, ಪವಿತ್ರ. ಪಾಲ್ಯ—ಪಾಲಿಸುವುದು, ರಕ್ಷಿಸುವುದು.

೭೮. ಬೆಂಕೊಳ್—ಬೆನ್ನಟ್ಟು. ತಱ್ತರು—ಒಡಗೂಡು. ಸುರುಳ್—ಸುತ್ತಿಕೊಂಡಿರು. ಅಟವಿ—ಕಾಡು.

೭೯. ನಾಂಗಳ್—ನಾವು. ಆದಿತ್ಯ—ಸೂರ್ಯ.

೮೦. ಶತಸಪ್ತತಂತು—ನೂರು ಯಜ್ಞಗಳನ್ನು ಮಾಡಿದವನು, ಇಂದ್ರ.

೮೫. ತದೀಯ—ಆ ವ್ಯಕ್ತಿಯ. ಅಸ್ತು—ಆಗಲಿ. ಅತಂದ್ರ—ಆಲಸ್ಯವಿಲ್ಲದ.

೮೮. ಸಿವಿಗೆ—ಪಲ್ಲಕ್ಕಿ.

೯೦. ತಳರು—ಚಲಿಸು. ಬಿಮ್ಮನೆ—ಗಂಭೀರವಾಗಿ, ದೃಢವಾಗಿ. ಅಳುಪು—ಆಸೆಪಡು.

೯೧. ಆಮ್ರಮಹೀರುಹ—ಮಾವಿನಮರ. ವನೇಭ—ಕಾಡಾನೆ. ಯೂಥಪತಿ—ಆನೆಗಳ ಒಡೆಯ, ಸಲಗ.

೯೫. ಆಯ—ಪರಾಕ್ರಮ, ಸಾಮರ್ಥ್ಯ. ತುಱಿಲಾಳ್—ಯುದ್ಧವೀರ, ಶೂರ.

೯೬. ಕೂರ್ಪು—ಹರಿತ. ಕರವಾಳ್—ಕತ್ತಿ. ಕಡುಪು—ವೇಗ. ಗಾಡಿ—ಸೌಂದರ್ಯ. ಬೆಲೆವೆಣ್—ವೇಶ್ಯೆ. ಕರ್ತೆ—ಕೞ್ತೆ—ಕತ್ತೆ. ಎಡಂಬಡು—ಅಸಮಾಧಾನ, ಎಡವಟ್ಟು. ಆರ್ತಿ—ಸಂತೋಷ.

೯೭. ದೊಣೆ—ಬತ್ತಳಿಕೆ. ಬಿನ್ನಣ—ಕುಶಲತೆ. ಕಿಱುಪು—ಕತ್ತಿವರಸೆಯಲ್ಲಿ ಒಂದು ಬಗೆ.

೯೮. ಮಲ್ಲ—ವೀರ. ಬಳ—ಸೈನ್ಯ. ಮಾನಸವಾಳ್—ಮನುಷ್ಯನ ಬಾಳು.

೯೮. ಪೊೞಲ್—ಪಟ್ಟಣ. ಬೞಿವೞಿ—ಹಿಂಬಾಲಿಸುವುದು.

೯೯. ಗಳಪು—ಹರಟು. ಸೂೞ್—ಸರದಿ, ಕ್ರಮ, ದಾರಿ.

೧೦೦. ಸುರಗಣಿಕೆ—ಅಪ್ಸರೆ. ಉಸಿರ್ಪತ್ತು—ಉಸಿರಿನ ಸಂಬಂಧ (?) ಪಚ್ಚುವಚ್ಚು—ಸಮೀಪಿಸಿ (?) ಪರ್ಚು—ಅವ್ಯಕ್ತವ್ಯಕ್ತಿ, ಪಿಸುನುಡಿಯಾಡು (?)

೧೦೧. ತರಟು—ಬೋಳು. ಅಡಕು—ಹೇರು, ಸುರಿ.

೧೦೨. ಅಗ್ಗಲಿಸು—ನಲಿ, ಹಿಗ್ಗು. ಗೆಂಟಾಗಿಸು—ದೂರವಾಗುವಂತೆ ಮಾಡು.

೧೦೬. ಪಸದನ—ಅಲಂಕಾರ ಪರಿಕರಗಳು. ಅಲತೆಗೆ—ಅರಗಿನ ರಸ. ಕಜ್ಜಲ—ಕಣ್ಕಪ್ಪು.

೧೦೭. ಸೀಗುರಿ—ಚವರಿ, ಬಿಸಿಲು ಮರೆಮಾಡುವ ಉಪಕರಣ. ಡವಕೆ—ಪೀಕದಾನಿ, ಉಗುಳುವ ಪಾತ್ರೆ.

೧೦೮. ರಾಜಕೀರ—ಅರಗಿಳಿ. ಮೃಗಪೋತಕ—ಜಿಂಕೆಮರಿ. ಕಾಂತಾರ—ಕಾಡು. ತಿಸರಿ —ಒಂದು ಬಗೆಯ ತಂತಿವಾದ್ಯ.

೧೦೯. ಮನಃಕ್ಷತ—ಮನೋವ್ಯಥೆ. ಸಮವಾಯ—ಅವಿನಾಸಂಬಂಧ. ಗುಜ್ಜ—ಕುಳ್ಳ.

೧೧೦ಎ. ಪರಿಚ್ಛೇದ—ನಿರ್ಧರಿಸು. ಚೆಂಬೊನ್ನಮಾಡ—ಚಿನ್ನದ ಉಪ್ಪರಿಗೆ. ಪಾದಪ—ಮರ.

೧೧೧. ಬೆಸಕೆಯ್—ಅಪ್ಪಣೆ. ವಿಹ್ವಳೆ—ದುಃಖಿತೆ. ನೆಗಪು—ಹೊಮ್ಮು, ಚಿಮ್ಮು.

೧೧೨. ಪರಪುಟ್ಟ—ಕೋಗಿಲೆ. ಕೂರ್—ಪ್ರೀತಿಸು. ತಣ್ಪಲೆ—ಹಿತವನ್ನು ಹೊಂದು.

೧೧೩. ಅಂತರಾಯ—ವಿಘ್ನ, ಅಡೆತಡೆ.

೧೧೮. ಪದಯಿದು—ಪಕ್ವಗೊಂಡ. ಅಸಂಚಳ—ಅಚಂಚಲ. ಅಪ್ರಮಾದಿ—ಪ್ರಜ್ಞಾವಂತ. ಅವಧಾತೃ—ಅವಧಾನವುಳ್ಳವನು.

೧೧೯. ಪೀನ—ಉಬ್ಬಿದ. ಶುಂಭತ್—ವಿಸ್ತಾರ. ಅಸಿತ—ಕಪ್ಪು.

೧೨೧. ಯುಗ್ಮ—ಜೋಡಿ. ಉಣ್ಮು—ಹೊಮ್ಮು. ಬಿಗುರ್—ಹೆದರಿಕೆ. ಅಳುಂಬ—ಅತಿಶಯ.

೧೨೩. ಓವಿ—ಪ್ರೀತಿಸಿ. ಕೆಮ್ಮನೆ—ಸುಮ್ಮನೆ. ಗುಱುಗುಮ್ಮನೆ—ನಿಷ್ಕ್ರಿಯವಾಗಿ.

೧೨೩ಎ. ಸಂಚರತ್—ಅತ್ತಿತ್ತ ತಿರುಗುವ. ಬಾಱಿಸು—ತಡೆ. ಕಪಿಶ—ನಸುಗೆಂಪು. ಕಿಸಲಯ—ಚಿಗುರು. ಪತ್ತುವಿಡು—ಬಿಟ್ಟುಬಿಡು, ತ್ಯಜಿಸು. ಜವನಿಕೆ—ತೆರೆ.

೧೨೪. ಮನಃಪರ್ಯಯಜ್ಞಾನ—ಇತರರ ಮನಸ್ಸಿನಲ್ಲಿರುವುದನ್ನು ತಿಳಿದುಕೊಳ್ಳುವ ಜ್ಞಾನ.

೧೨೫. ಅವಗಮನ—ತಿಳುವಳಿಕೆ, ಜ್ಞಾನ. ಅವಹಿತ—ನಿಯೋಜಿಸಿದ. ಜಿಗೀಷು—ಜಯದ ಅಪೇಕ್ಷೆಯುಳ್ಳವನು.

೧೨೬. ಅದಮೆ—ಅತಿಶಯವಾಗಿ.

೧೨೬ಎ. ಸಾವಧ್ಯ—ಪಾಪ. ಸಾಮಾಯಿಕ—ಶಿಕ್ಷಾವ್ರತದ ಒಂದು ಪ್ರಕಾರ. ಮಧುಕರ—ದುಂಬಿ. ನಿಕಾಶ—ಸದೃಶ, ತೋರಿಕೆ, ಹೋಲಿಕೆ.

೧೨೭. ಪ್ರವಾಳ—ಹವಳ.

೧೨೮. ಉಱುವಾಱು—ವಿನಿಮಯದ ವ್ಯಾಪಾರ. ಚಟುಳ—ಚಲಿಸುವ ಸ್ವಭಾವವುಳ್ಳ, ಶೀಘ್ರ. ಭಾಸುರ—ಸುಂದರ.

೧೨೯. ಪರಿಹೃತ—ತ್ಯಜಿಸಿದ. ಅಂಗರಾಗ—ಸುಗಂಧಲೇಪನದ್ರವ್ಯ. ಅಪನೀತ—ತೆಗೆದು ಹಾಕಿದ. ಪಯೋದ—ಮೋಡ. ವ್ಯಪೇತ—ತ್ಯಜಿಸಿದ.

೧೩೧. ಮುಗ್ಗು—ನಮಸ್ಕರಿಸು. ಅಭ್ಯರ್ಚನ—ಪೂಜೆ.

## ಸಪ್ತಮಾಶ್ವಾಸಂ

೧. ಸಮಾಚೀನ—ಯೋಗ್ಯವಾದ.

೧೧. ಭೈಕ್ಷ್ಯ—ಭಿಕ್ಷೆಗೆ ಸಂಬಂಧಿಸಿದ ವ್ರತ. ಗೋಚಾರ—ಸಾಧುವಿನ ಭಿಕ್ಷಾಕ್ರಮ. ಈರ್ಯಾಪಥ ಶುದ್ಧಿ—ನೆಲವನ್ನು ನಾಲ್ಕು ಮೊಳಗಳಷ್ಟು ಮುಂದೆ ನೋಡಿ ನಡೆಯುವುದು. ಹೀಗೆ ನಡೆಯುವಾಗ ಆಗುವ ಜೀವಹಿಂಸಾದಿ ದೋಷಗಳನ್ನು ತಪ್ಪೊಪ್ಪಿಗೆಯಿಂದ ಹೋಗಲಾಡಿಸುವುದು. ಚರ್ಯಾಮಾರ್ಗ—ಜಿನಮುನಿಗಳು ಆಹಾರಕ್ಕಾಗಿ ಚರಿಸುವ ಮಾರ್ಗ.

೨೧. ಪಾಣಿಪಾತ್ರ—ಬೊಗಸೆಗೈ, ಮುನಿಗಳು ಆಹಾರವನ್ನು ತೆಗೆದುಕೊಳ್ಳುವ ಬೊಗಸೆಗೈ. ಇಕ್ಷುರಸ—ಕಬ್ಬಿನಹಾಲು. ಪಯೋರಸ—ಹಾಲು.

೩. ವಸುಧಾರೆ—ಚಿನ್ನದ ಮಳೆ. ಪಂಚಾಶ್ಚರ್ಯ—ದೇವದುಂದುಭಿ, ಹೂಮಳೆ, ಚಿನ್ನದ ಮಳೆ, ದೇವತೆಗಳ ಪ್ರಶಂಸೆ ಮತ್ತು ತಂಗಾಳಿ.

೪. ಭೂಷೆ—ಅಲಂಕಾರ. ಕೈಗೈದು—ಅಲಂಕರಿಸಿಕೊಂಡು, ಅಣಿಯಾಗಿ.

೬. ಕರಿಕಲಭ—ಮರಿಯಾನೆ. ನಕುಲ—ಮುಂಗುಸಿ. ಚಮೂರ—ಹುಲಿ.

೭. ಮಾರ್ಜಾರ—ಬೆಕ್ಕು. ಮಹಿಷ—ಎಮ್ಮೆ. ಸೂಕರ—ಹಂದಿ. ಅಂತಿಕ—ಸಮೀಪ.

೮. ಪ್ರಚಲ—ಚಲಿಸುವ. ವೀಚಿ—ಅಲೆ. ಶೀಕರ—ತುಂತುರು.

೯. ವಿಷ್ಟರ—ಆಸನ. ಆತಪತ್ರ—ಛತ್ರಿ.

೧೦. ಮಡ—ಹಿಮ್ಮಡಿ. ಕಾಯೋತ್ಸರ್ಗ—ಕೈ ಇಳಿಬಿಟ್ಟು ದೇಹವನ್ನು ನೇರವಾಗಿ ಮತ್ತು ನಿಶ್ಚಲವಾಗಿರಿಸಿ ನಿಂತಿರುವುದು. ಋಜ್ವಾಗತ—ವಸ್ತುವಿನ ಒಂದು ಸಮ್ಮುಖದ ನೇರನೋಟ.

೧೨. ಕಣತ್—ಹೊಳೆಯುವ. ಗುಂಜತ್—ಮರ್ಮರಧ್ವನಿ. ಜಲ್ಪ— ಮಾತು, ನುಡಿ.

೧೩. ಅಹಿಮಕೃತ್—ಸೂರ್ಯ. ಔರ್ವಾನಳ—ಬಡಬಾಗ್ನಿ. ವೇಲ್ಲದ್ವನ—ಸಮುದ್ರದ ದಡದಲ್ಲಿನ ಕಾಡು.

೧೪. ಭಾಮಂಡಲ—ಸೂರ್ಯ ಚಂದ್ರರ ಸುತ್ತ ಇರುವ ಬೆಳಕಿನ ವರ್ತುಲ. ಪ್ರಾತಿಹಾರ್ಯ —ತೀರ್ಥಂಕರನಿಗೆ ಒದಗಿಬರುವ ಮಹಿಮೆಗಳು.

೧೫ರ. ಸಂಕಾಶ—ಹೊಳಪು. ನಿರ್ದಳಿತ—ತೊಡೆದುಹಾಕಿದ, ತ್ಯಜಿಸಿದ. ವಿಗಳಿತ—ಕಳಚಿಹೋದ. ವೃಜಿನ—ಪಾಪ.

೧೬. ಸ್ವಾಪತೇಯ ಪತಿ—ಸಂಪತ್ತಿಗೆ ಒಡೆಯ, ಕುಬೇರ.

೧೭. ನೀರ್ಗಾದಿಗೆ—ನೀರ ಕಂದಕ.

೧೮. ನೇಸಱ್—ಸೂರ್ಯ. ಇರ್ವಡಗಲು—(?)

೨೦. ಸಾಮಜರಿಪುವಿಷ್ಟರ—ಸಿಂಹಾಸನ. (ಸಾಮಜ—ಆನೆ).

೨೦ವ. ಹರ್ಮ್ಯ—ಉಪ್ಪರಿಗೆ. ನಿಡಿಯ—ಉದ್ದವಾದ. ಪ್ರಕ್ಷಾಳನ—ತೊಳೆಯುವುದು.

ನಿಳಿಂಪ—ದೇವತೆ. ಶತಮುಖ—ನೂರು ಯಾಗಗಳನ್ನು ಮಾಡಿದವ, ಇಂದ್ರ. ಪರೀತ—ಕೂಡಿದ. ದೌವಾರಿಕ—ದ್ವಾರಪಾಲಕ. ಶಾತಕುಂಭ—ಚಿನ್ನ. ರೌಪ್ಯ—ಬೆಳ್ಳಿ. ಕಾರ್ತಸ್ವರ—ಚಿನ್ನ. ಹಿಂತಾಲ—ಒಂದು ಜಾತಿಯ ತಾಳೆಮರ. ಆಂದೋಳಿತ—ತೂಗಾಡಲ್ಪಟ್ಟ. ಚಂಚರೀಕ—ದುಂಬಿ. ಅನೋಕಹ—ಮರ.

೨೧. ಜ್ಯೋತಿರೌಘ—ಬೆಳಕಿನ ಪ್ರವಾಹ. ಪ್ರಸೂನ—ಹೂವು. ಘಾತಿದ್ವಿಷದ್—ಘಾತಿ ಕರ್ಮಗಳೆಂಬ ಶತ್ರು. ಕಲಧೌತಕ್ಷ್ಮಾಧರ—ಕಾಂಚನಪರ್ವತ.

## ಅಷ್ಟಮಾಶ್ವಾಸಂ

೧೮. ಅತಿಶಯಾವಹ—ಅತಿಶಯವನ್ನುಂಟುಮಾಡುವ.

೨. ಸಿಂಹಾಸನಶಿಖರಸ್ಥಿತಚರಣ—ಸಿಂಹಾಸನದ ತುದಿಯಲ್ಲಿ ಪಾದಗಳನ್ನಿಟ್ಟವನು, ಜಿನ. ಕಲ್ಪಾಂಘ್ರಿಪ—ಕಲ್ಪವೃಕ್ಷ.

೫. ಮಜ್ಜನವಳ್ಳ—ಸ್ನಾನಮಾಡಿಸುವವನು. ದಿವಿಜನಗ—ಮೇರುಪರ್ವತ. ಅಘಬಲಾಹಕ—ಪಾಪವೆಂಬ ಮೋಡ.

೭. ವಯಸ—ವಯಸ್ಸು. ತರಳಚಿತ್ತ—ಚಂಚಲಮನಸ್ಸು.

೧೧. ಬರ್ಹಿ—ನವಿಲು. ವಿಷ್ಟಪ—ಲೋಕ. ತ್ರಿವಿಷಪ್ಪ—ಸ್ವರ್ಗ, ದೇವಲೋಕ.

೧೨. ಗ್ರಾಮಣಿ—ಪ್ರಮುಖ. ಅಹಿಮಕರ—ಸೂರ್ಯ. ಅಮೃತಕರ—ಚಂದ್ರ. ಆರ್ತಪರೆ—ಸಮರ್ಥರೆ.

೧೪. ಚಾಮೀಕರ—ಚಿನ್ನ.

೧೫. ಅಪನುದ—ನಿವಾರಿಸು, ತೊಲಗಿಸು. ಶಾಖಾ—ಕೊಂಬೆಗಳು. ನಿಕೀರ್ಣ—ದಟ್ಟವಾದ, ತುಂಬಿದ.

೧೬. ಕನತ್—ಹೊಳೆಯುವ. ಲಂಘಿಸ—ನೆಗೆತ.

೧೭. ಚೋದ್ಯಾವಹ—ಆಶ್ಚರ್ಯವನ್ನುಂಟುಮಾಡುವ. ಚತುಸ್ತ್ರಿಂಶದತಿಶಯ—ಮೂವತ್ತು ನಾಲ್ಕು ಅತಿಶಯಗಳು.

೧೮. ನಾಕಾವತರಣ—ಸ್ವರ್ಗದಿಂದ ಇಳಿದುಬರುವುದು. ಇದರಲ್ಲಿ ಜಿನನ ನಾಲ್ಕು ಕಲ್ಯಾಣಗಳ ಉಲ್ಲೇಖವಿದೆ. ಐದನೆಯ ನಿರ್ವಾಣ ಕಲ್ಯಾಣ ಉಳಿದಿದೆ.

೨೨. ದೊರೆ—ಸಮಾನ. ಜಿನನಿಗೆ ಜಿನನೇ ಹೋಲಿಕೆ.

೨೩. ಮರೀಚಿ—ಕಾಂತಿ, ಕಿರಣ.

೨೪. ಸ್ತವ—ಸ್ತುತಿ. ಭವ್ಯಜನ—ಮೋಕ್ಷಕ್ಕೆ ಅರ್ಹರಾದವರು.

೨೫. ಉರುತರ—ಅಧಿಕ್ಯ. ಉಪಾರ್ಜನೆ—ಸಂಪಾದನೆ.

೨೬. ಬರ್ದೆ—ಬದುಕಿದೆ. ಉದಗ್ರ—ಶ್ರೇಷ್ಠ.

೨೭. ಸುಕೃತ—ಪುಣ್ಯ. ಸಮ್ಮದ—ಸಂತೋಷ, ಹರ್ಷ.

೨೮. ಅದಂ—ವಿಶೇಷವಾಗಿ. ಮೋದ—ಸಂತೋಷ. ವಿಯಚ್ಚರ—ಖೇಚರ

೨೯. ಅರಾತಿ—ಶತ್ರು. ಆನಕ—ದುಂದುಭಿ.

## ನವಮಾಶ್ವಾಸಂ

೩. ಆಮ್ನಾಯ—ಪೀಳಿಗೆ, ವಂಶ. ಮಹಿಜ—ಮರ. ಸಪ್ತಚ್ಛದ—ಏಳೆಲೆಯ ಬಾಳೆ.

೩ವ. ನಿರ್ವರ್ತಿಸು—ನೆರವೇರಿಸು. ವಿನಶ್ವರ—ನಾಶವಾಗುವಂತಹುದು.

೫ವ. ಬಾಯಬಿಡು—ಪ್ರಲಾಪಿಸು. ಕರುಣಾರುತ—ದಯೆಯಿಂದ ಕೂಡಿದ ಮೊರೆ.

೬. ಗೆಂಟು—ದೂರ. ಆರ್ಮ—ಆಶ್ರಯ.

೬ವ. ಅಪಗತ—ಕಳೆದುಕೊಂಡ. ಉಪಗತ—ಸಹಿತವಾದ. ತ್ರಿಸಾಕ್ಷಿ—ಆತ್ಮ ಇಂದ್ರ ಮತ್ತು ಸಿದ್ಧರೆಂಬ ಮೂರು ಸಾಕ್ಷಿಗಳು. ಗೀರ್ವಾಣ—ದೇವತೆ.

ಅಮರ್ದು—ಅಮೃತ. ಅಪರಾಂಭೋಧಿ—ಪಶ್ಚಿಮಸಮುದ್ರ. ದ್ವಿಟ್ಕರಿ—ಶತ್ರುಗಳ ಆನೆ. ಭಾಭಾಸುರ—ಅತಿಯಾದ ಪ್ರಕಾಶ, ಬೆಳಕು.

೮. ಕಿಂರಾಜರ್—ಅನಾಮಧೇಯರಾದ ರಾಜರು. ರಾಜನ್ವತಿ—ಯೋಗ್ಯನಾದ ರಾಜನಿರುವ ನಾಡು.

೯. ಅವಿದ್ಧ—ತಿರುಗಿಸಿದ, ನೂಕಿದ. ಕ್ಲಿನ್ನ—ನೆನೆದ, ತೊಯ್ದ. ಧ್ವಜಿನಿ—ಸೈನ್ಯ. ಕ್ಷ್ಮಾವಲಯ—ಭೂಮಂಡಲ.

೧೦. ಅವನಮ್ರ—ಬಾಗಿದ. ಅತಾಮ್ರ—ಹೆಚ್ಚು ಕೆಂಪಾದ.

೧೧. ಉದ್ಭಾಸಿತ—ಪ್ರಕಾಶಮಾನವಾದ.

೧೩. ಮಿಸುಪ—ಹೊಳೆಯುವ. ಮರಾಳ—ಹಂಸ. ಆನಕ—ಭೇರಿ. ಅಭ್ರಕುಳ—ಮೋಡಗಳ ರಾಶಿ, ಬಳ್ಳಿಗಳ ಸಮೂಹ.

೧೪. ನಿಕಾಯ—ಸಮೂಹ. ವಿಭಾಸಿ—ಹೊಳೆಯುವ. ರೋಚನಾಪಿಂಗವಿಲೋಚನ—ಪ್ರಕಾಶಿಸುವ ಕೆಂದುಬಣ್ಣದ ಕಣ್ಣು. ಪುಷ್ಕರ—ಸೊಂಡಿಲ ತುದಿ. ಸಿಂಧುರ—ಆನೆ.

೧೪ವ. ಪಣ್ಣಿ—ಸಿದ್ಧವಾಗಿ. ತಳರ್—ಚಲಿಸು.

೧೬. ಪಡಲ್ವಡು—ಚೆಲ್ಲಾಪಿಲ್ಲಿಯಾಗು. ತೇಣು—ಭಾರದಿಂದ ಉಸಿರುಕಟ್ಟು, ನರಳು. ಕಟಕ—ಸೈನ್ಯ.

೧೭. ಪಯೋರಾಶಿ—ಸಮುದ್ರ. ದಾನಪಲ್ಲವ—ಆನೆಯ ಮದೋದಕ ಪ್ರವಾಹ. ಕ್ಷೋಣಿ—ಸೈನ್ಯ. ದೃಕ್—ಕಣ್ಣು. ವಿಗಳತ್—ಹರಿಯುವುದು.

೧೭ವ. ಖುರ—ಕುದುರೆಯ ಗೊರಸು. ಕೃಷ್ಟ—ಉತ್ತ, ಕೃಷಿಮಾಡಿದ. ಪಡೆವಳ—ಸೇನಾಪತಿ. ಕಾಪು—ರಕ್ಷಣೆ. ಮಾಣ್—ನಿಲ್ಲಲು. ದೃಪ್ತ—ಸೊಕ್ಕಿದ.

೧೮ವ. ಮಾರ್ಕೊಂಡು—ಪ್ರತಿಭಟಿಸಿ. ಒಡರ್ಚಿಸು—ಪ್ರಯತ್ನಿಸು.

೧೯. ಕುಂಭೀರ—ಮೊಸಳೆ. ವಾಚಾಳ—ಶಬ್ದ ಮಾಡುವ. ಡಿಂಡೀರಪಿಂಡ—ನೊರೆಯ ರಾಶಿ. ಉಪಾಂತ—ಸಮೀಪ. ಘೂರ್ಣಿತ—ಕ್ಷೋಭೆಗೊಂಡ, ಅಲ್ಲೋಲಕಲ್ಲೋಲವಾದ. ಅರ್ಣವ—ಸಮುದ್ರ. ಅಕ್ಷೀಣ—ಕ್ಷೀಣಿಸದ, ಕಡಮೆಯಾಗದ.

೨೦. ಖೇಚರ—ವಿದ್ಯಾಧರ. ಪ್ರೋದ್ಭಾಸಿ—ಹೆಚ್ಚು ಪ್ರಕಾಶಮಾನ. ರುಂದ್ರ—ವಿಶಾಲ ವ್ಯಾಪಕ.

೨೧. ಪೊಡರ್—ಪ್ರಕಾಶಿಸು. ನಗ—ಪರ್ವತ. ಜೊನ್ನ—ಬೆಳ್ದಿಂಗಳು.

೨೨. ಒಜಿಕಿ—ಸ್ರವಿಸು. ನದಿಪು—ಆರಿಸು.

೨೩. ಸಾರ್ದು—ಸಮೀಪಿಸಿ. ಮರಕತ—ಪಚ್ಚೆ. ಒಡ್ಡುಂಗಲ್—ಚಾಚಿಕೊಂಡಿರುವ ಕಲ್ಲು. ಕಾರ್ದು—ತಿಂದು, ಕಡಿದು. ಕಲ್ಲನೆ ಕನಲು—ವಿಶೇಷವಾಗಿ ಕೋಪಿಸು. ಖಗನಗ—ಖೇಚರರು ವಾಸಿಸುವ ಪರ್ವತ, ವಿಜಯಾರ್ಧಪರ್ವತ.

೨೪. ಪರೆ—ಹರಡು. ಬೀಡೆವಟ್ಟ—ಸೀಳಾಗಿರುವ.

೨೫. ನಿರ್ಝರ ವನ—ಕಾಡಿನ ತೊರೆ, ಝರಿ. ಸನ್ನಿಪಾತ—ಇಳಿಯುವ, ಪ್ರಭವ—ಉತ್ಪನ್ನಗೊಂಡ.

೨೬. ಕಷಣ—ಉಜ್ಜುವಿಕೆ. ಕುಜ—ಮರ. ಕೂಜತ್—ಕೂಗು, ಧ್ವನಿ. ವಿಹಗ—ಪಕ್ಷಿ. ರುತ—ಧ್ವನಿ. ವಿಜಿಗೀಸು—ಜಯವನ್ನು ಬಯಸುವವ.

೨೭. ಮಸ್ತಿಷ್ಕ—ಮೆದುಳು. ಲಂಘನ—ನೆಗೆಯುವುದು. ಜವ—ವೇಗ. ಗಜರಿಪು—ಸಿಂಹ.

೨೮. ಸಮುದಗ್ರ—ಉನ್ನತವಾದ. ದ್ವಿರದ—ಎರಡು ದಂತವುಳ್ಳ, ಆನೆ.

೨೯. ಸ್ರೋತಸ್—ನದಿ. ಸುರುಚಿರ—ಮನೋಹರ. ಪುಷ್ಕರ—ಸರೋವರ. ಆತತ—ವಿಸ್ತಾರವಾದ. ಋಕ್ಷ—ಒಂದು ಜಾತಿಯ ಮರ. ವಂಶ—ಬಿದಿರುಮೆಳೆ. ಉತ್ಸಂಗ—ಪರ್ವತದ ಇಳಿಜಾರು ಪ್ರದೇಶ. ಮಂದರಪರ್ವತದ ವರ್ಣನೆ.

೩೦. ವಂಶ—ಬಿದಿರುಕೊಳಲು. ಪುಷ್ಕರ—ಸೊಂಡಿಲ ತುದಿ, ಚರ್ಮವಾದ್ಯದ ಮುಖಭಾಗ. ದ್ವಿಪಪತಿ—ಗಜರಾಜ. ಕರ್ಣತಾಳ—ತಾಳದಂತೆ ಅಗಲವಾದ ಕಿವಿ.

೩೧. ಕಂಡೂಯನ—ನವೆ, ತುರಿಕೆ. ಆಸವರಸ—ಮಕರಂದ. ಸಪ್ತಪರ್ಣಪಾದಪ—ಏಳೆಲೆ ಬಾಳೆ.

೩೨. ವನಚರಿ—ಕಿರಾತೆ. ವಿದ್ಯುಲ್ಲೇಖೆ—ಮಿಂಚು. ಉಲ್ಲಿಪ್ತ—(?). ಕಿಂಕಿರಾತ—ಕೆಂಪು ಗೋರಂಟಿ. ಶೋಣಮೇಘ—ಕೆಂಪು ಬಣ್ಣದ ಮೋಡ.

೩೩ ಗಳನಾದ—ಕಂಠಧ್ವನಿ. ಬಂಧೂಕಪುಷ್ಪ—ಬಂದುಗೆ—ಒಂದು ಜಾತಿಯ ಪುಷ್ಪ. ಚರ್ಚೆ—ಅನುಲೇಪನ. ಕೆಳರ್—ಕೋಪ. ಕೆಳರ್ಚ್—(?). ದರೀಗೃಹ—ಗುಹೆ.

೩೪. ಉದ್ಯತ್—ಹಾರಾಡುವ. ಕೀರ—ಗಿಳಿ. ಆತೋದ್ಯ—ಒಂದು ವಾದ್ಯ ವಿಶೇಷ. ಮಯೂರಿ—ಹೆಣ್ಣುನವಿಲು. ಲಟಹ—ಚೆಲುವು, ವಿಲಾಸ. ಮರುಳ್ಗಿತ್ತು—ಮೋಹಗೊಳಿಸಿತ್ತು. ಖಗಾದ್ರಿ—ವಿಜಯಾರ್ಧಪರ್ವತ.

೩೪ವ. ಭೃಂಗಾರ—ಚಿನ್ನದ ಕಳಶ. ಚೂಳಿಕೆ—ಶಿಖರ. ಬಾಯ್ಕೇಳಿಸು—ಅಜ್ಞೆಗೆ ಒಳಪಡಿಸು,

ಕಟಕ—ತಪ್ಪಲು. ಕಟಕ—ಸೈನ್ಯ. ಸ್ಥಪತಿ—ಶಿಲ್ಪಿ. ಅಚ್ಚಗ—ಆಶ್ಚರ್ಯ. ಪರಾಙ್ಮುಖ—ಹಿಮ್ಮೆಟ್ಟು. ಗೋಶೀರ್ಷ—ಚಂದನ ಮರ. ಮನದೆಗೊಳ್—ಮನಸ್ಸಿಗೆ ತಂದುಕೊಂಡು, ಇಷ್ಟಗೊಂಡು. ಗಳಿತಗರ್ವ—ಅಹಂಕಾರವನ್ನು ಕಳೆದುಕೊಂಡ, ಬಜಿಮಜಿ—ಉಡುಗೊರೆ. ವೈಕಕ್ಷಮಾಲೆ—ಹೂಮಾಲೆ. ಸೂಟ್—ಬಾರಿ. ಬಲವಂದು—ಪ್ರದಕ್ಷಿಣೆ ಬಂದು. ಮುಕುಳ—ಮೊಗ್ಗು.

೩೫. ಉಪೇತ—ಕೂಡಿದ. ಅನೂನ—ಕೊರತೆಯಿಲ್ಲದ. ಉತ್ತಂಸ—ಶ್ರೇಷ್ಠವಾದ. ಶಿಖಂಡ—ಮುಡಿ. ಮಸ್ತ—ತಲೆ.

೩೫ವ. ಸಿದ್ಧಶೇಷೆ—ಮಂತ್ರಾಕ್ಷತೆ. ಮಗುಟ್—ಹಿಂದಿರುಗು.

೩೬. ಅಲರ್ಗಣೆ—ಹೂಬಾಣ. ತುಱುಗೆಮೆಗಣ್—ದಟ್ಟವಾದ ಕೂದಲುಳ್ಳ ರೆಪ್ಪೆಯಿಂದ ಕೂಡಿದ ಕಣ್ಣು. ಅಸಿಯ—ತೆಳುವಾದ.

೩೭. ಅಗಟ್—ಕಂದಕ. ಅಬ್ಜಾಕೃತಿ—ಕಮಲದ ಆಕಾರ.

೩೮. ಸ್ಖಲಿತ—ತಡವರಿಸುವ, ನಡುಗುವ. ಲುಲಿತ—ಒಲೆದಾಡುವ. ಗ್ರೀವೆ—ಕೊರಳು.

೩೯. ಆಸವ—ಮಕರಂದ. ಲಂಪಟ—ಅತ್ಯಾಸಕ್ತಿಯುಳ್ಳ. ರಟನ—ತಿರುಗುವ. ಸೋವು—ಓಡಿಸು.

೪೦. ಆಗಿ—ಹೆದರು. ಪ್ರತಿಥ—ಪ್ರಸಿದ್ಧವಾದ. ಜಾತಾದರ—ಜನಿಸಿದ, ಹುಟ್ಟಿದ, ಆದರ.

## ದಶಮಾಶ್ವಾಸಂ

೧. ಮಹಿತ—ಗೌರವಾನ್ವಿತ. ಅಪಗತ ದುರಿತ—ಪಾಪವನ್ನು ಕಳೆದುಕೊಂಡವನು.

೧ವ. ಆಯತ್ತ—ಕೂಡಿದ. ನಾರಾಚ—ಬಾಣ. ಧೇನು—ಹಸು. ವಾರ್ತಾನಿವರ್ತನ—ಸುದ್ದಿಯ ನಿರ್ವಹಣೆ. ಪಱೆ—ಚರ್ಮವಾದ್ಯ, ತಮಟೆ. ದುಕೂಲ—ರೇಷ್ಮೆಬಟ್ಟೆ. ಪಟಕುಟಿ—ಡೇರೆ. ಪಾವುಗೆ—ಪಾದರಕ್ಷೆ. ಕೊಂತ—ಒಂದು ಬಗೆಯ ಆಯುಧ. ಸುರಿಗೆ—ಕಠಾರಿ. ಕಣೆ—ಬಾಣ. ಖೇಟಕ—ಗುರಾಣಿ. ಪಟಹ—ನಗಾರಿ. ಷಣ್ಣವತಿ—ತೊಂಬತ್ತಾರು.

೪. ತ್ರಿದಶನಿವಾಸ—ದೇವತೆಗಳು ವಾಸಿಸುವ ಸ್ಥಳ. ಸಂಸರಣ—ಸಂಸಾರ. ಪಾರ—ತೀರ, ದಡ.

೫. ಅಳವಿ—ಅಳವು—ಶಕ್ತಿ. ಅವಚಱ—ಬೇಸರ.

೭. ವ್ಯವಾಯ—ಅಡ್ಡಿ. ಒಸೆ—ಹಿಗ್ಗು.

೯. ಬರ್ದು—ಬದುಕು. ದೋರ್ದಂಡಷಂಡ—ಬಾಹುದಂಡದ ಸಮೂಹ.

೧೦. ದೋರ್ಬಲ—ಬಾಹುಬಲ. ಜಾವಲಿಸು—ಚಪಲತೆಯುಂಟುಮಾಡು. ಕದರ್ಥಿಸು—ಪೀಡಿಸು, ಕಾಡಿಸು.

೧೦.ವ ಅಗಟ್—ಕಂದಕ. ಪತ್ತುವಿಡು—ಬಿಡು.

೧೧. ನಿರ್ಘೃಣ—ನಿಷ್ಕರುಣಿ. ವಿಮುಕ್ತಾಸು—ಪ್ರಾಣ ಕಳೆದುಕೊಳ್ಳುವುದು.

೧೭. ಉಪಾರ್ಜಿಸು—ಸಂಪಾದಿಸು. ಮಸುಳು—ಕಳೆಗುಂದು.

೧೮. ಅಪತ್ಯ—ಮಗ. ಅರ್ಥಿ—ಯಾಚಕ.

೨೦. ಜೊನ್ನ—ಬೆಳ್ದಿಂಗಳು. ಕಾಳ—ಕತ್ತಲೆ. ಕಾಳಾಭೀಳ ವಕ್ತ್ರಾಂತ—ಯಮನ ಭಯಂಕರ ಕಟವಾಯಿ. ಅಜ್ಜಪಜ್ಜ—ಅಜ್ಜ ಮುತ್ತಜ್ಜ.

೨೧. ಪೆಱಗು—ಹಿಂದೆ. ಬಾರಿ—ಸರದಿ.

೨೩. ಎಂಗುಮೊ—ಎನ್ನುತ್ತಾನೆಯೇ. ಅಂತಕ—ಯಮ.

೨೪. ಆಯು—ಆಯಸ್ಸು. ನೆಱೆವಿನೆಗಂ—ಪೂರ್ಣವಾಗುವವರೆಗೆ. ಬಾಯಱು—ಬಾಯಿ ಸೋತುಹೋಗು.

೨೫. ಪಸುವಗ—ಹಸುಗೂಸು. ಮುತ್ತಾಣ್ಮ—ಮುದುಕ.

೨೬. ಪಂದೆ—ಹೇಡಿ. ನಾಣಿಲಿ—ನಾಚಿಕೆಯಿಲ್ಲದವ. ಅಟಂದು—ಮೇಲೆದ್ದು, ಮುತ್ತಿ.

೨೭. ಬಯ್ತ—ಸಿದ್ಧವಾಗಿಟ್ಟ. ಬಾಡು—ಮಾಂಸ. ಬಡ್ಡಿಸಿ—ಬಡಿಸಿ. ಆಚ್ಛಾದ್ಯ—ಮುಚ್ಚಿಟ್ಟ.

೨೮. ಪುಯ್ಯಲಿಡು—ಗೋಳಾಡು. ತಿಱಿಕೊಱಿಗೊಳ್—ಆಯ್ದುಕೊಳ್ಳು.

೨೯. ಪಟಹ—ಭೇರಿ. ರುತಿ—ಧ್ವನಿ.

೩೦. ಸಮುತ್ಥ—ಉದ್ಭವಿಸಿದ. ಪರಿಸ್ಫುರಿತ್—ಹೆಚ್ಚು ಪ್ರಕಾಶ. ಸಮಾವೃತಾದಿನೊವ ವಿಚಲಸ್ಯಂದಿ.—(?)

೩೧ವ. ವಿಲುಳಿತ—ಜಾರಿಬೀಳುವ. ಅಪಗತ—ಬಿಟ್ಟ. ಉತ್ತರೀಯ—ಮೇಲುಹೊದಿಕೆ. ಮನ್ಯು—ದುಃಖ.

೩೨. ಬೆಸ—ಕೆಲಸ. ಪೂಣ್—ಪ್ರತಿಜ್ಞೆ. ಸ್ಕೈಪು—ಪುಣ್ಯ. ಸಮನಿಸು—ಒದಗು.

೩೩. ಅಭ್ರವಜ್ರ—ಸಿಡಿಲು. ಅಭಿಘಾತ—ಹೊಡೆತ.

೩೪. ಉದ್ದೃಪ್ತ—ಅತಿಪೀಡಿತ. ಷಣ್ಣವತಿ—ತೊಂಬತ್ತಾರು.

೪೬. ಬಾಳ್—ಕತ್ತಿ. ಬಾಯ್ಕೇಳಿಸು—ವಶಪಡಿಸಿಕೊ.

೩೮. ಮಾರ್ಮಲೆ—ಎದುರುಬೀಳು.

೪೦. ಕತ್ತಿಗೆ—ಕೈಗತ್ತಿ. ಪಡೆಮಾತು—ಪ್ರತಿಮಾತು.

೪೧. ಶಿಖಿಶಿಖೆ—ಬೆಂಕಿಯ ಜ್ವಾಲೆ.

೪೪. ಧೂಮ್ರ—ಬೂದು, ಕಪ್ಪು.

೪೫. ದನ—ಕಾಳ್ಗಿಚ್ಚು. ಕೈಗಣ್ಮ—ಮಿತಿಮೀರು. ಪೊಣ್ಮ—ಹೊಮ್ಮು. ನದಿಪು—ನಂದಿಸು.

೪೮. ಅನೋಕಹ—ಮರ. ಅನೀಕ—ಸಮೂಹ.

೫೨.ವ ಸಿತಸರ್ಷಪ—ಬಿಳಿಯ ಸಾಸುವೆ. ತಪ್ತಾಯಃ ಕಟಾಹಪತಿತ ಲಾಜಃಪುಂಜದಂತೆ—ಕಾದ ಕಬ್ಬಿಣದ ಬಾಣಲೆಯಲ್ಲಿ ಬಿದ್ದ [illegible]

## ಏಕಾದಶಾಶ್ವಾಸಂ

೧. ಮಹಿತ—ಮಹಿಮೆಯನ್ನುಳ್ಳ. ಮಾಣ್ಗೆ—ತ್ಯಜಿಸು.

೨. ತಾಟಿತ—ತಾಗು, ಬಡಿ. ತಳರ್—ಚಲಿಸು, ನಡೆ. ಅಸ್ತ—ನಿವಾರಿಸು. ಮಿಳಿರ್—ಚಲಿಸು.

೨.ವ ಸಂವೇಗ ನಿರ್ವೇಗ—ವೈರಾಗ್ಯದಲ್ಲಿ ಉತ್ಸಾಹ. ವ್ಯತಿಕರ—ವೃತ್ತಾಂತ.

೩.ವ ವಪುಷ್ಕಾಂತ—ಮನೋಹರವಾದ ಶರೀರವುಳ್ಳವನ. ಅನಾಮಯ—ರೋಗವಿಲ್ಲದ. ಪ್ರಗಲ್ಭ—ಪ್ರೌಢ. ಅವಹಿತ—ನಿಯೋಜಿಸಿದ. ಅಂತರಾಯ—ಮೋಕ್ಷವನ್ನು ಬಯಸಿ ಮುಂದುವರಿಯುವವರಿಗೆ ನಡುವೆ ಉಂಟಾಗುವ ಅಡ್ಡಿ.

೪. ವೇತ್ರಾಸನ—ಬೆತ್ತದ ಪೀಠ. ಝಲ್ಲರಿ—ಒಂದು ಚರ್ಮವಾದ್ಯ.

೫. ವೈಶಾಖಸ್ಥಾನ—ಒಂದು ನಿರ್ದಿಷ್ಟ ಅಂತರದಲ್ಲಿ ಕಾಲುಗಳನ್ನಿಟ್ಟು ನಿಲ್ಲುವ ಒಂದು ರೀತಿ.

೫.ವ ಮುದ್ಗ—ಹೆಸರುಕಾಳು. ಕಪೋತ—ಪಾರಿವಾಳ, ಬೂದುಬಣ್ಣ. ಉದಧಿ—ಸಮುದ್ರ. ಆವೇಷ್ಟಿತ—ಆವರಿಸಿಕೊಂಡಿರುವುದು.

೬. ಕರ್ಣಿಕೆ—ಕಮಲದ ಮಧ್ಯಭಾಗ ಪೊದಟ್—ವ್ಯಾಪಿಸು, ಹಬ್ಬು. ವ್ಯಾಭಾಸಿ—ಪ್ರಕಾಶಮಾನವಾದ, ಬೆಳಗುವ.

೭. ಚಿತ್ರಾವನಿ—ವಿಸ್ಮಯಕರವಾದ ಭೂಮಿ. ಋತುವಿಮಾನ—ಅರುವತ್ತುಮೂರು ಇಂದ್ರಕಗಳಲ್ಲಿ ಮೊದಲನೆಯದು. ಪೆಂಪು—ಹಿರಿಮೆ.

೭.ವ ಖರ—ಒರಟು, ಗಟ್ಟಿ. ಪಲ್ಯ—(ಜೈನ) ಒಂದು ಕಾಲಮಾನ.

೮. ನಿಗೋದ—ನರಕ.

೮.ವ ಸೂಟಿ—ಕ್ರಮ, ಸರದಿ. ಪೊಂದು—ಮರಣಹೊಂದು. ಖರ—ಕತ್ತೆ. ಕಂಭ—ಒಂಟೆ. ಉಲೂಕ—ಗೂಬೆ. ಸೃಗಾಲ—ನರಿ. ಶಾರ್ದೂಲ—ಹುಲಿ. ಸೂಕರ—ಹಂದಿ. ಅನೃತ—ಸುಳ್ಳು.

೯. ಕೈದು—ಆಯುಧ. ಮುಸುಕು—ಮುತ್ತು, ಆವರಿಸು.

೧೧.ವ ಇಕ್ಷು—ಕಬ್ಬು. ಪಿಟ್ಟ—ಹಿಂಡು. ಬರ್ದಿಸು—ಸಾಯಿಸು. ಕರಮೆ—ಹೆಚ್ಚಾಗಿ ಪೆಡತಲೆ—ತಲೆಯ ಹಿಂಭಾಗ. ಮಿಸಿಸು—ಮೀಯಿಸು, ಸ್ನಾನಮಾಡಿಸು. ಚಗಟಿಗೆಳೆ—(?) ಉಡಿ—ಮುರಿ. ಅಳ್ಳೆ—ಹೊಟ್ಟೆಯ ಒಂದು ಪಕ್ಕ. ಕುತ್ತು—ತಿವಿ. ಬರಿ—ಪಕ್ಕ. ಗೊಂಕೆ—ಕೊರಳು. ಚಾತಬೊಕ್ಕಣಂಗಟ್ಟು—(?). ಕರ್ಚರೆ—ದೇಹದ ಒಂದು ಭಾಗ. ಪೋಳೆ—ಸೀಳು ಮಾಡು. ಪುಡುಕುನೀರು—ಕುದಿಯುವ ನೀರು. ಪುಟಪಾಕ-ಲೋಹ ಮೊದಲಾದುವುಗಳನ್ನು ಸುಡುವ ಒಂದು ಕ್ರಮ. ಮಡು-(?) ಪುಗ್ಗಿಡು—ಕಾಯಿಸು, ಕುದಿಸು (?) ಗುಗ್ಗುಳ—ಒಂದು ಬಗೆಯ ಧೂಪದ ವಸ್ತು,

ಲೋಬಾನ. ತಪ್ತಾಯಃ ಪುತ್ರಿಕಾಲಿಂಗನ—ಕಾದ ಕಬ್ಬಿಣದ ಪ್ರತಿಮೆಯನ್ನು ಅಪ್ಪುವಿಕೆ. ಕೋಳ್ಪಟ್ಟಣ— (?)
ಕ್ರಕಚ—ಗರಗಸ. ವಿದಾರಣ—ಸೀಳುವುದು. ಕುರ್ಕುಟ—ಕುಕ್ಕುಟ—ಕೋಳಿ. ತರ್ಜನ—ಹೀಯಾಳಿಕೆ. ಆಸಹಡಿಸು—ಆತುರಪಡು. ಅಟವಿಟ—ಕಪಟಿಯಾದ ಜಾರ.

೧೨. ತವು—ಮುಗಿಸು. ಸಣ್ಣಿಗೆ—ಸಾಣೆಕಲ್ಲು. ಸಣ್ಣಿಸು—ಸಣ್ಣಿಗೆ ತುರಿಯುವುದು.

೧೪.ವ ಅಜಿಕೆ—ಪ್ರಸಿದ್ಧ. ಉಪಲಕ್ಷಿತ—ಗುರುತುಮಾಡಿದ.

೧೬. ಪದ—ಹದ. ಪಸವು—ಬಯಕೆ.

೧೭. ಆತೋದ್ಯ—ಒಂದು ಬಗೆಯ ವಾದ್ಯ. ಆವಸಥ—ವಾಸಸ್ಥಾನ. ಅನೋಕಹ—ಮರ.

೧೯. ಪಜ್ಜಳಿಪ—ಪ್ರಕಾಶಿಸುವ. ವಾಸರ—ದಿವಸ.

೨೦. ವಿಚಳತ್—ಚಲಿಸು. ಅರ್ಣವ—ಸಮುದ್ರ.

೨೧. ಕುಲಭೃತ್—ಕುಲಪರ್ವತ.

೨೨. ತತಿ—ಸಮೂಹ. ದ್ಯುತಿ—ಪ್ರಕಾಶ.

೨೪. ಹರಿನೀಲ—ಇಂದ್ರನೀಲ. ರೂಪ್ಯ—ಬೆಳ್ಳಿ. ಉತ್ಕರ—ಸಮೂಹ. ಪಿಶಂಗ—ಹೊಂಬಣ್ಣ. ತೀವು—ತುಂಬು.

೨೬. ಆಭ—ಸಮಾನ. ಮೇಚಕ—ಕಡುನೀಲಿಬಣ್ಣ. ಪಾಂಡು—ಬಿಳುಪು. ಸಂವಾಸಿತ್ವ—ಜೊತೆಯಲ್ಲಿ ಇರುವಿಕೆ. ವೀಚ—(?)

೨೭. ಭೂಭೃತ್—ಪರ್ವತ ಸ್ಫುರತ್—ಹೊಳೆಯುವ, ವಿಸ್ತೃತ. ಪ್ರೋಲಸತ್—ಹೆಚ್ಚು ಪ್ರಕಾಶಮಾನವಾದ.

೨೮. ಕನತ್—ಹೊಳೆಯುತ್ತಿರುವ. ಕನಕಾಬ್ಜ—ಚಿನ್ನದ ತಾವರೆ. ಕರ್ಣಿಕೆ—ಕಮಲದ ಮಧ್ಯಭಾಗ. ಚೂಳಿಕೆ—ಶಿಖರ.

೩೦. ಅಭಿಷವಣ—ಮಂಗಳಸ್ನಾನ. ಅಮ್ಲಾನ—(?) ಕಪೋಲ—ಕೆನ್ನೆ.

೩೧. ಉತ್ಕರ—ಸಮೂಹ. ಪಸದನ—ಆಭರಣ. ಮಂಡನ—ಅಲಂಕಾರ.

೩೩. ಅಣಂ—ಸ್ವಲ್ಪವೂ. ನೇರ್ಗಿಡಿದು—ಸ್ವಲ್ಪ ಕಡಮೆ. ಮಗುಟ್ಚು—ಮಗುಚು, ತಿರುವಿಹಾಕು.

೩೩.ವ ಈಷತ್ ಪ್ರಾಗ್ಭಾರ—ಅನುತ್ತರ ವಿಮಾನಗಳ ಮೇಲುಗಡೆ ಇರುವ ಸಿದ್ಧಕ್ಷೇತ್ರ. ಇದರ ಮಧ್ಯಭಾಗದಲ್ಲಿ ಶುದ್ಧ ಸ್ಫಟಿಕಮಯವಾದ ಸಿದ್ಧಶಿಲೆಯಿದೆ.

೩೪. ತ್ರಿದಶ ಕ್ಷ್ಮಾಭೃತ್—(?) ವಿದಿತ—ಪ್ರಸಿದ್ಧ.

೩೮. ತ್ರಸ—ಚಲಿಸುವ. ಸ್ಥಾವರ—ಸ್ಥಿರವಾದುದು.

೩೯. ಸಂಸೃತಿ—ಸಂಸಾರ. ತಿರಿ—ಸುತ್ತು, ಅಲೆ. ಬೇವಸ—ಆಯಾಸ, ವ್ಯಥೆ.

೪೦. ಉಪಚಯ—ಸಮೂಹ. ನೃ—ನರ.

೪೬. ಪುದು—ಸಂಬಂಧಿಸಿದುದು. ನೆಱಪು—ಪೂರೈಸು.

೪೪. ಗಾವಿಲಿಕೆ—ದಡ್ಡತನ.

೪೫. ವಿಯತ್ತಲ—ಆಕಾಶ.

೪೬. ಅಣಿಮಾ—ಸೂಕ್ಷ್ಮತ್ವ, ಅಷ್ಟಸಿದ್ಧಿಗಳಲ್ಲಿ ಒಂದು.

೪೭. ತಗುಳ್—ಅನುಸರಿಸು.

೪೮. ಆಸನ್ನಭವ್ಯ—ಜೈನತತ್ತ್ವೋಪದೇಶದಿಂದ ಮನಃಪರಿಪಾಕವನ್ನು ಹೊಂದುವವನು. ವಿಗಳತ್—ಸುರಿಯುವ. ಸಂಛನ್ನ—ಆವರಿಸಲ್ಪಟ್ಟ, ಮುಚ್ಚಲ್ಪಟ್ಟ. ಕ್ಷ್ಮಾಪಾಲ—ರಾಜ. ಪ್ರಾಜ್ಯ—ಶ್ರೇಷ್ಠ. ವಿಗತ—ಬಿಟ್ಟ, ಕಳೆದುಹೋದ.

## ದ್ವಾದಶಾಶ್ವಾಸಂ

೧. ನೆಗಟ್ಚು—ಮಾಡು. ಒಸೆ—ಒಲಿ, ಮೆಚ್ಚು.

೧.ವ ಪಾಥೇಯ—ಪ್ರಯಾಣಕ್ಕೆ ಬೇಕಾದ ಉಪಕರಣ. ಅಧಿಗಮ—ಅಭ್ಯಾಸ, ಜ್ಞಾನ, ಕಲಿಕೆ. ವ್ಯಪೇತ—ದೂರಮಾಡಿದ. ಉಪಾರ್ಜನೆ—ಉಪಾರ್ಜನ—ಸಂಪಾದನೆ, ಆರಾಧನೆ. ನಿಸ್ತಾರ—ಆಧಾರವಿಲ್ಲದ. ಕಾಸ್ತ್ಯ—ಬಡವ, ನಿಕೃಷ್ಟ. ಅಪ್ಪೈಸು—ಒಪ್ಪಿಸು, ನೇಮಿಸು. ನಿಶ್ಶಲ್ಯಂಗೆಯ್ದು—ತೊಂದರೆ ನಿವಾರಣೆ ಮಾಡಿಕೊಂಡು. ಅಪವರ್ಗಮಾರ್ಗ—ಮೋಕ್ಷಮಾರ್ಗ. ನಿಗಳ—ಸಂಕೋಲೆ. ಬೆಂಕೊಂಡು—ಬೆನ್ನಟ್ಟಿಬಂದು.

೨. ಪ್ರಾವೃಟ್ಕಾಲ—ಮಳೆಗಾಲ. ಓಘ—ಸಮೂಹ, ರಭಸ. ಅವಷ್ಟಂಭ—ಆಶ್ರಯ.

೩. ಹಿಮಸಮಯ—ಚಳಿಗಾಲ. ಬಕ್ಕಂಬಯಲು—ಬಟ್ಟಬಯಲು. ಯಮನಿಧಿ—ಮೃತ್ಯುಸ್ಥಾನ. ಬೆಳ್ವಾಸ—ಮೊಣಕಾಲು ಮುಳುಗುವವರೆಗೆ ನೀರಿನಲ್ಲಿ ನಿಂತು ತಪಸ್ಸು ಮಾಡುವುದು.

೪. ಅಟ್ಟು—ಸುಡು, ದಹಿಸು. ಕಲ್‌ನೆಲೆ—ಬೇಸಿಗೆಯಲ್ಲಿ ಕಲ್ಲಿನಮೇಲೆ ನಿಂತು ಮಾಡುವ ತಪಸ್ಸು.

೪.ವ ಅಭ್ರಂಕಷ—ಮೋಡಗಳನ್ನು ಉಜ್ಜುವಂತಿರುವ. ಅಭ್ರತಿಲಪ—(?) ನಿರ್ವರ್ತಿಸು—ಪೂರೈಸು. ಸಂದೋಹ—ಸಮೂಹ. ಸಮೆಯಿಸು.—ಮಾಡಿಸು.

೭. ಆದ್ಯೋಪಾದ್ಯ—ಮೊದಲನೆಯ ಮತ್ತು ಎರಡನೆಯ. ಶ್ರೇಯಾಂಶ—೧೧ನೆಯ ತೀರ್ಥಂಕರ.

೮. ನೋಂತು—ವ್ರತಮಾಡಿ. ತಾಳು—ಬಳಲು. ಕಟಕ—ಸೈನ್ಯ, ಪಾಳೆಯ.

೧೧. ರುಚಿ—ಆಸಕ್ತಿ. ಅಪ್ಪುಕೆಯ್—ಆಶ್ರಯಿಸು, ಅಂಗೀಕರಿಸು. ಆವರ್ಜಿಸು—ಸಂಪಾದಿಸು. ಒಳ್ಪು—ಒಳ್ಳೆಯ ಗುಣ.

೧೨. ಮಹಿಚಕ್ರ—ಭೂಮಂಡಲ. ಚೋದ್ಯ—ಆಶ್ಚರ್ಯ. ಆರ್ತು—ತೃಪ್ತಿಹೊಂದಿ, ಮನದಣಿದು.

೧೪. ಅನ್ವಯ—ವಂಶ. ಭೂಷಾ—ಭೂಷಣ, ಅಲಂಕಾರ. ಉದ್ದಾನಿ—ಅತಿಶಯ.

೧೫. ಮಾರಾಂತ—ಎದುರುಬಿದ್ದ. ಉದ್ವೃತ್ತ—ಕೊಬ್ಬಿದ, ಸೊಕ್ಕಿದ. ಅರಾತಿ—ಶತ್ರು. ದ್ಯುಮಣಿ—ಸೂರ್ಯ. ಪ್ರೀಣನ—ಸಂತೋಷಗೊಳಿಸುವಿಕೆ. ಗ್ರಾಮಣಿ—ಶ್ರೇಷ್ಠ, ಪ್ರಮುಖ.

೧೬. ವ್ರಾತ—ಸಮೂಹ. ಗೇಹ—ಭವನ. ಪತ್ತಿಸು—ತೊಡಗಿಸು.

೧೭. ಪಳಂಚು—ಪ್ರಕಾಶಿಸು. ಅರ್ತು—ಸಮರ್ಥವಾಗಿ. ಕೂರ್ತು—ಪ್ರೀತಿಯಿಂದ.

೧೮. ಪೊಗಸು—ಮುಂಜಾವ. ಪರೆ—ಸೂರ್ಯೋದಯ (?). ಪೊತ್ತರೆ—ಹೊತ್ತಾರೆ. ನನ್ನಿ—ಸತ್ಯ. ಶಾಸನ—ಆಜ್ಞೆ.

೧೯. ಪದೆ—ಪ್ರೀತಿ. ಅರ್ಥಿ—ಬೇಡುವವ. ತಗುಳ್ಚು—ಸೇರಿಸು. ಆದಂ—ವಿಶೇಷವಾಗಿ. ಬಯ್—ಮುಚ್ಚಿಡು.

೨೦. ಪಡೆವಳ್ಳ—ಸೇನಾಪತಿ. ಅಣ್ಣಿಗದೇವ—ಅತ್ತಿಮಬ್ಬೆಯ ಮಗ. ನಿಧಾನ—ನಿಧಿ.

೨೧. ಪದ—ಹದ, ಒಳ್ಳೆಯ ಕಾಲ. ಪದುಳಿದ—ಕ್ಷೇಮದಿಂದಿರುವ. ಪದಸ್ಥ—ಪದವಿ ಹೊಂದಿದವ. ಶೌಚ—ಸ್ವಚ್ಛತೆ. ಮನದೆಗೊಳ್—ಮನಗೊಳ್, ಮನಸ್ಸಿಗೆ ಬರು, ಇಷ್ಟವಾಗು. ಆಹವಮಲ್ಲನಾದ ತೈಲಪನಿಗೆ ಅಣ್ಣಿಗದೇವ ಪ್ರೀತಿಪಾತ್ರನಾಗಿದ್ದನೆಂಬ ಚಿತ್ರಣ.

೨೪. ಮಾಂತನ—ದೊಡ್ಡಸ್ತಿಕೆ, ಹಿರಿಮೆ. ಅಣ್ಣಿಗದೇವನ ತಂದೆ ನಾಗದೇವ, ಎಂದರೆ ಅತ್ತಿಮಬ್ಬೆಯ ಪತಿ.

೨೫. ಅದಿರದ—ಹೆದರದ. ಉದಿತೋದಿತ—ಪ್ರವರ್ಧಮಾನಕ್ಕೆ ಬರುವ. ಶುಭವೃತ್ತ—ಒಳ್ಳೆಯ ನಡತೆಯುಳ್ಳವ.

೨೬. ದಿನಕರಸುತ—ಕರ್ಣ. ಎಸು—ಬಾಣಪ್ರಯೋಗ. ಕಂಪರಿಸು—ಕೆತ್ತು, ಕೊರೆ. ನನ್ನಿನಾರಾಯಣ—ಅಣ್ಣಿಗದೇವನ ಬಿರುದು.

೩೧. ವೈಯಾವೃತ್ಯ—ಮುನಿಗಳ ಸಂಕಟ ರೋಗಾದಿಗಳ ನಿವಾರಣೆಗೆ ಅವರ ಶುಶ್ರೂಷೆ ಮಾಡುವುದು. ದೋಷಾಪಾಯತಿ—ದೋಷಗಳು ಮತ್ತು ವಿಘ್ನಗಳು.
ಉತ್ಸರ್ಗ—ಐದು ವಿಧ ಸಮಿತಿಗಳಲ್ಲಿ ಒಂದು, ಆರು ವಿಧ ಅಭ್ಯಂತರ ತಪಗಳಲ್ಲಿ ಒಂದು.

೩೨. ಪೆಜಿವುಳಿ—ಅನ್ಯತ್ರ ಇರುವುದು.

೩೫. ಉಪಪತ್ತಿ—ಒಂದು ಸಿದ್ಧಾಂತದ ಸಮರ್ಥನೆಗಾಗಿ ಮಾಡುವ ತರ್ಕ. ಇನಿತುವರಂ—ಇಲ್ಲಿಯವರೆಗೆ. ಪ್ರಬೋಧ—ಪಾಂಡಿತ್ಯ, ಜ್ಞಾನ.

೪೨. ರಾಷ್ಟ್ರಕೂಟರ ಆಶ್ರಯದಲ್ಲಿ ಪಂಪ ಪೊನ್ನರು, ಕಲ್ಯಾಣ ಚಾಳುಕ್ಯರ ಆಶ್ರಯದಲ್ಲಿ ತಾನೂ (ರನ್ನ) ಇದ್ದರೆಂಬ ವಿಚಾರ.

೪೩. 'ಉಭಯ ವ್ಯಾಕರಣ ಪರಿಣತಂ' ಎಂದಿರುವುದರಿಂದ ರನ್ನಕವಿಗೆ ವ್ಯಾಕರಣ ರಚನೆಯಲ್ಲಿಯೂ ಪ್ರವೇಶವಿರಬೇಕೆಂದು ತೋರುವುದು.

೪೪. ಇದರಲ್ಲಿ 'ಪರಶುರಾಮಚರಿತ', 'ಚಕ್ರೇಶ್ವರ ಚರಿತ', 'ಅಜಿತತೀರ್ಥೇಶ್ವರ ಚರಿತ'— ಇವು ಕವಿಯ ಕೃತಿಗಳೆಂದು ಹೇಳಲಾಗಿದೆ. ಇವು 'ರತ್ನತ್ರಯ'ದಂತೆ ಪ್ರಸಿದ್ಧವಾದವೆಂದು ಬೇರೆ ಹೇಳಿದ್ದಾನೆ. ಇದರಲ್ಲಿ 'ಗದಾಯುದ್ಧ'ದ ಉಲ್ಲೇಖವಿಲ್ಲ. ವಾಸ್ತವವಾಗಿ 'ಗದಾಯುದ್ಧ' ತೈಲಪನ ಮಗನಾದ ಸತ್ಯಾಶ್ರಯ ಇರಿವಬೆಡಂಗನ ಕಾಲದಲ್ಲಿ ರಚಿತವಾದುದರಿಂದ ಇಲ್ಲಿ ಸೇರಿಸುವ ಅಗತ್ಯವಿಲ್ಲ. 'ಅಜಿತಪುರಾಣ'ದಲ್ಲಿ ಹೀಗೆ ಹೇಳುವಾಗ ಇನ್ನೂ 'ಗದಾಯುದ್ಧ'ರಚಿತವಾಗಿರಲಿಲ್ಲ ಎಂಬುದನ್ನು ಗಮನಿಸಬೇಕು. 'ಪರಶುರಾಮ ಚರಿತ' 'ಸಮರ ಪರಶುರಾಮ' ಬಿರುದಾಂಕಿತ ಚಾವುಂಡರಾಯನ ಪರವಾದ ಕೃತಿ. 'ಚಕ್ರೇಶ್ವರ ಚರಿತ' ರನ್ನನಿಗೆ 'ಕವಿ ಚಕ್ರವರ್ತಿ' ಬಿರುದು ಕೊಟ್ಟ ತೈಲಪನನ್ನು ಕುರಿತದ್ದಾಗಿರಬೇಕು. 'ಅಜಿತಪುರಾಣ' ಅತ್ತಿಮಬ್ಬೆ ಪರವಾದ ಕೃತಿ. ಹೀಗಾಗಿ, ರನ್ನ ತನ್ನ ಆಶ್ರಯದಾತರಾದ ಚಾವುಂಡರಾಯ, ತೈಲಪ, ಅತ್ತಿಮಬ್ಬೆ ಮತ್ತು ಸತ್ಯಾಶ್ರಯರನ್ನು ಕುರಿತು ಕ್ರಮವಾಗಿ 'ಪರಶುರಾಮ ಚರಿತ', 'ಚಕ್ರೇಶ್ವರ ಚರಿತ' 'ಅಜಿತಪುರಾಣ' ಮತ್ತು 'ಗದಾಯುದ್ಧ' ಕೃತಿಗಳನ್ನೇ ರಚಿಸಿರಬೇಕೆನಿಸುತ್ತದೆ (ವಿವರವಾದ ಚರ್ಚೆಗೆ ನೋಡಿ; ಪ್ರಸ್ತಾವನೆ, ರನ್ನವಿರಚಿತ ಸಾಹಸಭೀಮ ವಿಜಯಂ—ಸಂ. ಬಿ. ಎಸ್. ಸಣ್ಣಯ್ಯ ಮತ್ತು ರಾಮೇಗೌಡ, ಪು. XVI—XIX).

೪೫–೪೮. ಈ ಪದ್ಯಗಳಲ್ಲಿ ರನ್ನನ ಜೀವನ ಚರಿತ್ರೆಗೆ ಸಂಬಂಧಿಸಿದ ಕೆಲವು ವಿವರಗಳಿವೆ. ಘಟಪ್ರಭಾ ಮತ್ತು ಕೃಷ್ಣಾನದಿಗಳು ಹರಿಯುವಲ್ಲಿ ತದ್ದವಾಡಿಗೆ ದಕ್ಷಿಣಕ್ಕೂ ತೊರಗಲೆಗೆ ಉತ್ತರಕ್ಕೂ ಬೆಳುಗಲಿ ದೇಶವಿದೆ. ಈ ಬೆಳುಗಲಿ ೫೦೦ರಲ್ಲಿ ಜಂಬುಖಂಡಿ ಪ್ರಾಂತ್ಯವಿದೆ. ಇದಕ್ಕೆ ತಿಲಕಪ್ರಾಯವಾಗಿರುವ ಮುದುವೊಳಲ್ ಎಂಬುದೇ ರನ್ನನ ಜನ್ಮಸ್ಥಳ. ಈಗಿನ ಮುಧೋಳ್ ಎಂಬುದೇ ಈ ಗ್ರಾಮ. ತಾಯಿ-ಅತ್ತಿಮಬ್ಬೆ, ತಂದೆ-ಜಿನವಲ್ಲಭ; ಅಣ್ಣಂದಿರು—ರೇಚಣ ಮತ್ತು ಮಾರಮಯ್ಯ. ಕೆಲವರು 'ದೃಢಬಾಹು' ಹೆಸರನ್ನು ಸೂಚಿಸಿ ಮೂವರು ಸೋದರರೆಂದು ಹೇಳಿದ್ದು ಸರಿಯಲ್ಲ. 'ದೃಢಬಾಹು' ವಿಶೇಷಣವಷ್ಟೇ, ಹೆಸರಲ್ಲ. ಕವಿ ತಾನು ಬಳೆಗಾರರ ಕುಲದಲ್ಲಿ ಹುಟ್ಟಿದವನೆಂದು ಹೇಳಿಕೊಂಡಿದ್ದಾನೆ. ಆದರೆ ಕೆಲವರು 'ಈ ಬಳೆಗಾರಕುಲ'ವನ್ನು ಜೈನ ಪರಿಭಾಷೆಯ 'ಬಲತ್ಕಾರಗಣ'ದಿಂದ ಸಿದ್ಧಿಸಲು ಹೊರಟದ್ದು ಸರಿಯಲ್ಲ. (ನೋಡಿ : ಪೂರ್ವೋಕ್ತ ಕೃತಿ, ಪು. XI—XII). ಅಜಿಕೆಯ—ಪ್ರಸಿದ್ಧವಾದ. ಗಟ್ಟಗೆ—ಘಟಪ್ರಭಾ. ಪೆರ್ದೊಱೆ—ಕೃಷ್ಣಾನದಿ. ವಣಕ್ಕುಳ—ವೈಶ್ಯಕುಲ.

೪೯. ರನ್ನ ತಾನು ಹುಟ್ಟಿದ್ದು ಸೌಮ್ಯ ಸಂವತ್ಸರದಲ್ಲಿ ಎಂದು ಹೇಳಿಕೊಂಡಿದ್ದಾನೆ. ಇದು ೯೪೯ ಆಗುತ್ತದೆ. ರನ್ನ ಹುಟ್ಟಿದ್ದು ಕ್ರಿ.ಶ. ೯೪೯ ಎಂಬುದು ಖಚಿತ.

೫೦. ಅಜಿತಸೇನಾಚಾರ್ಯ—ಗಂಗರಾಜರ ಗುರುಗಳಾದ ಇವರು ರನ್ನನ ಗುರುಗಳೂ ಆಗಿದ್ದರು. ಚಾವುಂಡರಾಯ—ಗಂಗಮಂತ್ರಿ, ರನ್ನನ ಮೊದಲ ಆಶ್ರಯದಾತ.

೫೩. ರನ್ನನಿಗೆ ಜಕ್ಕಿ ಮತ್ತು ಶಾಂತಿ ಎಂಬ ಇಬ್ಬರು ಹೆಂಡತಿಯರಿದ್ದರು.

೫೪-೫೫. ರನ್ನನಿಗೆ ರಾಯ ಮತ್ತು ಅತ್ತಿಮಬ್ಬೆ ಎಂಬ ಇಬ್ಬರು ಮಕ್ಕಳು. ಚಾವುಂಡರಾಯ ಮತ್ತು ಅತ್ತಿಮಬ್ಬೆಯರ ಹೆಸರುಗಳನ್ನು ಕವಿ ತನ್ನ ಮಕ್ಕಳಿಗೆ ಇಡುವುದರ ಮೂಲಕ ಅವರಿಗೆ ಗೌರವ ತೋರಿಸಿದ್ದಾನೆ.

೫೬. ಇದರಲ್ಲಿ 'ಅಜಿತಪುರಾಣ'ವನ್ನು ಪ್ರಕಟ ಮಾಡಿದ ಕಾಲವನ್ನು ಹೇಳಲಾಗಿದೆ. ಇದರ ಪ್ರಕಾರ ಶಕ ೯೧೫ನೆಯ ವಿಜಯ ಸಂವತ್ಸರ ಕಾರ್ತಿಕಮಾಸ ಸೋಮವಾರವಾಗುವುದು. ಇದು ಕ್ರಿ. ಶ. ೯೯೩ಕ್ಕೆ ಸರಿಹೊಂದುತ್ತದೆ. ಆದ್ದರಿಂದ 'ಅಜಿತಪುರಾಣ' ರಚನೆಯಾದ ಕಾಲವನ್ನು ಕ್ರಿ.ಶ. ೯೯೩ ಎಂದು ಖಚಿತಪಡಿಸಿಕೊಳ್ಳಬಹುದು.

# ಪದ್ಯಗಳ ಅಕಾರಾದಿ

[ಇಲ್ಲಿನ ಸಂಖ್ಯೆಗಳು ಆಶ್ವಾಸ ಮತ್ತು ಪದ್ಯವನ್ನು ಸೂಚಿಸುತ್ತವೆ.]

*

---

# ಕೆಲವು ಉತ್ತಮ ಗ್ರಂಥಗಳು



ರನ್ನನ ಅಜಿತ ತೀರ್ಥಕರ ಪುರಾಣಂ / ರೂ. 30